

# ಕಲಾರಚನೆಯಲ್ಲೊಬ್ಬ ಸಂಶೋಧಕ ದಿವಾಕರ ಶೆಟ್ಟಿ

ಮರದ ಹಾಳೆಗಳನ್ನು ಮಾಧ್ಯಮವಾಗಿರಿಸಿಕೊಂಡು ಒಂದೊಂದರಲ್ಲೂ ಹೊಸತನ, ಹೊಸ ಅನ್ವೇಷಣೆ ಕೈಗೊಂಡಿರುವ, ಒಂದು ಕಾಲದಲ್ಲಿ 'ಮೆಟಲ್ ಮ್ಯಾನ್ ಆಫ್ ಇಂಡಿಯಾ' ಎಂದೇ ಪ್ರಸಿದ್ಧಿ ಪಡೆದಿರುವ ಮುಂಬಯಿಯ ಯುವ ಚಿತ್ರಕಲಾವಿದ ದಿವಾಕರ ಶೆಟ್ಟಿ ಇಂದು ಅಂತಾರಾಷ್ಟ್ರೀಯವಾಗಿ ಚಿರಪರಿಚಿತರು. ಇವರ ಅಶ್ವ ಸರಣಿ, ಹಂಸ, ಸೂರ್ಯ, ಕಾಮಧೇನು, ಗಣಪತಿ ಸರಣಿ ಮುಂತಾದ ಕಲಾ ಸೃಷ್ಟಿಗಳು ಎಂಥವರನ್ನೂ ಚಕಿತಗೊಳಿಸಬಹುದಾಗಿವೆ. ಬಣ್ಣಗಳಲ್ಲೂ ಅಪ್ರತಿಮ ಹೊಂದಾಣಿಕೆಯನ್ನು ಕಾಯ್ದುಕೊಳ್ಳುವ ದಿವಾಕರ ಶೆಟ್ಟಿಯವರ ಅಶ್ವ ಸರಣಿಯ ಚಿತ್ರಗಳಂತೂ ದೇಶ ವಿದೇಶಗಳ ಸುಪ್ರಸಿದ್ಧರ ಮನೆ, ಕಛೇರಿಗಳ ಗೋಡೆಯನ್ನು ಅಲಂಕರಿಸಿವೆ. 25 ವರ್ಷಗಳ ಹಿಂದೆ ಉಡುಪಿಯಿಂದ ಮುಂಬಯಿ ಮಹಾನಗರಕ್ಕೆ ಕಾಲಿಟ್ಟ ದಿವಾಕರ ಶೆಟ್ಟಿ ಸ್ವಪ್ರಯತ್ನದಿಂದಲೇ ಮೇಲೇರುತ್ತ ಬಂದವರು.

*ಲೇಖನ : ಶ್ರೀನಿವಾಸ ಜೋಕಟ್ಟೆ*
Gorai Suyog, Flat No. 201, Plot No. 91, Gorai-2nd
Off. Gorai Link Road, Borivilli (W), Mumbai - 400 092.



*ಹಂಸ ಸರಣಿ*



*ಸಂಕೀರ್ಣ*



*ಹಂಸ ಸರಣಿ*



*ಅಶ್ವ ಸರಣಿ*

# ಹೊಸತು

ನೆಮ್ಮದಿಯ ನಾಳೆ ನಮ್ಮದು


## ಒಳಗೇನಿದೆ ...




ಚಿತ್ರಗಳು : ಮೋನಪ್ಪ, ಶ್ರೀಹರಿ, ರಾಂಚಂದ್ರ ಕೊಪ್ಪಲು, ಎನ್. ಆರ್. ಬೊಮ್ನಳ್ಳಿ, ಕೆದಿಲಾಯ, ಜಿ. ಎಂ. ಬೊಮ್ನಳ್ಳಿ

ಮುಖಚಿತ್ರ - ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

**ಹೊ**ಸತು' ಪತ್ರಿಕೆಯು ಈ ಸಂಚಿಕೆಯೊಂದಿಗೆ ಒಂಭತ್ತನೇ ವರ್ಷಕ್ಕೆ ಕಾಲಿಟ್ಟಿದೆ. ನಮ್ಮೆಲ್ಲ ಓದುಗರನ್ನು ಮತ್ತು ಲೇಖಕರನ್ನು ಕೃತಜ್ಞತೆಯಿಂದ ನೆನೆಯುವುದು ಕೇವಲ ಔಪಚಾರಿಕವೆನಿಸುವುದಿಲ್ಲ. ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬಂದು ಅರವತ್ತು ವರ್ಷಗಳು ಕಳೆದಿವೆ. ಆರು ದಶಕಗಳಲ್ಲಿ ನಮ್ಮ ಸಾಧನೆ ಮಹತ್ತರವೆನಿಸುವುದಿಲ್ಲ. ಜಟಿಲವಾದ ಸಮಸ್ಯೆಗಳು ನಮ್ಮ ಮುಂಧಿವೆ. ಒಂದೆಡೆ ಸ್ಫೂರ್ತಿ ತುಂಬಿದ್ದ ಹೋರಾಟ, ಇನ್ನೊಂದೆಡೆ ಆತಂಕವನ್ನುಂಟುಮಾಡುವಂತಹ ಸಮಕಾಲೀನ ಬೆಳವಣಿಗೆಗಳು. ಅವನ್ನು ಕುರಿತಂತೆ ಪ್ರಸ್ತುತ ಸಂಚಿಕೆಯಲ್ಲಿ ಮೊದಲ ಮೂರು ಲೇಖನಗಳನ್ನು ಗಮನಿಸಬಹುದು.

ತಮ್ಮನ್ನು ತಾವು ಮಾವೋವಾದಿಗಳೆಂದು ಕರೆದುಕೊಳ್ಳುವ ಒಂದು ತಂಡದವರು ನಮ್ಮ ರಾಜ್ಯದಲ್ಲಿ ''ಸಶಸ್ತ್ರ ಹೋರಾಟ'' ನಡೆಸುತ್ತಿರುವಾಗಿ ಭ್ರಮಿಸುತ್ತಿದ್ದಾರೆ. ಇವರ ಹೋರಾಟವು ಅದು ಹೇಗೆ 'ಮಾವೋವಾದಿ' ಎಂಬುದು ತಿಳಿಯುತ್ತಿಲ್ಲ. ಏಕೆಂದರೆ, ಮಾವೋ ಹೋರಾಡಿದ್ದು ಜನರನ್ನು ಸಂಘಟಿಸುವುದರ ಮೂಲಕ. ಹಳ್ಳಿಯವರನ್ನು ಹೆದರಿಸಿ, ಬೆದರಿಸಿ, ರಾತ್ರಿ ಅವೇಳೆಯಲ್ಲಿ ಬಂದು ಅವರಿಂದ ಹಣ ಕಸಿದುಕೊಳ್ಳುವುದು ಮಾವೋ ಪದ್ಧತಿಯಾಗಿರಲಿಲ್ಲ. ಮೇಲಾಗಿ ಇಂದು ಮಾವೋ ನಾಡಿನಲ್ಲಿ ಆತನ 'ವಾದ'ಕ್ಕೆ ಎಷ್ಟು ಬೆಲೆ ಇದೆಯೆಂಬುದು ವಿಶ್ವಕ್ಕೇ ತಿಳಿದಿದೆ. ಅಲ್ಲಿರುವುದು ಡೆಂಗ್ ವಾದ (ಅಥವಾ 'ಡೆಂಗೇ ಜ್ವರ'). ಇಲ್ಲಿಯ ಮಾವೋ ವಾದಿಗಳನ್ನು 'ನಕ್ಸಲೈಟರು' ಎಂದು ಕರೆಯುವುದೂ ಉಂಟು. ಇವರ ವಿಕೃತ ಕಾರ್ಯಾಚರಣೆಗಳಿಂದ ಅನೇಕ ಸಾಮೂಹಿಕ ಚಳುವಳಿಗಳಿಗೆ ಘಾಸಿಯುಂಟಾಗುತ್ತಿದೆ. ಹೋರಾಟಗಾರರನ್ನೆಲ್ಲಾ ನಕ್ಸಲೀಯರೆಂದು ಪರಿಭಾವಿಸುವುದು ಆಳುವ ವರ್ಗಕ್ಕೆ ಅನುಕೂಲಕರ. ಅದರಿಂದಾಗಿ ಸಂಘಟಿತ ಹೋರಾಟಗಳ ಸಾಧ್ಯತೆ ಕುಗ್ಗುತ್ತದೆ. ಪ್ರಜಾಪ್ರಭುತ್ವವಾದಿ ಸಂಘರ್ಷಗಳು ತೊಡಕಿಗೆ ಸಿಲುಕಿಕೊಳ್ಳುತ್ತವೆ. ಮಾವೋವಾದಿಗಳ ಆಕಾಂಕ್ಷೆ ಇದೇ ಏನು ? ಅದು ಹಾಗಲ್ಲವೆಂದಾದರೆ ಅವರ ''ವರ್ಗ ಹೋರಾಟ''ದ ಮಾರ್ಗವನ್ನು ಕೂಡಲೆ ತೊರೆದು ಬಹಿರಂಗವಾದ ಸಂಘಟಿತ ಹೋರಾಟಗಳನ್ನು ಆಯೋಜಿಸಬೇಕು. ಅದೂ ವರ್ಗ ಹೋರಾಟವೇ ಆಗಿರುತ್ತದೆ. ಕುದುರೆಮುಖ ಅರಣ್ಯವಾಸಿಗಳನ್ನು ಎತ್ತಂಗಡಿ ಮಾಡಕೂಡದೆಂದು ಬಹಿರಂಗ ಹೋರಾಟ ನಡೆಸುವುದು ಮಾವೋವಾದಿಗಳಿಗೆ ಹಿತವೆನಿಸುವುದಿಲ್ಲವೆ ? ಮೂಲತಃ ಅವರ ಸೈದ್ಧಾಂತಿಕ ನಿಲುವು ಪ್ರಶ್ನಾರ್ಹವಾಗಿದೆ. ಸಾಮೂಹಿಕ ಸಂಘಟಿತ ಹೋರಾಟವು ಅನವಶ್ಯಕವೆಂದು ಅದನ್ನು ಮೂದಲಿಸಿ, ಅದರ ಬದಲಾಗಿ ಒಂದೆರಡು ಬಂದೂಕುಗಳನ್ನು ಹಿಡಿದು ಹತ್ತು ಮಂದಿ ಅಡವಿಯೊಳಗಿಂದ ಆಗಾಗ್ಗೆ ಹೊರಬಂದು ಯಾರೋ ನಾಲ್ಕು ಜನ ಅಮಾಯಕರನ್ನು ಕೊಲ್ಲುವುದರಿಂದ ಪ್ರಭುತ್ವವನ್ನು ಮಣಿಸಬಹುದೆಂಬ ಧೋರಣೆಯು ಅಸಂಗತವಾದ್ದು. ಧರ್ಮದ ಗ್ಲಾನಿಯುಂಟಾದಾಗೆಲ್ಲಾ ಪರಮಾತ್ಮನು ಅವತಾರವೆತ್ತಿ ಬಂದು ಸಮಾಜವನ್ನು ಸರಿಪಡಿಸುತ್ತಾನೆಂಬ ನಂಬಿಕೆ ಎಷ್ಟು ಅಪ್ರಸ್ತುತ ಮತ್ತು ಅಬದ್ಧವೋ, ಮಾವೋ ವಾದಿಗಳು ಶಸ್ತ್ರಹಿಡಿದು ವೈಯಕ್ತಿಕವಾಗಿ ಮಧ್ಯಪ್ರವೇಶ ಮಾಡಿ ಎಲ್ಲ ಸಮಸ್ಯೆಗಳನ್ನೂ ಬಗೆಹರಿಸಿ ಪ್ರಭುತ್ವವನ್ನು ತಮ್ಮದಾಗಿಸಿಕೊಳ್ಳುತ್ತಾರೆಂಬ ಮಾತೂ ಅಷ್ಟೇ ಬಾಲಿಶ ಮತ್ತು ಅಸತ್ಯ. ವೈಯಕ್ತಿಕ ನೆಲೆಯಿಂದ ಸಾಮೂಹಿಕ ನೆಲೆಯತ್ತ ಹೆಜ್ಜೆ ಹಾಕದವರು ಯಾರೂ, ಎಂದೂ, ಜನಪ್ರತಿನಿಧಿಗಳೆನಿಸಿಕೊಂಡು ಜನರ ಭವಿಷ್ಯವನ್ನು ರೂಪಿಸಿಲ್ಲ, ಸಮಾಜದಲ್ಲಿ ಗುಣಾತ್ಮಕ ಬದಲಾವಣೆಗಳನ್ನು ತಂದಿಲ್ಲ. ಜನರ ಆಶೋತ್ತರಗಳ ಬಗ್ಗೆ ಆಳವಾದ ಕಾಳಜಿಯೊಂದಿದ್ದರೆ ಸಾಕು, ವೈಯಕ್ತಿಕವಾಗಿ ಶಸ್ತ್ರ ಹಿಡಿದು ಪರಿಹಾರ ದೊರಕಿಸಬಹುದು ಎಂಬ ತೀರ್ಮಾನವು ಅತಾರ್ಕಿಕವಾದ್ದು, ಅರಾಜಕೀಯವಾದ್ದು. ರಾಬಿನ್ ಹುಡ್‌ನಂತೆ ಶ್ರೀಮಂತರನ್ನು ದೋಚಿ ಅವರ ಸಂಪತ್ತನ್ನು ಬಡವರಿಗೆ ಹಂಚುವ ವಿಧಾನದಲ್ಲಿ ಯಾವ ಆದಿವಾಸಿಗಳ ಸಮಸ್ಯೆಯೂ ಬಗೆಹರಿಯುವುದಿಲ್ಲವೆಂಬುದು ಮಾವೋವಾದಿಗಳಿಗೆ ತಿಳಿದಿರಬೇಕು. ಕೊಲ್ಲುವುದು-ಕೊಲ್ಲಿಸಿಕೊಳ್ಳುವುದು ವೀರ-ಶೂರ-ನಾಯಕತ್ವವಲ್ಲ; ಅದು ವೃಥಾ ಪ್ರಾಣಹಾನಿ. ಅದರಿಂದ ಪ್ರಭುತ್ವದ ದಮನಕಾರಿ ನೀತಿಗೆ ಸಮರ್ಥನೆ ಮತ್ತು ಗೌರವ ದೊರೆಯಬಹುದಾದ ಸನ್ನಿವೇಶ ಉದ್ಭವಿಸುತ್ತದೆ. ಆಗುಂಬೆಯ ಆಸುಪಾಸಿನಲ್ಲಿ ಈಚಿನ ದಿನಗಳಲ್ಲಿ ನಡೆದ ಹಾಗೂ ನಡೆಯುತ್ತಿರುವ ಘಟನೆಗಳು ಜನಪರ ಹೋರಾಟಗಳಿಗೆ ಹೇಗೆ ಮಾರಕವೆಂದು ಸಂಘಟನಾತ್ಮಕ ಪ್ರಜಾಪ್ರಭುತ್ವವಾದಿ ನೆಲೆಯಲ್ಲಿ ಕೆಲಸ ಮಾಡುತ್ತಿರುವವರಿಗೆ ಅರಿವಾಗುತ್ತದೆ. ಉದಾಹರಣೆಗೆ, ಈ ಸಂಬಂಧದಲ್ಲಿ ಆದಿವಾಸಿಗಳ ಹೋರಾಟಕ್ಕೆ ನಾಯಕತ್ವ ನೀಡುತ್ತಿರುವ ಶೃಂಗೇರಿಯ ಶ್ರೀ ಕಲ್ಕುಳಿ ವಿಠಲ ಹೆಗ್ಡೆಯವರ ಮಾತುಗಳನ್ನು ಗಮನಿಸಬಹುದು. ಮಾವೋವಾದಿಗಳ ಅನಿಷ್ಟ ಕಾರ್ಯಾಚರಣೆಯ ಫಲವಾಗಿ ನಾಳೆ ಶ್ರೀ ಹೆಗ್ಡೆಯಂಥವರಿಗೆ ಆದಿವಾಸಿಗಳ ಸಂಪರ್ಕವೂ ಇಲ್ಲವಾಗಬಹುದು. ಆಗ ಅಸಂಘಟಿತ, ಅನಕ್ಷರಸ್ಥ ಆದಿವಾಸಿಗಳ ಕೊರಗನ್ನು ವಿಧಾನಸೌಧಕ್ಕೆ ಮುಟ್ಟಿಸುವವರು ಯಾರು ? ಕುದುರೆಮುಖ ಅರಣ್ಯಗಳಲ್ಲಿ ಇರುವವರನ್ನು ಎತ್ತಂಗಡಿ ಮಾಡಿಸುವುದಿಲ್ಲ, ಅವರಿಗೆಲ್ಲಾ ಒಂದೊಂದು ಗುರುತಿನ ಚೀಟಿ ಕೊಡಲಾಗುವುದೆಂದು

೮ನೇ ಪುಟಕ್ಕೆ



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ


ಸಂಪುಟ-೯ ಸಂಚಿಕೆ-೧ ಆಗಸ್ಟ್ ೨೦೦೭

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
e-mail : navakarnataka@vsnl.com
website : www.navakarnatakabooks.com


**ಸಂಪಾದಕೀಯ**

# ಅಮೆರಿಕಾದ ಪರಮಾಣು ಶಸ್ತ್ರಾಸ್ತ್ರಚಾಲಿತ ನಿಮಿಟ್ಜ್ ಪ್ರಕರಣದ ಹಿನ್ನೆಲೆ ಏನು ?

ಇತ್ತೀಚೆಗೆ ಪರಮಾಣು ಶಕ್ತಿಯಿಂದ ಚಲಿಸುವ ಅಮೆರಿಕಾದ ಯುದ್ಧನೌಕೆ **ನಿಮಿಟ್ಜ್** ಚೆನ್ನೈ ಬಂದರಿಗೆ ೫ ದಿನಗಳ ಭೇಟಿ ನೀಡಿತ್ತು. ಈ ಪ್ರಕರಣ ಎಲ್ಲ ದೇಶಪ್ರೇಮಿಗಳಲ್ಲಿ ಹಾಗೂ ಶಾಂತಿಪ್ರಿಯರಲ್ಲಿ ತೀವ್ರ ಆತಂಕ ಹುಟ್ಟಿಸಿದೆ. ಈ ಕುರಿತು ಸರ್ಕಾರದ ಅಧಿಕೃತ ಮೂಲಗಳು **ನಿಮಿಟ್ಜ್** ಯುದ್ಧನೌಕೆ ಭಾರತ ಸರ್ಕಾರದ ಆಹ್ವಾನದ ಮೇರೆಗೆ ಮತ್ತು ಭಾರತ-ಅಮೆರಿಕಾ ನಡುವಿನ ಸ್ನೇಹಸಂಬಂಧಗಳ ಸಂಕೇತವಾಗಿ ನಮ್ಮ ಕರಾವಳಿಗೆ ಬಂದಿತಷ್ಟೆ ಎಂದು ಸಮಜಾಯಿಷಿ ನೀಡಿವೆ. ಇಂತಹ ಸಮಜಾಯಿಷಿಗಳು, ವಿವರಣೆಗಳು ಏನೇ ಇರಲಿ, ಭಾರತದ ವಿದೇಶಾಂಗ ನೀತಿಯು ಕ್ರಮೇಣ ಅಮೆರಿಕಾದೆಡೆಗೆ ವಾಲುತ್ತಿರುವುದಕ್ಕೆ **ನಿಮಿಟ್ಜ್** ಘಟನೆ ಮತ್ತೊಂದು ಉದಾಹರಣೆಯಾಗಿದೆ. ರಾಷ್ಟ್ರದ ಹಿತಾಸಕ್ತಿಗಳಿಗೆ ಧಕ್ಕೆ ಉಂಟುಮಾಡುವಂತಹ ಯುಪಿಎ ಸರ್ಕಾರದ ಈ ಕ್ರಮದ ವಿರುದ್ಧ ಎಡಪಕ್ಷಗಳು, ಎ.ಐ.ಎ.ಡಿ.ಎಂ.ಕೆ., ಕಾರ್ಮಿಕ ಸಂಘಟನೆಗಳು ವ್ಯಾಪಕ ಪ್ರತಿಭಟನೆಗಳನ್ನು ಸಂಘಟಿಸಿವೆ. ಅಲಿಪ್ತ ಹಾಗೂ ಸ್ವತಂತ್ರ ವಿದೇಶಾಂಗ ನೀತಿಗಳನ್ನು ಯಾವತ್ತಿಗೂ ಕೈಬಿಡುವುದಿಲ್ಲ ಎಂದು ಘೋಷಿಸುತ್ತಲೇ ಈ ಸರ್ಕಾರವು ತನ್ನ ದಿನನಿತ್ಯದ ಕಾರ್ಯವೈಖರಿಯಲ್ಲಿ ರಕ್ಷಣೆ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ಅಮೆರಿಕಾದೊಡನೆ ಹೆಚ್ಚಿನ ಮಟ್ಟದ ಅಪಾಯಕಾರಿ ಸಂಬಂಧಗಳನ್ನು ಬೆಳೆಸಿಕೊಳ್ಳುತ್ತಿರುವುದಂತೂ ಸ್ಪಷ್ಟ. ಜೊತೆಗೆ, ಈ ನೀತಿಯ ಹಿಂದಿರುವ ಕೃತ್ರಿಮವನ್ನು **ನಿಮಿಟ್ಜ್** ಭೇಟಿ ಬಯಲುಗೊಳಿಸಿದೆ.

ಇರಾನ್ ತನ್ನ ಪರಮಾಣು ಯೋಜನೆಯನ್ನು ಕೈಬಿಡುವಂತೆ ಒತ್ತಾಯಿಸಲು ಸಾಮ್ರಾಜ್ಯಶಾಹಿ ಅಮೆರಿಕಾ ಕೈಗೊಂಡ ಕಾರ್ಯಾಚರಣೆಯಲ್ಲಿ **ನಿಮಿಟ್ಜ್** ಅನ್ನು ಬಳಸಲಾಗಿತ್ತು. ಎರಡು ತಿಂಗಳ ಹಿಂದೆಯಷ್ಟೆ ಪರ್ಷಿಯನ್ ಕೊಲ್ಲಿ ಪ್ರದೇಶಕ್ಕೆ ಅಮೆರಿಕಾ ಕಳಿಸಿದ ೫೦ ಹಡಗುಗಳ ನೌಕಾಪಡೆಯಲ್ಲಿ ಈ ಯುದ್ಧನೌಕೆಯೂ ಪ್ರಮುಖ ಪಾತ್ರ ವಹಿಸಿದೆ. ಅಮೆರಿಕಾದ ಪಡೆಗಳು ಇರಾಕ್‌ನಲ್ಲಿ ಅಕ್ರಮವಾಗಿ ನೆಲೆಯೂರಿ ಮಾರಣಹೋಮ ನಡೆಸುತ್ತಿರುವುದು ಎಲ್ಲರಿಗೂ ತಿಳಿದ ವಿಷಯ. ಆ ಮೂಲಕ ಇಡೀ ಪಶ್ಚಿಮ ಏಷ್ಯಾದ ರಾಷ್ಟ್ರಗಳನ್ನು ಬುಡಮೇಲು ಮಾಡಲು ಆ ರಾಷ್ಟ್ರ ಹವಣಿಸುತ್ತಿದೆ. ಈ ಹಿನ್ನೆಲೆಯಲ್ಲಿ ಭಾರತದೊಡನೆ ತನ್ನ ಸಂಬಂಧಗಳನ್ನು ಬಲಪಡಿಸಿಕೊಳ್ಳಲು ಅಮೆರಿಕಾ **ನಿಮಿಟ್ಜ್** ಭೇಟಿಯನ್ನು ಬಳಸಿಕೊಂಡಿರುವುದರಲ್ಲಿ ಯಾವ ಸಂಶಯವೂ ಇಲ್ಲ.

ಈ ಪರಮಾಣು ಯುದ್ಧನೌಕೆಯ ಚೆನ್ನೈ ಭೇಟಿ ಇನ್ನೂ ಹಲವು ವಾದವಿವಾದಗಳಿಗೆ ಎಡೆಮಾಡಿಕೊಟ್ಟಿದೆ. ಖ್ಯಾತ ಆರ್ಥಿಕತಜ್ಞರೂ ದೆಹಲಿ ವಿಶ್ವವಿದ್ಯಾಲಯದ ಮಾಜಿ ಉಪಕುಲಪತಿಗಳೂ ಆದ ದೀಪಕ್ ನಯ್ಯರ್ ಹೇಳುವಂತೆ ಈ ಯುದ್ಧನೌಕೆ ಪರಮಾಣು ಶಸ್ತ್ರಾಸ್ತ್ರಗಳನ್ನು ಹೊಂದಿದ್ದುದರಲ್ಲಿ ಯಾವ ಸಂಶಯವೂ ಇಲ್ಲ. ಎಂದೆಂದಿಗೂ ತನ್ನ ಕಾನೂನು ವ್ಯಾಪ್ತಿಗೆ ಒಳಪಟ್ಟಿರುವ ಜಲಪ್ರದೇಶದಲ್ಲಿ ವಿದೇಶಿ ಪರಮಾಣು ಅಸ್ತ್ರಗಳಿಗೆ ಪ್ರವೇಶ ನೀಡುವುದಿಲ್ಲ ಎಂದು ಸರ್ಕಾರ ಆಗಿಂದಾಗ್ಗೆ ಘೋಷಿಸುತ್ತಿರುವಾಗಲೇ ಈ ರಾಷ್ಟ್ರವಿರೋಧಿ ಘಟನೆ ನಡೆದುಹೋಗಿದೆ.

ಖ್ಯಾತ ಬರಹಗಾರ್ತಿಯರಾದ ಅರುಂಧತಿ ರಾಯ್ ಮತ್ತು ಮಹಾಶ್ವೇತಾದೇವಿ, ಎಸ್. ಪಿ. ಶುಕ್ಲ ಮತ್ತು ಸುದೀಪ್ ಬ್ಯಾನರ್ಜಿ ಅವರಂತಹ ಮಾಜಿ ಸರ್ಕಾರಿ ಅಧಿಕಾರಿಗಳು, ಸಮಾಜ ವಿಜ್ಞಾನಿಗಳಾದ ರೊಮಿಲಾ ಥಾಪರ್, ಪ್ರಭಾತ್ ಪಟ್ನಾಯಕ್, ಅಮಿತ್ ಚೌಧುರಿ ಮೊದಲಾದ ಗಣ್ಯರು ದೀಪಕ್ ನಯ್ಯರ್ ಅವರ ಅಭಿಪ್ರಾಯಕ್ಕೆ ದನಿಗೂಡಿಸಿ ತಮ್ಮ ಆತಂಕವನ್ನು ವ್ಯಕ್ತಪಡಿಸಿದ್ದಾರೆ. ನಿಜಕ್ಕೂ ''**ನಿಮಿಟ್ಜ್** ನೌಕೆಯಲ್ಲಿ ಪರಮಾಣು ಶಸ್ತ್ರಾಸ್ತ್ರಗಳಿದ್ದವು ಎಂದೇನೂ ಕಾಣಬರುವುದಿಲ್ಲ'' ಎಂಬ ಸರ್ಕಾರದ ಹೇಳಿಕೆ ಮತ್ತು ಯಾವುದೇ ಪರಿಸ್ಥಿತಿಯಲ್ಲೂ ತನ್ನ ಯುದ್ಧನೌಕೆಗಳು ಪರಮಾಣು ಶಸ್ತ್ರಾಸ್ತ್ರಗಳನ್ನು ಹೊಂದಿವೆಯೇ ಅಥವಾ ಹೊಂದಿಲ್ಲವೇ ಎಂಬುದರ ಬಗ್ಗೆ ನಿಖರವಾಗಿ ಹೇಳಲಿಚ್ಛಿಸದ ಅಮೆರಿಕಾದ ನಿಲುವು, ಎರಡೂ ಅಸಂಬದ್ಧವಾದುವು. ಅಲ್ಲದೆ ಭಾರತ ಸರ್ಕಾರದ ಈ ಹೇಳಿಕೆಯು ಅದರ ವಿದೇಶಾಂಗ ನೀತಿಯ ದಿವಾಳಿತನವನ್ನು ಎತ್ತಿತೋರಿಸುತ್ತದೆ. ಒಂದು ಕಾಲಕ್ಕೆ ಈ ರಾಷ್ಟ್ರದ ಸುತ್ತಮುತ್ತಲ ಯಾವುದೇ ಪ್ರದೇಶದಲ್ಲೂ ಪರಮಾಣು ಶಸ್ತ್ರಾಸ್ತ್ರಗಳನ್ನು ಹೊಂದಿರುವ ನೌಕೆಗಳಾಗಲಿ ವಿಮಾನಗಳಾಗಲಿ ಹಾದುಹೋಗಲು ಅವಕಾಶ ನೀಡುವುದಿಲ್ಲ ಎಂಬ ದೃಢ ನಿಲುವು ನಮ್ಮದಾಗಿತ್ತು. **ನಿಮಿಟ್ಜ್**‌ನ ಚೆನ್ನೈ ಭೇಟಿ ಅಂತಹ ನಿಲುವನ್ನು ತಿರುಗುಮುರುಗಾಗಿಸಿದೆ. ೧೯೭೦-೮೦ರ ದಶಕಗಳಲ್ಲಿ ಹಿಂದೂ ಮಹಾಸಾಗರದಲ್ಲಿರುವ ಡಿಯಾಗೋ ಗಾರ್ಸಿಯದಲ್ಲಿ ಅಮೆರಿಕಾ ತನ್ನ ನೌಕಾನೆಲೆಯನ್ನು ಸ್ಥಾಪಿಸಹೊರಟಾಗ ಭಾರತ ಸರ್ಕಾರ ತೀವ್ರವಾಗಿ ಪ್ರತಿಭಟಿಸಿದ್ದನ್ನು ಈ ಸಂದರ್ಭದಲ್ಲಿ ನಾವೆಲ್ಲರೂ ನೆನಪಿಗೆ ತಂದುಕೊಳ್ಳಬೇಕು. ಅಂದಿನ ದಿನಗಳಲ್ಲಿ ಇಡೀ ಹಿಂದೂ ಮಹಾಸಾಗರವೇ 'ಶಾಂತಿ ವಲಯ'ವಾಗಬೇಕೆಂಬ ಕೂಗು ರಾಷ್ಟ್ರಾದ್ಯಂತ ಪ್ರತಿಧ್ವನಿಸುತ್ತಿತ್ತು.

ನಾಚಿಕೆಗೇಡಿನ ಬೆಳವಣಿಗೆಯೆಂದರೆ, ''ಇತ್ತೀಚಿನ ವರ್ಷಗಳಲ್ಲಿ ಪರಮಾಣು ಶಕ್ತಿಯಿಂದ ಚಲಿಸುವ ಫ್ರಾನ್ಸ್, ಬ್ರಿಟನ್ ಮತ್ತು ಅಮೆರಿಕಾ ದೇಶಗಳ ಹತ್ತು ಯುದ್ಧನೌಕೆಗಳು ನಮ್ಮ ಬಂದರುಗಳಿಗೆ ಬಂದುಹೋಗಿವೆ. **ನಿಮಿಟ್ಜ್** ಭೇಟಿ ಹೊಸದೇನೂ ಅಲ್ಲ'' ಎಂದು ಲಘುವಾಗಿ ಪ್ರತಿಕ್ರಿಯಿಸಿ ಇಡೀ **ನಿಮಿಟ್ಜ್** ಪ್ರಕರಣದ ಬಗ್ಗೆ ಸರ್ಕಾರ ತಿಪ್ಪೆ ಸಾರಿಸಿದೆ. ಹಿಂದೆಂದೋ ಯುದ್ಧನೌಕೆಗಳು ಬಂದಿರಬಹುದಾದರೂ **ನಿಮಿಟ್ಜ್**‌ನ ಭೇಟಿ ಯಾವ ಕಾರಣಕ್ಕೂ ಸಮರ್ಥನೀಯವಲ್ಲ. ಯಾವ ಸಾರ್ವಜನಿಕ ಚರ್ಚೆಗಾಗಲಿ, ಸಂಸತ್ತಿನಲ್ಲಿ ಚರ್ಚೆಗಾಗಲಿ, ಅವಕಾಶ ನೀಡದೆ ರಾಷ್ಟ್ರದ ರಕ್ಷಣಾವಲಯಕ್ಕೆ ಸಂಬಂಧಿಸಿದ ಇಂತಹ ಸೂಕ್ಷ್ಮ ವಿಚಾರಗಳಲ್ಲಿ ಇಷ್ಟಬಂದ ಹಾಗೆ ಬದಲಾವಣೆಗಳನ್ನು ತಂದು ಯುದ್ಧನೌಕೆಗಳ ಭೇಟಿಗೆ ಸರ್ಕಾರ ಅನುವುಮಾಡಿಕೊಟ್ಟಿರುವುದು ಖಂಡನೀಯ. ಅಲ್ಲದೆ, ಅಮೆರಿಕಾದ ಇರಾಕ್ ಮೇಲಿನ ಆಕ್ರಮಣ ಮತ್ತು ಇರಾನ್ ವಿರುದ್ಧದ ಕಾರ್ಯಾಚರಣೆಗಳ ವಿರುದ್ಧ ಪಶ್ಚಿಮ ಏಷ್ಯಾದಲ್ಲಿ ಜನರು ಸಿಡಿದೇಳುತ್ತಿರುವ ಹೊತ್ತಿನಲ್ಲೆ **ನಿಮಿಟ್ಜ್** ಭಾರತದ ಬಂದರಿಗೆ ಕಾಲಿಟ್ಟದ್ದು ಒಂದು ವಿಪರ್ಯಾಸವೇ ಸರಿ.

ಇರಾನ್ ಬಿಕ್ಕಟ್ಟಿನಲ್ಲಿ ಪಾಲ್ಗೊಂಡು ಆ ಯುದ್ಧನೌಕೆಯು ಭಾರತಕ್ಕೆ ಭೇಟಿ ನೀಡಿದ್ದು ಒಂದರ್ಥದಲ್ಲಿ ಸಾಂಕೇತಿಕವಾಗಿದೆ. ಈ ಸಂದರ್ಭದಲ್ಲಿಯೇ ಪಾಕಿಸ್ತಾನದ ಮೂಲಕ ಕೊಳವೆಗಳನ್ನು ನಿರ್ಮಿಸಿ ಇರಾನಿನಿಂದ ತೈಲವನ್ನು ಆಮದು ಮಾಡಿಕೊಳ್ಳುವ ಯೋಜನೆಯನ್ನು ಭಾರತವು ಕೈಬಿಡಬೇಕೆಂದು ಅಮೆರಿಕಾ ಒತ್ತಾಯಿಸುತ್ತಿರುವುದನ್ನೂ ಈ ಸಂದರ್ಭದಲ್ಲಿ ನಾವು ನೆನಪಿಗೆ ತಂದುಕೊಳ್ಳಬೇಕು. ಪರಮಾಣು ಕ್ಷೇತ್ರದಲ್ಲಿ ಅಮೆರಿಕಾ ಮತ್ತು ಭಾರತದ ಎರಡು ರಾಷ್ಟ್ರಗಳೂ ಹೆಚ್ಚಿನ ಮಟ್ಟದಲ್ಲಿ ಪರಸ್ಪರ ಸಹಕರಿಸ

ಬೇಕೆಂಬ ನಿಟ್ಟಿನಲ್ಲಿ ಎರಡು ವರ್ಷಗಳಿಂದಲೂ ಮಾತುಕತೆಗಳು ಜರುಗುತ್ತಿವೆ. ಆದರೆ ಬುಷ್ ಆಡಳಿತ ಈ ಮಾತುಕತೆಗಳನ್ನು ಕೈಬಿಡಬೇಕೆಂದು ಒತ್ತಡ ಹೇರುತ್ತಿದೆ. ಪರಮಾಣು ಒಪ್ಪಂದದ ವಿಷಯದಲ್ಲಿ ಕೆಲವು ರಿಯಾಯಿತಿಗಳನ್ನು ಬಿಟ್ಟುಕೊಡುವ ಸಲುವಾಗಿ ಭಾರತ ಇರಾನ್ ಜೊತೆಗಿನ ತನ್ನ ತೈಲ ಕೊಳವೆ ನಿರ್ಮಾಣದ ಯೋಜನೆಯನ್ನು ಹಿಂತೆಗೆದುಕೊಳ್ಳಬೇಕೆಂದು ಅಮೆರಿಕಾದ ಕೆಲವು ರಾಜಕಾರಣಿಗಳು ಪಟ್ಟು ಹಿಡಿದಿದ್ದಾರೆ ಎಂದು 'ದಿ ಹಿಲ್' ಪತ್ರಿಕೆ ವರದಿ ಮಾಡಿದೆ.

ಒಟ್ಟಾರೆಯಾಗಿ, **ನಿಮಿಟ್ಜ್** ನೌಕೆ ಭಾರತಕ್ಕೆ ಬಂದದ್ದು ಮಾಮೂಲಿನ ಅಥವಾ ಸರಳ ಸಂಗತಿಯೇನಲ್ಲ. ೧೯೭೧ರ ಪಾಕಿಸ್ತಾನ ಬಾಂಗ್ಲಾ ದೇಶಗಳ ನಡುವೆ ಜರುಗಿದ ಯುದ್ಧದ ಸಂದರ್ಭದಲ್ಲಿ ಅಮೆರಿಕಾ 'ದಿ ಎಂಟರ್‌ಪ್ರೈಸ್' ಎಂಬ ಯುದ್ಧ ನೌಕೆಯನ್ನು ಬಂಗಾಳ ಕೊಲ್ಲಿಗೆ ಕಳಿಸಿದ್ದನ್ನು ಯಾರೂ ಮರೆಯಲಾಗದು. ಭಾರತದ ಪಡೆಗಳಿಗೆ ಪಾಕಿಸ್ತಾನದ ಸೈನ್ಯವು ಶರಣಾಗಿ ಬಾಂಗ್ಲಾದೇಶ ಸ್ವತಂತ್ರವಾದ ನಂತರ ಯುದ್ಧದ ಮುಂದುವರಿಕೆಯನ್ನು ವಿರೋಧಿಸಿದ ಅಮೆರಿಕಾ 'ದಿ ಎಂಟರ್‌ಪ್ರೈಸ್' ನೌಕೆಯನ್ನು ಕಳಿಸುವುದರ ಮೂಲಕ ತನ್ನ ಇಂಗಿತವನ್ನು ಸೂಚಿಸಿತ್ತು.

ದಿನಗಳುರುಳಿದಂತೆ ಭಾರತ-ಅಮೆರಿಕಾ ಸಂಬಂಧಗಳು ಹೊಸ ಮಜಲನ್ನು ತಲುಪುತ್ತಿವೆ. ಈಗೀಗ ಭಾರತ ಸರ್ಕಾರ ಅಮೆರಿಕಾದ ಮಿಲಿಟರಿ ಯೋಜನೆಗಳಿಗೆ ಮುಕ್ತವಾಗಿ ಬೆಂಬಲ ಸೂಚಿಸುತ್ತಿದೆ. ಯುದ್ಧತಂತ್ರಗಳನ್ನು ರೂಪಿಸುವ ಕ್ಷೇತ್ರದಲ್ಲಿ ಆ ರಾಷ್ಟ್ರದೊಡನೆ ಭಾರತ ಸಹಕರಿಸುವ ಸೂಚನೆಗಳೂ ಕಂಡುಬರುತ್ತಿವೆ. ನಮ್ಮ ಎಂದಿನ ಪಾರಂಪರಿಕ ಸ್ವತಂತ್ರ ವಿದೇಶಾಂಗ ನೀತಿಗೆ ವಿರುದ್ಧವಾಗಿ ಯುಪಿಎ ಸರ್ಕಾರ ನಡೆದುಕೊಳ್ಳುತ್ತಿರುವುದು ಅಪಾಯಕಾರಿ ಬೆಳವಣಿಗೆಯಾಗಿದೆ. ಅದೇ ವೇಳೆ ರಕ್ಷಣಾವಲಯದಲ್ಲಿ ಇತ್ತೀಚೆಗೆ ಗಟ್ಟಿಗೊಳ್ಳುತ್ತಿರುವ ಭಾರತ-ಅಮೆರಿಕಾ ಸಹಕಾರವು ಇತರೆ ಮೂರನೇ ಜಗತ್ತಿನ ರಾಷ್ಟ್ರಗಳ ಹಿತಾಸಕ್ತಿಗಳಿಗೆ ಮಾರಕವಾಗಲಿದೆ.

**ನಿಮಿಟ್ಜ್** ಹೊಂದಿರುವ ಪರಮಾಣು ಶಸ್ತ್ರಾಸ್ತ್ರಗಳಿಂದ ಹೊರಹೊಮ್ಮಬಹುದಾದ ವಿಕಿರಣಶೀಲತೆಯಿಂದಾಗಿ ಸಂಭವಿಸುವ ಆಘಾತಕಾರಿ ಪರಿಣಾಮಗಳನ್ನು ಸಂಬಂಧಪಟ್ಟ ಅಧಿಕಾರಿಗಳು ಕಡೆಗಣಿಸಿ ಈ ನೌಕೆಯಿಂದಾಗಿ ಅಂತಹ ಯಾವುದೇ ರೀತಿಯ ಅಪಾಯವೂ ಇಲ್ಲ ಎಂಬ ಹೇಳಿಕೆ ನೀಡಿ ಅಮೆರಿಕಾದ ಪರ ವಕಾಲತ್ತು ವಹಿಸುತ್ತಿರುವುದು ದಿಗ್ಭ್ರಮೆ ಹುಟ್ಟಿಸುತ್ತದೆ. ಮೇಲ್ನೋಟಕ್ಕೆ ಕಾಣುವಂತೆ **ನಿಮಿಟ್ಜ್** ಭೇಟಿಯು ಯಾವುದೋ ಒಂದು ಯುದ್ಧನೌಕೆ ನಮ್ಮ ಜಲ ಪ್ರದೇಶಕ್ಕೆ ಭೇಟಿ ನೀಡಿತ್ತಷ್ಟೆ ಎನ್ನುವಷ್ಟು ಸರಳ ಘಟನೆಯೇನಲ್ಲ; ಇದು ಒಂದು ರಾಷ್ಟ್ರ ತನ್ನ ಮಿತ್ರ ರಾಷ್ಟ್ರಕ್ಕೆ ತೋರಿದ ಸ್ನೇಹಪೂರ್ಣ ಕೊಡುಗೆಯೂ ಅಲ್ಲ. ಈ ಘಟನೆಗೆ ಎಲ್ಲ ದೇಶಪ್ರಿಯ ಜನವಿಭಾಗಗಳನ್ನು ಕಳವಳಕ್ಕೀಡುಮಾಡುವ ಕರಾಳ ಹಿನ್ನೆಲೆಯಿದೆ.

ಯಾವತ್ತಿಗೂ ಎಲ್ಲ ಅಂತರರಾಷ್ಟ್ರೀಯ ಆಗುಹೋಗುಗಳಲ್ಲಿ ಪಶ್ಚಿಮ ರಾಷ್ಟ್ರಗಳ ಹಾಗೂ ಅಮೆರಿಕಾದ ಪರವಾಗಿ ನಿಲ್ಲುತ್ತಿದ್ದ ಭಾರತೀಯ ಜನತಾ ಪಕ್ಷದ ನೀತಿಗಳಿಗೆ ಭಿನ್ನವಾಗಿ, ಬಹುಧ್ರುವೀಯ ಮತ್ತು ಪರಮಾಣು ಶಸ್ತ್ರಾಸ್ತ್ರರಹಿತ ವಿಶ್ವದ ನಿರ್ಮಾಣಕ್ಕಾಗಿ ಶ್ರಮಿಸುತ್ತೇನೆಂದು ಘೋಷಿಸಿದ್ದ ಯುಪಿಎ ಒಕ್ಕೂಟ ಇಂದು ತದ್ವಿರುದ್ಧವಾದ ನೀತಿಗಳನ್ನು ಅನುಸರಿಸುತ್ತಿರುವುದನ್ನು ಗಂಭೀರವಾಗಿ ಪರಿಗಣಿಸುವ ಅಗತ್ಯವಿದೆ.

[signature]

## ತನ್ನಷ್ಟಕ್ಕೆ ಭಯ ಉತ್ಪಾದನೆಯಾಗುವುದಿಲ್ಲ

ಇಂಗ್ಲೆಂಡಿನಲ್ಲಿ ಖೂನಿ, ದರೋಡೆ ಮಾಡಿ ಶಿಕ್ಷೆಗೊಳಗಾಗಿ ಗಡೀಪಾರಾದವರ ಸಂತಾನವೇ ಇಂದಿನ ಆಸ್ಟ್ರೇಲಿಯಾದ ಬಿಳಿಯರು. ಆ ರಾಷ್ಟ್ರದ ಪ್ರಧಾನಿಯನ್ನು ಅಲ್ಲಿಯ ವಿರೋಧ ಪಕ್ಷಗಳು ಹಿಟ್ಲರಿಗೆ ಹೋಲಿಸುತ್ತವೆ. ಅಂಥವನಿಂದ ಅಲ್ಲಿ ಬಂಧನಕ್ಕೆ ಒಳಗಾದ ನಮ್ಮ ದೇಶದ ಪ್ರಜೆ ನ್ಯಾಯವನ್ನು ಹೇಗೆ ತಾನೆ ನಿರೀಕ್ಷಿಸಬಲ್ಲ? ಈಗಾಗಲೆ ಆಸ್ಟ್ರೇಲಿಯಾದಲ್ಲಿ ಜನಾಂಗೀಯ ದ್ವೇಷ ಹೊಗೆಯಾಡುತ್ತಿದ್ದು ನಮ್ಮ ಜನರೂ ಕಿರುಕುಳ ಮತ್ತು ಅನಾದರಗಳಿಗೆ ಒಳಗಾಗುತ್ತಿದ್ದಾರೆ ಎಂಬ ಸುದ್ದಿ ಇದೆ. ಆದ್ದರಿಂದ ಹನೀಫನನ್ನು ನ್ಯಾಯಾಲವೇ ಬಿಡುಗಡೆ ಮಾಡಿದರೂ ವೀಸಾ ವಜಾ ಮಾಡಿ, ಅನಧಿಕೃತವಾಗಿ ಪ್ರವೇಶ ಮಾಡಿದವನಂತೆ ಅವನನ್ನು ಅನಾಗರಿಕವಾಗಿ ನಡೆಸಿಕೊಂಡಿದ್ದಾರೆ. ನಮ್ಮ ಸರ್ಕಾರಕ್ಕೇನಾದರೂ ಬೆನ್ನೆಲುಬಿದ್ದರೆ ಇದರ ವಿರುದ್ಧ ನಿಷ್ಠುರವಾಗಿ ಪ್ರತಿಭಟಿಸಬೇಕು. ನಮ್ಮ ಪ್ರಜೆಯು ಏನಾದರೂ ತಪ್ಪು ಮಾಡಿದ್ದರೆ ನಾವೇ ನ್ಯಾಯಾಂಗ ಕ್ರಮವನ್ನು ಇಲ್ಲೇ ನಡೆಸಲೇನೂ ಅಡ್ಡಿಯಿಲ್ಲ. ಈ ಕೂಡಲೆ ಬೇಷರತ್ತಾಗಿ ಆತನನ್ನು ಖುಲಾಸೆ ಮಾಡುವಂತೆ ನಮ್ಮ ಸರ್ಕಾರ ಒತ್ತಾಯ ಮಾಡಬೇಕು.

ಬೆಂಗಳೂರು ಮೂಲದ ಮೂವರು ಯುವಕರು ಇಂಗ್ಲೆಂಡಿನಲ್ಲಿ, ಆಸ್ಟ್ರೇಲಿಯಾದಲ್ಲಿ, ಭಯೋತ್ಪಾದನೆಯ ಆಪಾದನೆಗೆ ತುತ್ತಾಗಿದ್ದಾರೆ. ಮೊದಲಿಗೆ ಅವರು ನಮ್ಮ ಪ್ರಜೆಗಳು. ಇದರಲ್ಲಿ ಒಬ್ಬ ಯುವಕ ಗ್ಲಾಸ್ಗೋ ವಿಮಾನ ನಿಲ್ದಾಣದೊಳಗೆ ಬಾಂಬಿದ್ದ ಗಾಡಿಯನ್ನು ನುಗ್ಗಿಸುವ ಪ್ರಯತ್ನದಲ್ಲಿ ತೀವ್ರವಾಗಿ ಸುಟ್ಟುಹೋಗಿ ಗಾಯಗಳಾಗಿ ಜೀವನ್ಮರಣ ಸ್ಥಿತಿಯಲ್ಲಿದ್ದಾನೆ. ಈ ಕುರಿತು ಈಗಲೇ ಏನೂ ಹೇಳುವಂತಿಲ್ಲ. ಆ ವಾಹನದಲ್ಲಿ ಬಾಂಬಿತ್ತೇ ಎಂಬುದೂ ಅನುಮಾನಾಸ್ಪದವಾಗಿದೆ. ಆ ಕಾರು ಯಾರೋ ಒಬ್ಬರ ಮನೆಯ ಮುಂದೆ ನಿಂತಿತ್ತು ಎನ್ನುವುದು ಅವನ ಮೇಲೆ ಸಂದೇಹಕ್ಕೆ ಎಡೆಮಾಡಿಕೊಟ್ಟಿದ್ದರೆ, ಮತ್ತೊಬ್ಬ ಇಂಗ್ಲೆಂಡ್ ದೇಶ ಬಿಟ್ಟು, ಆಸ್ಟ್ರೇಲಿಯಾಕ್ಕೆ ಹೋಗುವಾಗ ತನ್ನ ಸಿಂ ಕಾರ್ಡನ್ನು ಈ ಗೆಳೆಯನಿಗೆ ಕೊಟ್ಟಿದ್ದೇ ಸಂದೇಹಕ್ಕೆ ಎಡೆಮಾಡಿಕೊಟ್ಟಿತು. ಈ ಮೂರೂ ಸಂದರ್ಭಗಳೂ ಇವರ್‍ಯಾರನ್ನೂ ನೇರವಾಗಿ ಅಪರಾಧಿಗಳಾಗಿ ಕಂಡಿಲ್ಲ. ಇನ್ನು ಪೊಲೀಸರಿಗೆ ಏನು ಪುರಾವೆ ಸಿಕ್ಕಿತೋ ಸಿಕ್ಕಿಲ್ಲವೋ ಎಲ್ಲವೂ ಮಾಧ್ಯಮಗಳ ಊಹಾಪೋಹಗಳಷ್ಟೇ. ಹೀಗಿರುವಾಗ ಈ ಮೂವರನ್ನೂ, ಕೇವಲ ಅವರು ಮುಸ್ಲಿಮರು ಎಂಬ ಕಾರಣಕ್ಕಾಗಿ ಇಡೀ ಮುಸ್ಲಿಂ ಸಮುದಾಯವನ್ನು ಅಪನಂಬಿಕೆಯಿಂದ ನೋಡುವಂತೆ ಪ್ರಚಾರ ನೀಡಿದ್ದು ಮಾಧ್ಯಮಗಳು ಮತ್ತು ಪೊಲೀಸರು. ಭಯೋತ್ಪಾದನೆಯು ಈಗ ಜಾಗತಿಕ ಸ್ವರೂಪ ಪಡೆದಿದೆಯೆಂದು ಸಾರಿ, ಇಸ್ಲಾಂ ವಿರುದ್ಧ ತಾನು ಏಕಪಕ್ಷೀಯವಾಗಿ ಘೋಷಿಸಿರುವ ಪ್ರಚ್ಛನ್ನ ಯುದ್ಧದಲ್ಲಿ ಭಾರತವನ್ನು ಸೆಳೆಯುವ ಅಮೆರಿಕಾದ ಉದ್ದೇಶ ಈ ಮುನ್ನವೇ ಸ್ಪಷ್ಟವಿದೆ. ಈ ಸಾರಿ ಬೆಂಗಳೂರಿನ ಪೊಲೀಸರೂ, ಆಸ್ಟ್ರೇಲಿಯಾ ಮತ್ತು ಇಂಗ್ಲೆಂಡಿನ ಪೊಲೀಸರೂ ಪರಸ್ಪರ ಸಹಕರಿಸಿಕೊಂಡು ತಮ್ಮ ತನಿಖೆ ನಡೆಸುತ್ತಿರುವಂತೆ ಮೇಲ್ನೋಟಕ್ಕೆ ತೋರುತ್ತಿದೆ. ಭಾರತ ಆಂತರಿಕವಾಗಿ ತನಿಖೆ ನಡೆಸುವುದು ಅಗತ್ಯ. ಆದರೆ ಅಂತರರಾಷ್ಟ್ರೀಯವಾಗಿ ಇದರಲ್ಲಿ ಭಾಗವಹಿಸುವುದು ಸರಿಯೆ? ವಿಶ್ವದ ಎರಡನೆಯ ಅತಿದೊಡ್ಡ ಮುಸ್ಲಿಂ ಜನಾಂಗವನ್ನು ಪಡೆದಿರುವ ಭಾರತ, ಮೂರು ಇಸ್ಲಾಂ ರಾಷ್ಟ್ರಗಳಿಂದ ಸುತ್ತುವರಿದಿದ್ದು ತಾನೂ ಅಮೆರಿಕದ ಇಸ್ಲಾಂ ವಿರುದ್ಧ ಭಯೋತ್ಪಾದನಾ ವಿರೋಧಿ ಹೋರಾಟದಲ್ಲಿ ಅವರೊಡನೆ ಸಹಕರಿಸಲು ಮುಂದಾಗುವುದು ನಮ್ಮ ಸ್ವಂತ ಹಿತಾಸಕ್ತಿಯನ್ನು ರಕ್ಷಿಸುವ


ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ







**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೪೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨




### ಜುಲೈ ಸಂಚಿಕೆ

ಸಿ. ಯತಿರಾಜು ಅವರ ಲೇಖನ ಈಗ ನಡೆಯುತ್ತಿರುವ ಪೇಟೆಂಟ್ ಸಮರದಲ್ಲಿ ಭಾರತದ ಸ್ಥಾನವನ್ನು ವಸ್ತುನಿಷ್ಠವಾಗಿ ಚರ್ಚಿಸಿದೆ. ಬರೀ ಲಾಭ ಮತ್ತು ಏಕಸ್ವಾಮ್ಯವನ್ನೇ ಗುರಿಯಾಗಿಟ್ಟುಕೊಂಡಿರುವ ಬಹುರಾಷ್ಟ್ರೀಯ ಕಂಪನಿಗಳ ಒತ್ತಡಕ್ಕೆ ಬಲಿಯಾಗುವುದೇ ಭಾರತದ ಪಾಲಿಗೆ ಜಾಗತೀಕರಣವಾಗಿದೆ. ಔಷಧಿ ತಯಾರಿಕೆ ಉದ್ಯಮದಲ್ಲಿ 'ನೋವಾರ್ಟಿಸ್' ಕಂಪನಿಯು ಅಮೆರಿಕೆಯನ್ನು ಪ್ರತಿನಿಧಿಸಿದರೆ, ಸಿಪ್ಲಾ, ರ್‍ಯಾನ್‌ಬಾಕ್ಸಿಯಂಥ ಕಂಪನಿಗಳು ಭಾರತದಂಥ ಬಡದೇಶಗಳನ್ನು ಪ್ರತಿನಿಧಿಸುತ್ತವೆ. ಜಗತ್ತಿನಲ್ಲೇ ಅತ್ಯಂತ ಕಡಿಮೆ ವೆಚ್ಚದಲ್ಲಿ ಮತ್ತು ಒಳ್ಳೆಯ ಗುಣಮಟ್ಟದ ಔಷಧಿಗಳನ್ನು ತಯಾರಿಸುವ ಭಾರತದ ಯಶಸ್ಸು ಅಮೆರಿಕೆಗೆ ನುಂಗಲಾರದ ತುತ್ತಾಗಿದೆ. ಅದಕ್ಕೆಂದೇ 'ಎವರ್‌ಗ್ರೀನಿಂಗ್ ಪೇಟೆಂಟ್' ಎಂಬ ಅಸ್ತ್ರದಿಂದ ಭಾರತದ ಔಷಧಿ ಉದ್ಯಮವನ್ನು ತನ್ನ ಹಿಡಿತಕ್ಕೆ ತೆಗೆದುಕೊಳ್ಳುವ ಹುನ್ನಾರ ನಡೆಸುತ್ತಿದೆ. ಈಗಿನ ಅಮೆರಿಕೆಯ ನವ ವಸಾಹತುಶಾಹಿ ಪ್ರಯತ್ನಗಳಲ್ಲಿ ಭಾರತವು ಎಚ್ಚರಿಕೆ ಮತ್ತು ಸ್ವಂತಿಕೆಗಳನ್ನು ಕಳೆದುಕೊಳ್ಳದೆ ದೃಢವಾದ ನಿಲುವನ್ನು ಹೊಂದಬೇಕಾಗಿದೆ. 'ಲಾಭದ ಹಕ್ಕಿ'ನಿಂದಾಗಿ 'ಜೀವಿಸುವ ಹಕ್ಕನ್ನೇ' ಕಳೆದುಕೊಳ್ಳಬೇಕಾದ ಸಂದರ್ಭ ಬಂದರೆ ಆಶ್ಚರ್ಯವೇನಿಲ್ಲ.

ಬನಹಟ್ಟಿ **ಶಿವಕುಮಾರ್ ಪಾವಟೆ**

ಜುಲೈ ೨೦೦೭ರ 'ಹೊಸತು' ಸಂಚಿಕೆಯ ಕೆಲವು ಕವನಗಳ ಬಗ್ಗೆ ಅನಿಸಿಕೆ ಪ್ರಸ್ತುತಪಡಿಸುತ್ತಿರುವೆ.

* 'ಈ ಬೇಂದ್ರೆ' – ಬೇಂದ್ರೆಯವರನ್ನು ಅರಿಯಲು ಹತ್ತಿರದ ನೋಟಕೊಡುವ ಕವನ ಸರಿಸುಮಾರು ಸಮಗ್ರ ಎನ್ನುವಂಥ ವಿವರಗಳನ್ನೊಳಗೊಂಡು ಹೂ ಕಟ್ಟಿ ಪರಿಮಳಿಸಿದೆ. 'ಕುಟುಕುತ್ತಾನೆ ನಂಜೇರುವುದಿಲ್ಲ' ಅರ್ಥಪೂರ್ಣವೇ ಸರಿ.

* 'ಸಿಗ್ಮಂಡ್ ಫ್ರಾಯ್ಡ್‌ನಿಗೆ ನಮಸ್ಕಾರ' – ಡಾಕ್ಟರೊಬ್ಬರ ಕವನ ಜಗತ್ತಿನಲ್ಲಿ ವಿಕ್ಷಿಪ್ತ ಮನೋವಿಕಾರದವರ, ರಾಜಕೀಯಾಸಕ್ತರ ಅಟ್ಟಹಾಸ ಇವಕ್ಕೆ ಮನದ ಅಸಂಸ್ಕೃತ ಕೃತ್ಯಕ್ಕೆ ಕಡಿವಾಣ ಮನಃಸ್ಥಿತಿಯಾಗಬೇಕು. ಅವಕ್ಕೆಲ್ಲ ಫ್ರಾಯ್ಡ್‌ನ ಕಿವಿಮಾತು ಅನುಕರಣೆಯನ್ನು ೧೫೦ನೇ ಜನ್ಮದಿನಕ್ಕಾಗಿ ಸ್ಮರಿಸಿಕೊಂಡಿದ್ದಾರೆ. ಉತ್ತರ ನಮ್ಮ ಮನದಲ್ಲಿದೆ. ಇದು ಚಿಂತನಾರ್ಹ ಕವನವಾಗಿದೆ.

* 'ಕೆದಕದಿರು ಇತಿಹಾಸ' – 'ಆವರಣ', 'ಆನು ದೇವಾ ಹೊರಗಣವನು...' ಬರೆದ ಶಿಖರ ಸಂಶೋಧಕರಿಗೆ ಅಲ್ಲ ಅಲ್ಲ ಪಾತಾಳಸಂಶೋಧಕರಿಗೆ ಸೂಕ್ತ ಉತ್ತರವಾದ ಕವನವಾಗಿದೆ.

ಶಿವಮೊಗ್ಗ **ಎಸ್. ಎಂ. ಮಹೇಶ್ವರಮೂರ್ತಿ**

ಇತಿಹಾಸಕ್ಕೆ ಸಂಬಂಧಿಸಿದ '೧೮೫೭ರ ದಂಗೆ'ಯ ಕೆಲವು ಗೊಂದಲಾಂಶಗಳನ್ನು ನೀವು ಬಗೆಹರಿಸಿದ್ದೀರಿ. ಆದರೆ ಕೊನೆಗೂ ಅದು ಸಿಪಾಯಿದಂಗೆಯೇ ಅಥವಾ ಸ್ವಾತಂತ್ರ್ಯ ಸಂಗ್ರಾಮವೇ ಎಂದು ಸ್ಪಷ್ಟಪಡಿಸಿಲ್ಲ. ಆದರೂ ಹಲವು ವಿಚಾರಪೂರಿತ ಅಂಶಗಳ ಬಗ್ಗೆ ಸ್ಪಷ್ಟ ಮಾಹಿತಿಯನ್ನು ನೀಡಿದ್ದೀರಿ.

'ನೆಮ್ಮದಿಯ ನಾಳೆ ನಮ್ಮದು' ಪತ್ರಿಕೆಯು ಇನ್ನೂ ಹಲವು ಪ್ರಮುಖ ವಿಷಯಗಳನ್ನು ಜನತೆಗೆ ಮುಟ್ಟಿಸುವಲ್ಲಿ ಯಶಸ್ವಿಯಾಗಲೆಂದು ಆಶಿಸುತ್ತೇನೆ.

ಬೆಂಗಳೂರು **ಚನ್ನಪಲ್ಲಿ ಗೋ. ಧನಂಜಯ**

> *'ಪತ್ರಗಳು' ವಿಭಾಗಕ್ಕೆ ಬರೆಯುವವರು ತಮ್ಮ ಪೂರ್ತಿ ವಿಳಾಸವನ್ನು ನೀಡಬೇಕು. ಸುಳ್ಳು ಅಥವಾ ತಪ್ಪು ವಿಳಾಸ ಬರೆಯಬಾರದೆಂದು ವಿನಂತಿ. ಪತ್ರಗಳು ಸಂಕ್ಷಿಪ್ತವಾಗಿರಬೇಕು.*
> — ಸಂಪಾದಕ

ಶ್ರೀ ಕಲಿಗಣನಾಥ ಗುಡದೂರು ಅವರ 'ಮತಾಂತರ' ಕಥೆ ಅತ್ಯದ್ಭುತವಾಗಿದೆ. ಲೇಖಕರು ಹೇಳಿದ್ದಾರೆ : ಇಲ್ಲಿಯ ಹಿಂದೂ ಧರ್ಮೀಯರು ದುಷ್ಟರು, ಸಂಕುಚಿತ ಮನೋಭಾವವುಳ್ಳವರು, ಅಮಾನವೀಯರು ಎಂದು. ಹೀಗಿದ್ದರೂ ಈ ಧರ್ಮ ಸಾವಿರಾರು ವರ್ಷಗಳಿಂದ ಇದ್ದೇ ಇದೆಯಲ್ಲ.

ಕಲಿಗಣನಾಥರವರು ಒಂದು ಅದ್ಭುತ ಕಥೆ ಹೆಣೆದು ಮುಸ್ಲಿಂರ ಮತ್ತು ಕ್ರಿಶ್ಚಿಯನ್ ಧರ್ಮದವರ ಉದಾರ ಹೃದಯವನ್ನು ಕೊಂಡಾಡಿದ್ದು ಮುಖ್ಯವಾಗಿದೆ. ಆದರೆ ಈ ಧರ್ಮದ ಅನೇಕ ದೇಶಗಳು ಈ ಭೂಮಿಯ ಮೇಲಿವೆ. ಆ ದೇಶಗಳಲ್ಲಿ ಯಾಕೆ ಶಾಂತಿ ಇಲ್ಲ? ಅವರ ಧರ್ಮದಲ್ಲಿ ಚಾತುರ್ವರ್ಣ್ಯ ಅಸ್ಪೃಶ್ಯತೆ ಇಲ್ಲ. ಹೀಗಿದ್ದರೂ ಅಲ್ಲೇಕೆ ಇಷ್ಟೊಂದು ರಕ್ತಪಾತ ನಡೆದಿದೆ ?

ಬೆಂಗಳೂರು **ಚಂದ್ರಶೇಖರ್ ಪಾಟೀಲ್**

### ಎಲ್ಲಾ ಓ.ಕೆ. – ಆತ್ಮಹತ್ಯೆ ಯಾಕೆ ?

ಎಲ್ಲ ಮೊಗ್ಗುಗಳಿಗೂ ಅರಳುವ ಭಾಗ್ಯವಿದೆ, ಎಲ್ಲೋ ಅಚಾನಕ್ ಆಗಿ ಉದುರಿಬೀಳುವುದು ಇದ್ದೇ ಇದೆ. ಆದರೆ ಯಾವ ಹೂವಿಗೂ ಮೊಗ್ಗಾಗುವ ಭಾಗ್ಯವಿರುವುದಿಲ್ಲ, ಅದನ್ನು ನಿಸರ್ಗವೂ ಸಹಿಸುವುದಿಲ್ಲ. ಇನ್ನೇನು ಮೊಮ್ಮಕ್ಕಳನ್ನು ಕಂಡಾಯಿತು, ಕೈ-ಕಾಲುಗಳೂ ಬಿದ್ದುಹೋಗಿವೆ, ಇಂದೋ ನಾಳೆನೋ ಗೋರಿ ಸೇರುವ ಜೀವ ಎಂದು ಹಾಸಿಗೆ ಮೇಲೆ ಮುದುಡಿಕೊಂಡಿರುವ ಪ್ರಾಣವೊಂದು ತನ್ನನ್ನು ಕಾಣಲು ಬರುವವರ ಮುಂದೆ ಮಾತನಾಡುತ್ತಲೇ ಕಣ್ಣಂಚಿನ ಮಂದ ಬೆಳಕಿನಲ್ಲಿ ಇನ್ನಷ್ಟು ದಿನ ಬದುಕಿ ಉಳಿಯುವ ಆಸೆಯನ್ನು ಸ್ವಗತದಲ್ಲಿ ತೋರುತ್ತಲೇ ಇರುತ್ತದೆ. ಇನ್ನೊಂದೆಡೆ ಬಾಳಲು-ಬದುಕಲು ಜೀವನ ಸುದೀರ್ಘವಾಗಿ ಹಾಸಿಕೊಂಡಿದೆ. ಅದೇ ತಾನೇ ಹೆಜ್ಜೆಗಳು ದಾರಿಗುಂಟ ಮೂಡುವಾಗಲೆ ಊರುವ ಜೀವಕ್ಕೆ ಬೇಸರಾಗಿ, ಖಿನ್ನಗೊಂಡ ಮನಸಿನ ಕೈಸೆರೆಯಾಗಿ ನಡೆಯುವ, ಓಡುವ ತ್ರಾಣವಿದ್ದರೂ ಕುಸಿದು ಬೀಳುವ, ಇನ್ನೆಂದೂ ಯಾರೂ ಎತ್ತಲಾಗದ ಲೋಕ ಸೇರುವ ಎಳೆಯ ಮೈ-ಮನಸ್ಸುಗಳಿಗೆ ಏನೆನ್ನಬೇಕು ?

ಹೌದು, ಇದು ತನ್ನನ್ನು ತಾನು ಕೊಂದುಕೊಳ್ಳುವ

---

*ಹಿಂದಿನ ಪುಟದಿಂದ (ಸಂಪಾದಕೀಯ)*

ರಾಜನೀತಿಯಾಗಬಲ್ಲುದೆ ? ಯಾವುದೇ ತನಿಖೆಗಳು ತೆರೆಮರೆಯಲ್ಲಿ ಮೊದಲು ನಡೆದು, ಖಾತ್ರಿಯಾದಾಗಷ್ಟೆ ಬಯಲಿಗೆ ಬರಬೇಕು. ಭಯೋತ್ಪಾದಕನ ಬಗ್ಗೆ ಮಾತನಾಡುವಾಗ, ಅವನ ಮತಧರ್ಮ ಮತ್ತು ತಾಯಿನಾಡು ದೇಶಗಳನ್ನು ಗಂಟುಹಾಕಿ ಮಾತನಾಡುವುದು ಸರ್ವಥಾ ಸರಿಯಲ್ಲ. ಭಯೋತ್ಪಾದಕನಿಗೆ ರಾಷ್ಟ್ರವೋ, ದೇಶಭಕ್ತಿಯೋ, ಮತಧಾರ್ಮಿಕತೆಯೋ ಇಲ್ಲ ಎಂಬ ನಮ್ಮ ಪ್ರಧಾನಿಯವರ ಹೇಳಿಕೆ ಸಾಧುವಾದುದು. ಆದರೆ ಪಾಶ್ಚಿಮಾತ್ಯ ಬಣದ ರಾಷ್ಟ್ರಗಳೊಡನೆ ಮೊದಲಿಗೆ ಆರ್ಥಿಕವಾಗಿ, ಈಗ ರಕ್ಷಣಾ ವಿಷಯದಲ್ಲಿ ಒಡಂಬಡಿಕೆ ಮಾಡಿಕೊಂಡು ಅವರ ತೆಕ್ಕೆಗೆ ಬೀಳಲು ಕಾತುರರಾಗಿರುವ ಇವರ ಕಳಕಳಿ ಪ್ರಾಮಾಣಿಕವಾದುದೇ ಎಂಬುದು ಸಂದೇಹಾಸ್ಪದವಾಗಿದೆ. ಅನುಮಾನಕ್ಕೆ, ಸಿಕ್ಕಿರುವ ಯುವಕರು ಚಿಕ್ಕಂದಿನಲ್ಲಿ ಸೌದಿ ಅರೇಬಿಯಾದಲ್ಲಿ ಬೆಳೆದು ಮತ ಧಾರ್ಮಿಕ ಅಂಧಶ್ರದ್ಧೆ, ಕಟ್ಟರ್ ಪಂಥದ ಮನೋಭಾವವನ್ನು ಮೈಗೂಡಿಸಿಕೊಂಡಿರುವಂತಿದೆ. ಆದರೆ, ಇಲ್ಲಿಗೆ ಬಂದದ್ದೆ ಉನ್ನತ ಶಿಕ್ಷಣಕ್ಕಾಗಿ. ಹಾಗಾಗಿ ಅವರು ಇಲ್ಲಿದ್ದಾಗಲೇ ಭಯೋತ್ಪಾದಕರ ಗುಂಪಿಗೆ ಸೇರಿದ್ದರೆಂದು ಅಥವಾ ಸೇರುವ ಯೋಜನೆ ಹಾಕಿದ್ದರೆಂದು ಹೇಳುವಂತಿಲ್ಲ. ಮುಂದೆ ಇಂಗ್ಲೆಂಡಿಗೆ ವೈದ್ಯವೃತ್ತಿ ನಡೆಸಲು ಹೋದಾಗ ಅವರಿಗೆ ಇರಾಕೀ ವೈದ್ಯನ ಸಖ್ಯ ದೊರೆತದ್ದು. ಇರಾಕಿ ವೈದ್ಯನಿಗೆ ಬ್ರಿಟನ್ ಮತ್ತು ಅಮೆರಿಕದವರ ವಿರುದ್ಧ ಹೊಗೆ ಸೂಸುವ ದ್ವೇಷ ಇದ್ದಿದ್ದರೆ ಆಶ್ಚರ್ಯವಿಲ್ಲ. ಈಗ ಇವರೆಲ್ಲಾ ಕಲೆತು ಭಯೋತ್ಪಾದನೆಯ ಕೃತ್ಯಕ್ಕೆ ಮುನ್ನುಗ್ಗಿದುದರ ಬಗ್ಗೆ ವಿವರಗಳು ಸಂಪೂರ್ಣ ದೊರೆತಿಲ್ಲವಾಗಿ ಅದರ ಬಗ್ಗೆ ಈಗಲೇ ಏನೂ ಹೇಳುವಂತಿಲ್ಲ. ಈ ಕುರಿತು ಪ್ರಚಾರವನ್ನು ರದ್ದಿ ಮಾಧ್ಯಮಗಳು ಮಾಡುತ್ತಿವೆ ಅಷ್ಟೆ.

ಸಕಲ ಕುಕೃತ್ಯಗಳೂ ಸಾಬೀತಾದ ಪ್ರಸಂಗದಂತೆ ಇದನ್ನು ಪರಿಗಣಿಸಿ, ಈ ಗೊಂದಲಮಯ ಹಾಗೂ ಅಸ್ಪಷ್ಟ ಸಂಗತಿಗಳನ್ನೇ ಮುಂದಿಟ್ಟುಕೊಂಡು ಇಡೀ ಮುಸ್ಲಿಂ ಸಮುದಾಯವನ್ನು ಮಾಧ್ಯಮಗಳು ತೀವ್ರ ಪರೀಕ್ಷೆಗೆ ಒಳಪಡಿಸಿರುವುದು ಸಾಧುವಲ್ಲ. ಹೀಗೆಂದ ಮಾತ್ರಕ್ಕೆ ಮುಸ್ಲಿಂ ಸಮುದಾಯಕ್ಕೆ ಇದರಲ್ಲಿ ಏನೂ ಕರ್ತವ್ಯವಿಲ್ಲವೆಂದಲ್ಲ. ಇಲ್ಲಿಯವರೆಗೂ ಭಾರತೀಯ ಪೌರರು ಅಂತರರಾಷ್ಟ್ರೀಯ ಭಯೋತ್ಪಾದನೆಯ ಬಲೆಯಲ್ಲಿ ಸೇರಿಕೊಂಡು, ಹಿಂಸಾಕೃತ್ಯಗಳಲ್ಲಿ ತೊಡಗಿಲ್ಲವೆಂಬ ಒಂದು ಹಿರಿಮೆ ಇದೆ. ಇದನ್ನು ರಕ್ಷಿಸುವುದು ಅವರ ಹಾಗೂ ಎಲ್ಲ ಭಾರತೀಯರ ಕರ್ತವ್ಯ. ತಾವು ಎಸಗಿದ ಇರಾಕ್ ವಿರುದ್ಧ, ಆಫ್‌ಘಾನಿಸ್ತಾನದ ವಿರುದ್ಧ, ದುರಾಕ್ರಮಣವೇ ಮುಂತಾದವುಗಳ ಕೆಟ್ಟ ಪರಿಣಾಮವನ್ನು ಪಾಶ್ಚಿಮಾತ್ಯ ರಾಷ್ಟ್ರಗಳೇ, ಅದರಲ್ಲೂ ಅಮೆರಿಕವೇ, ಅನುಭವಿಸಬೇಕು. ಹಾಗೆಯೇ ತಮ್ಮ ಸ್ವಂತ ಸಮಸ್ಯೆಯನ್ನು ಜಾಗತಿಕ ಸಮಸ್ಯೆ ಎಂಬಂತೆ ವರ್ಣಿಸುವುದನ್ನು ನಾವು ವಿರೋಧಿಸಬೇಕು. ಮದರಸಾಗಳು, ಪಾಠಶಾಲೆಗಳು ಮುಂತಾದುವುಗಳನ್ನು ಸಾಂಪ್ರದಾಯಿಕ ಮತಧರ್ಮೀಯ ಶಿಕ್ಷಣದ ಮಿತಿಗೊಂಡ ಉದ್ದೇಶಕ್ಕೆ ಮೀಸಲಾಗಿಟ್ಟು, ಎಲ್ಲ ಮಕ್ಕಳಿಗೆ ಆಧುನಿಕ ಶಿಕ್ಷಣವನ್ನು ಕಡ್ಡಾಯ ಮಾಡುವುದು ತುರ್ತುವಿಷಯ. ಪಾಕಿಸ್ತಾನದಲ್ಲಿ ಶೇಕಡ ೪ರಷ್ಟು ಮಕ್ಕಳಷ್ಟೇ ಮದರಸಾಕ್ಕೆ ಹೋಗುತ್ತಾರಂತೆ. ಲಾಲ್ ಮಸ್‌ಜಿದ್ ಪ್ರಕರಣವನ್ನು ನೋಡಿದರೆ, ಈ ಸಣ್ಣ ಸಂಖ್ಯೆಯೂ ಅದೆಷ್ಟು ಅಪಾಯಕಾರಿ ಆಗಬಹುದು ಎಂಬುದನ್ನು ತಿಳಿಸುತ್ತದೆ.

ಒಂದು ಬಗೆಯ ಭಯಂಕರ ವಿಕೃತ ಕ್ರಿಯೆ. ಎಲ್ಲೋ ಒಂದೆಡೆ ಚಿಕ್ಕ ಗಾಯವಾದರೂ ಅಮ್ಮಾ! ಎಂದು ಗೋಗರೆಯುವ ಈ ಜೀವ ಇದ್ದಕ್ಕಿದ್ದಂತೆ ಕರ್ಮ ಕಠೋರವಾಗಿ ತನ್ನನ್ನೇ ತಾನು ಕೊಂದುಕೊಳ್ಳುವುದು ಎಂದರೆ ವಿಕೃತವಲ್ಲದೆ ಇನ್ನೇನು? ಅದರಲ್ಲೂ ಮತ್ತೆ ಎಳೆಯ ಜೀವಗಳನ್ನೇ ಇಷ್ಟಪಡುವ ಈ ಪಿಡುಗಿಗೆ ಆತ್ಮಹತ್ಯೆ ಎಂದು ಕರೆಯುವ ರಾದರೂ ಅದರ ಬೀಜ ಬೀಳುವ ಬಗೆ, ಚಿಗುರುವ ಬಗೆ, ಬೆಳೆಯುವ ಬಗೆ ಯಾರಿಗೂ ಖಚಿತವಾಗಿ ತಿಳಿದಿರುವುದಿಲ್ಲ. 'ನಿನ್ನೆ ತಾನೆ ಮಾತನಾಡಿಸಿದ್ದೇನೆ, ಚೆನ್ನಾಗಿಯೇ ಮಾತನಾಡಿದ' ಎಂದು ಒಬ್ಬನೆಂದರೆ, ಇನ್ನೊಬ್ಬ 'ಆ ಹುಡುಗ ಆತ್ಮಹತ್ಯೆ ಮಾಡಿಕೊಳ್ಳುವ ಥರಾ ಇರಲಿಲ್ಲ' ಎಂದು ಮಗದೊಬ್ಬ. 'ಈ ಹುಡುಗ್ರೇ ವಿಚಿತ್ರ. ಪರೀಕ್ಷೆಯಲ್ಲಿ ಫೇಲಾದ್ರೆ ಏನಂತೆ, ಅದಕ್ಕೆ ಆತ್ಯಹತ್ಯೆ ಮಾಡಿಕೊಳ್ಳೋದೆ?' ಹೀಗೆ ಎಲ್ಲರೂ ಅವರವರ ಭಾವಕ್ಕೆ ಇಣುಕಿ ಒಂದೊಂದು ಡೈಲಾಗ್ ಹೊಡೆದು ತಣ್ಣಗಾಗಿಬಿಟ್ಟರೆ ಅಲ್ಲಿಗೆ ಮುಗಿಯಿತು. ಇನ್ನು ಸಮಾಜ ಶಾಸ್ತ್ರಜ್ಞರು ಇದೊಂದು ಸಾಮಾಜಿಕ ಪರಿಣಾಮದ ಕ್ರಿಯೆ ಎಂದರೆ, ಮನಃಶಾಸ್ತ್ರಜ್ಞರು ತಮ್ಮದೇ ಆದ ಸಿದ್ಧಾಂತಗಳ ಮೂಲಕ ಇದೊಂದು ಮಾನಸಿಕ ಕ್ರಿಯೆ ಎನ್ನುವರು. ಅಂತಿಮ ಸತ್ಯ ತನ್ನನ್ನು ತಾನು ಕೊಂದುಕೊಂಡವನಿಗೇ ಗೊತ್ತು!

ಇನ್ನು ಈ ಆತ್ಮಹತ್ಯೆಗೆ ಇಂಥದೆ ಒಂದು ಖಚಿತ ಸೂತ್ರ ವಾಗಲೀ, ಕಾರಣವಾಗಲೀ ಇಲ್ಲ. ಅಲ್ಲಿ ಅನೇಕ ಸಂಗತಿಗಳು ಮೇಳೈಸಿಕೊಂಡು ಮಾರಕವಾಗಿ ನಟಿಸಿ ಅವನ ಮನಸ್ಸನ್ನು ಖಿನ್ನವಾಗಿಸುತ್ತವೆ. ಇಂಥಾ ಅನೇಕ ಸಂಗತಿಗಳ ಮಧ್ಯೆಯೇ ಯಾವದೋ ಒಂದೆರಡು ಬಾದಶಹಗಳಾಗಿ ಕೆಲಸ ಮಾಡಿರುತ್ತವೆ. ಇವು ಆತನ ಮೆದುಳಿಗೆ ಬಟ್ಟೆ ಕಟ್ಟಿ, ಕಣ್ಣಿಗೆ ಬಟ್ಟೆ ಕಟ್ಟಿ ಯಾವುದೂ ಹಿತವೆನಿಸದಂತೆ ಮಾಡುತ್ತವೆ. ಮುಂದಿನ ಹಂತವೆ ತನ್ನನ್ನು ತಾನು ಕೊಂದುಕೊಳ್ಳುವ ಕ್ರಿಯೆ. ಪರೀಕ್ಷೆಯ ಸಂದರ್ಭದಲ್ಲಿ ಇದು ಹೆಚ್ಚು ಜರುಗಲು ಕಾರಣವನ್ನು ಹುಡುಕಿ ಕೆಲ ಅಧ್ಯಯನಗಳು, ಸಂಶೋಧನೆಗಳು ನಡೆದಿವೆ. ಇತ್ತೀಚೆಗೆ ಡಾ॥ ರಾಜೇಶ್ ಪಾರಿಖ್ ಎಂಬ ವೈದ್ಯರು ಮುಂಬೈನ ಸೇಂಟ್ ಝೇವಿಯರ್ ಕಾಲೇಜಿನ ಸುಮಾರು ೨೨೩೭ ವಿದ್ಯಾರ್ಥಿಗಳನ್ನು ಅಧ್ಯಯನ ಮಾಡಿ ಹೀಗೆ ಹೇಳಿರುವರು. ಇವರಲ್ಲಿ ಸುಮಾರು ೨೫ ಪ್ರತಿಶತ ಹುಡುಗರು ಮತ್ತು ೧೮ ಪ್ರತಿಶತ ಹುಡುಗಿಯರು ತಮ್ಮ ಅಧ್ಯಯನದ ವೇಳೆಯಲ್ಲಿ ಖಿನ್ನರಾಗಿ ಕಂಡ ಬಗ್ಗೆ ಅವರು ವರದಿ ಮಾಡಿರುವರು. ಸುಮಾರು ಶೇಕಡಾ ೩೫ ವಿದ್ಯಾರ್ಥಿಗಳು ತಮ್ಮ ಭವಿಷ್ಯದ ಬಗ್ಗೆಯೂ, ಶೇಕಡಾ ೨೨ ವಿದ್ಯಾರ್ಥಿಗಳು ಸಂಬಂಧಗಳ ಬಗ್ಗೆಯೂ, ಶೇಕಡಾ ೧೬ ವಿದ್ಯಾರ್ಥಿಗಳು ಕೌಟುಂಬಿಕ ಪರಿಸರದ ಬಗ್ಗೆಯೂ ಮತ್ತೆ ಶೇಕಡಾ ೧೨ ವಿದ್ಯಾರ್ಥಿಗಳು ತಮ್ಮ ಪರೀಕ್ಷೆಯ ಬಗ್ಗೆ ಅಪಾರವಾಗಿ ತಲೆಕೆಡಿಸಿಕೊಂಡ ಬಗ್ಗೆಯೂ ಅವರು ಚರ್ಚಿಸಿರುವರು. ಒಟ್ಟಾರೆ ಶೇಕಡಾ ೧೭ ಕಲಾವಿಭಾಗದ ವಿದ್ಯಾರ್ಥಿಗಳು ಮತ್ತು ೧೯ ಪ್ರತಿಶತ ವಿಜ್ಞಾನ ವಿಭಾಗದ ವಿದ್ಯಾರ್ಥಿಗಳು ಮಾನಸಿಕವಾಗಿ ಕಿರಿಕಿರಿಯನ್ನು ಅನುಭವಿಸಿದ್ದ ಬಗ್ಗೆ ವರದಿ ಮಾಡಿರುವರು. ಇಂಥ ಮಾನಸಿಕ ಖಿನ್ನತೆಯ ಮಧ್ಯೆ ವೈದ್ಯರ ಸಲಹೆ ಪಡೆಯುವವರು ಕೇವಲ ೩ ಪ್ರತಿಶತ ಮಾತ್ರ. 'ಬ್ರಿಟಿಷ್ ಮೆಡಿಕಲ್ ಜರ್ನಲ್' ವರದಿ ಮಾಡಿರುವ ಹಾಗೆ ಜಗತ್ತಿನಲ್ಲಿ ಅತಿ ಹೆಚ್ಚು ಆತ್ಮಹತ್ಯೆಗಳು ಭಾರತದಲ್ಲಿ ಜರುಗುತ್ತವೆ. ಸುಮಾರು ಶೇಕಡಾ ೫೦ ಯುವಕರು ಇದಕ್ಕೆ ಕಾರಣ ಕುಟುಂಬ ಮತ್ತು ಸ್ನೇಹಿತರು ಎನ್ನುವ ಅಂಶವನ್ನು ಹೊರಹಾಕಿರುವರು. ಇತ್ತೀಚೆಗೆ ರಾಬರ್ಟ್ ಯಂಗ್ ಎನ್ನುವ ಗ್ಲಾಸ್ಗೋ ವಿಶ್ವವಿದ್ಯಾಲಯದ ಸಂಶೋಧಕ ಸುಮಾರು ೧೨೫೮ ವಿದ್ಯಾರ್ಥಿಗಳನ್ನು ಅಧ್ಯಯನ ಮಾಡಿ ಗೋಥ್ ಜೀವನ ಶೈಲಿಯನ್ನು ಅನುಸರಿಸುವವರಲ್ಲಿ ಆತ್ಮಹತ್ಯೆ ಹೆಚ್ಚು ಎಂದಿರುವರು. ಗೋಥ್ ಸಂಸ್ಕೃತಿ ಎನ್ನುವದು ಕಪ್ಪು ಬಟ್ಟೆ ಮತ್ತು ಸಂಗೀತದ ಗೀಳಿರುವವರು ಎಂದರ್ಥ. ದೆಹಲಿ ವಿಶ್ವ ವಿದ್ಯಾಲಯದಲ್ಲಿ ಶಿಕ್ಷಣ ಶಾಸ್ತ್ರದ ಉಪನ್ಯಾಸಕಿಯಾಗಿರುವ ನಮಿತಾ ರಂಗನಾಥನ್ ಹೇಳುವಂತೆ ಆತ್ಮಹತ್ಯೆಗೆ ಮನಸು ಮಾಡುವ ವಿದ್ಯಾರ್ಥಿಗಳು ತಮ್ಮ ಮಾನಸಿಕ ಸಮತೋಲನ ವನ್ನು ಕಳೆದುಕೊಂಡಿರುತ್ತಾರೆ ಎಂದಿರುವರು. ಮನೋವೈದ್ಯೆ ದಿವ್ಯಾ ಪ್ರಸಾದ ಹೇಳುವಂತೆ ಕೌಟುಂಬಿಕ ರಚನೆ, ಕಡಿಮೆ ದರ್ಜೆಯ ಫಲಿತಾಂಶ, ವಿಘಟಿತ ವ್ಯಕ್ತಿತ್ವಗಳು ಆತ್ಮಹತ್ಯೆಗೆ ಎಡೆಮಾಡಿಕೊಡುತ್ತವೆ ಎಂದಿರುವರು. ಡರ್ಖಿಹೀಮ್ ಎನ್ನುವ ಫ್ರೆಂಚ್ ಸಮಾಜಶಾಸ್ತ್ರಜ್ಞ ಈ ಆತ್ಯಹತ್ಯೆಯ ಬಗ್ಗೆ ತುಂಬಾ ಗಹನವಾಗಿ ಅಧ್ಯಯನ ಮಾಡಿ ಆತ್ಮಹತ್ಯೆ ಎನ್ನುವ ಹೆಸರಿನ ಗ್ರಂಥವನ್ನೇ ರಚಿಸಿರುವನು. ಅದರಲ್ಲಿ ಆತ ೩ ಪ್ರಕಾರದ ಆತ್ಮಹತ್ಯೆಗಳನ್ನು ಗುರುತಿಸಿರುವನು. ಒಂದನ್ನು ಸಮೂಹ ಪ್ರೇರಿತ ಆತ್ಮಹತ್ಯೆ ಎಂದೂ ಎರಡನೆಯದನ್ನು ಸ್ವಯಂಪ್ರೇರಿತ ಆತ್ಮಹತ್ಯೆ ಎಂದೂ ಮೂರನೆಯದನ್ನು ನಿಯಮರಾಹಿತ್ಯತೆಯ ಆತ್ಮಹತ್ಯೆ ಎಂದೂ ಕರೆದಿರುವನು.




ಅವನ ಪ್ರಕಾರ ಆತ್ಮಹತ್ಯೆಗೆ ಮಾನಸಿಕ ಸಂಗತಿಗಳು ಮುಖ್ಯವಾಗಿರದೆ ಸಾಮಾಜಿಕ ಸಂಗತಿಗಳೇ ಮುಖ್ಯ. ವ್ಯಕ್ತಿ ಯಾವಾಗ ಸಮಾಜದಲ್ಲಿ ಬೇರು ಕಿತ್ತಿದ ಭಾವನೆಯನ್ನು ಅನುಭವಿಸುತ್ತಾನೋ ಆಗ ಈ ಆತ್ಮಹತ್ಯೆ ಜರುಗುತ್ತದೆ ಎನ್ನುವುದು ಅವನ ವಾದ.

**ಆತ್ಮಹತ್ಯೆಗೆ ಕಾರಣಗಳು**

ಇಂಥದೇ ಒಂದು ನಿರ್ದಿಷ್ಟ ಕಾರಣ ಇಲ್ಲವೆಂದರೂ ಕೆಲವು ಕಾರಣಗಳ ಸಮೂಹವನ್ನಾದರೂ ಇಲ್ಲಿ ಹೆಸರಿಸಬೇಕು.

* ಕೌಟುಂಬಿಕ ವಿಘಟನೆ
* ಪ್ರೀತಿ-ಪ್ರೇಮದಲ್ಲಿ ವಿಫಲತೆ
* ಪರೀಕ್ಷೆಯಲ್ಲಿ ವಿಫಲತೆ
* ಗುರಿ ತಲುಪುವಲ್ಲಿಯ ವಿಫಲತೆ
* ಅತಿಯಾದ ಅಹಂ ಭಾವನೆ
* ಎಲ್ಲ ಕಡೆಗೂ ನಿರಾಶಾಭಾವನೆ
* ಅತಿಯಾದ ಒತ್ತಡ, ಹೊಣೆಗಾರಿಕೆ
* ಅಸಹಾಯಕ ಸ್ಥಿತಿ
* ಉತ್ಪೀಡನೆಯಾಗಿರುವ ರೋಗಗಳು
* ದೋಷಪೂರಿತ ಶಿಕ್ಷಣ.

ಕೊನೆಯ ಸಂಗತಿ ವಿದ್ಯಾರ್ಥಿಗಳ ಆತ್ಮಹತ್ಯೆಗೆ ಮುಖ್ಯ ಕಾರಣಗಳಲ್ಲೊಂದು. ಅದು ಕೇವಲ ಫಲಿತಾಂಶಕ್ಕೆ ಮಾತ್ರ ಸಂಬಂಧಿಸಿಲ್ಲ. ಶಿಕ್ಷಣದ ಪ್ರಮುಖ ಗುರಿ ವ್ಯಕ್ತಿಯ ವ್ಯಕ್ತಿತ್ವದ ಪರಿಪೂರ್ಣ ಬೆಳವಣಿಗೆ. ಹಾಗಾದಾಗ ಆತ್ಮಹತ್ಯೆ ಪ್ರಶ್ನೆಯೇ ಬರುವುದಿಲ್ಲ. ದುರಂತವೆಂದರೆ ಇಂದಿನ ಶಿಕ್ಷಣ ನಾಲ್ಕಾರು ವಿಷಯಗಳನ್ನು ಓದಿ ಅಂಕಗಳನ್ನು ಗಿಟ್ಟಿಸುವುದರೊಂದಿಗೆ ತಳಕು ಹಾಕಿಕೊಂಡಿದೆ. ಪರಿಣಾಮವಾಗಿ ಸದೃಢವಾದ ದೇಹದಲ್ಲಿ ಸದೃಢವಾದ ಮನಸನ್ನು ರೂಪಿಸುವುದು ಸಾಧ್ಯ ವಾಗುತ್ತಿಲ್ಲ. ಅದರ ಪರಿಣಾಮವೇ ನಿರೀಕ್ಷಿತ ಅಂಕಗಳು ಬಾರದಿದ್ದಾಗ ತಮ್ಮ ಜೀವವನ್ನೇ ಬಲಿ ಕೊಡುವಷ್ಟು ಬುದ್ಧಿಗೇಡಿಗಳಾಗುತ್ತಾರೆ. ಇನ್ನು ಪಾಲಕರು ಕೂಡ ಮತ್ತೆ ಮತ್ತೆ ಆ ಎದುರಿನ ಮನೆಯ ಹುಡುಗ ನೋಡು, ನಿನ್ನ ಫ್ರೆಂಡ್ ನೋಡು ತುಂಬಾ ಸ್ಕೋರ್ ಮಾಡಿದನು, ನಿನಗೇನು ಧಾಡಿ? ಈ ಸಾರಿಯಾದರೂ ಮಾಡು, ಎಂದು ತಮ್ಮ ಮಕ್ಕಳ ಸಾಮರ್ಥ್ಯವನ್ನು ಮೀರಿ ನಿರೀಕ್ಷಿಸುವ ಗುಣವನ್ನು ಬಿಡಬೇಕು. ನಿಮ್ಮ ಮಕ್ಕಳ ಅರ್ಹತಾ ಪತ್ರಕ್ಕಿಂತಲೂ ಅವನಲ್ಲಿರುವ ನಿಜವಾದ ಅರ್ಹತೆಗೆ ಬೆಲೆ ಕೊಡುವುದನ್ನು ಕಲಿಯಿರಿ.

**ಆತ್ಮಹತ್ಯೆ ತಡೆಯುವಲ್ಲಿ ಸಲಹೆಗಳು**

ಹೀಗೆ ಅನೇಕ ಕಾರಣಗಳ ಮೂಲಕ ಜರುಗ ಬಹುದಾದ ಆತ್ಮಹತ್ಯೆಗೆ ಖಚಿತವಾದ ಪರಿಹಾರವನ್ನು ಸೂಚಿಸುವುದು ಕಷ್ಟವಾದರೂ ಈ ಕೆಳಗಿನಂತೆ ಸಲಹೆಗಳನ್ನು ಕೊಡಬಹುದಾಗಿದೆ :

* ಪರೀಕ್ಷೆ ಫಲಿತಾಂಶ ಬರುವ ಸಂದರ್ಭದಲ್ಲಿ ನಿಮ್ಮ ಮಗ – ಇಲ್ಲವೇ ಮಗಳನ್ನು ಏಕಾಂಗಿಯಾಗಿರಲು ಬಿಡಬೇಡಿ. ಯಾಕೆಂದರೆ ಒಂಟಿತನವೂ ಆತ್ಮಹತ್ಯೆಗೆ ಪ್ರೇರೇಪಿಸುತ್ತದೆ.
* ನಿಮ್ಮ ಮಗನ/ಮಗಳ ಮನಃಸ್ಥಿತಿಯನ್ನು ಅರಿತು ಅವರೊಂದಿಗೆ ವರ್ತಿಸಿ. ಅವಶ್ಯಕವೆನಿಸಿದರೆ ಮನೋಚಿಕಿತ್ಸೆ ಕೊಡಿಸಿ.
* ನಿಮ್ಮ ಮಕ್ಕಳಲ್ಲಿ ಭರವಸೆಯನ್ನು ತುಂಬಬೇಕೆ ಹೊರತು ಅಧೀರರನ್ನಾಗಿ ಮಾಡಬಾರದು.
* ಅವನು ಮಾನಸಿಕ ಖಿನ್ನನಾಗಿರುವಾಗ ಹೆಚ್ಚು ಗಮನ ನೀಡಬೇಕು. ಅವನ ಚಟುವಟಿಕೆಗಳ ಬಗ್ಗೆ ನಿಗಾ ವಹಿಸಬೇಕು.
* ಶಿಕ್ಷಣ ಸಂಸ್ಥೆಗಳಲ್ಲಿ ಪ್ರವೇಶ ಪಡೆಯುವಾಗ ವಿಷಯಗಳ ಆಯ್ಕೆಯಲ್ಲಿ ನಿಮ್ಮ ಒತ್ತಡ ಇರಕೂಡದು.
* ಯಾವಾಗಲೂ ಜರಿಯುವುದು ಅಥವಾ ಹೀಗಳೆಯು ವುದರ ಮೂಲಕ ಅವನಲ್ಲಿ ಕೀಳರಿಮೆ ಮತ್ತು ತಪ್ಪಿತಸ್ಥ ಪ್ರಜ್ಞೆಯನ್ನು ತುಂಬಬೇಡಿ.
* ಶೈಕ್ಷಣಿಕ ಮತ್ತು ಸಾಮಾಜಿಕ ಒತ್ತಡವನ್ನು ಅವರ ಮೇಲೆ ಹೇರಬೇಡಿ.

ನಾವು ಪಾಲಕರು ತಿಳಿದೋ, ತಿಳಿಯದೆಯೋ ಮತ್ತೆ ಮತ್ತೆ ಅದೇ ತಪ್ಪನ್ನೇ ಮಾಡುತ್ತಿರುತ್ತೇವೆ. ಅದೊಂದು ಬಸ್ಸಿನಲ್ಲಿ ತಂದೆಯೊಬ್ಬ ತನ್ನ ಎಳೆಯ ಮಗನೊಂದಿಗೆ ಸಂಭಾಷಣೆಯಲ್ಲಿ ತೊಡಗಿದ್ದಾನೆ. ಈ ಸಾರಿ ಟೆಸ್ಟಲ್ಲಿ ೨೫ಕ್ಕೆ ೨೨-೨೩ ತೆಗೆದುಕೊಳ್ಳದಿದ್ದರೆ ನಿನಗೆ ಎಲ್ಲಿಯೂ ಕರೆದು ಕೊಂಡು ಹೋಗುವುದಿಲ್ಲ ಎನ್ನುತ್ತಾನೆ. ನನಗನಿಸಿದಂತೆ ಆ ಹುಡುಗನ ವಯಸ್ಸು ೮-೧೦ ಇರಬಹುದು. ಇದು ತಪ್ಪಲ್ಲವೆ? ನಾವೂ ಹೀಗೆ ಮಾತನಾಡುತ್ತಿರುತ್ತೇವೆ. ಇನ್ನು ಮುಂದಾದರೂ ಇಂಥಾ ಮಾತುಗಳು ರಿಪೀಟ್ ಆಗದಿರಲಿ.

ಹಿರೇಕೆರೂರ — ಎಸ್. ಬಿ. ಜೋಗುರ

೩ನೇ ಪುಟದಿಂದ (ಈ ತಿಂಗಳು)

ಸರ್ಕಾರ ಪ್ರಕಟಿಸಿದೆ. ಆಗ ಗುರುತಿನ ಚೀಟಿ ಇಲ್ಲದ ಶ್ರೀ ವಿಠಲ ಹೆಗ್ಡೆಯಂಥವರಿಗೆ ಪ್ರವೇಶ ವಿರುತ್ತದೆಯೆ ? ಹಿಂಸೆ-ಪ್ರತಿಹಿಂಸೆಗಳ ಸರಣಿಯು ಆದಿವಾಸಿಗಳಿಗೆ ಮತ್ತು ಶೋಷಿತರಿಗೆ ಸಾಧಕವೋ ಬಾಧಕವೋ ಎಂಬುದನ್ನು ಸಾರ್ವಜನಿಕರ ಪರವಾಗಿ ಕೆಲಸ ಮಾಡುತ್ತೇವೆ ಎಂಬುವವರು ತಿಳಿದಿರಬೇಕು. ಹಿಂಸೆ ಎಂಬುದು ನಮ್ಮ ಸಾಮಾಜಿಕ-ಆರ್ಥಿಕ-ಸಾಂಸ್ಕೃತಿಕ ವ್ಯವಸ್ಥೆಯಲ್ಲಿ ಹಾಸುಹೊಕ್ಕಾಗಿ ಬೆಳೆದುನಿಂತಿದೆ. ಅದನ್ನು ವೈಯಕ್ತಿಕ ಹಿಂಸೆಯಿಂದ ನಿವಾರಿಸಲು ಸಾಧ್ಯವಾಗದು. ಅದು ಪ್ರಭುತ್ವದ ಹಿಂಸೆಯು ಉಗ್ರವಾಗಲು ಅವಕಾಶ ಕಲ್ಪಿಸಿಕೊಡುತ್ತದೆ. ಮಾವೋವಾದಿಗಳು, ಪ್ರಭುತ್ವ ಮತ್ತು ಸಾರ್ವಜನಿಕ ಚಳುವಳಿಗಳ ಸಂಘಟಕರು ಇದನ್ನು ಮನನ ಮಾಡದಿದ್ದರೆ ಕೋಮುವಾದದ ಕರಿ ನೆರಳು ಇನ್ನೂ ದಟ್ಟವಾಗುತ್ತದೆ, ಪೊಲೀಸ್ ಇಲಾಖೆಯು ಬರೆದುಕೊಡುವ ಹೇಳಿಕೆಗಳನ್ನು ಗೃಹ ಮಂತ್ರಿಗಳು ಶಾಸನಸಭೆಯಲ್ಲಿ ಓದುತ್ತಿರುತ್ತಾರೆ ಮತ್ತು ಘಟ್ಟ ಪ್ರದೇಶಗಳ ಜನರು ಭಯಭೀತರಾಗುತ್ತಾರೆ. ಈ ಮಧ್ಯೆ ಯಾರೋ ಪಾಪದ ಕಾವೇರಮ್ಮನೋ, ಪಾರ್ವತಮ್ಮನೋ ಕೊಲ್ಲಲ್ಪಡುತ್ತಾಳೆ. ವೆಂಕಟೇಶ್ ಅಂತಹ ಪೊಲೀಸ್ ಪೇದೆ ಪ್ರಾಣ ಕಳೆದುಕೊಳ್ಳುತ್ತಾನೆ ಮತ್ತು ಅನುಕಂಪ ತೋರಿಸುವ ಮಂದಿ ಎನ್‌ಕೌಂಟರ್‌ಗಳ ಬಗ್ಗೆ ಚರ್ಚೆ ನಡೆಸುತ್ತಿರುತ್ತಾರೆ.

ಇದನ್ನು ತಪ್ಪಿಸಲು ಸನ್ಮಾರ್ಗವೊಂದಿದೆ, ಆದರೆ ಪ್ರಭುತ್ವಕ್ಕೆ ಅದು ಪಥ್ಯವಲ್ಲ. ಮಾವೋವಾದಿಗಳು ಶಸ್ತ್ರ ಬಿಸುಟು ಬಂದರೆ, ಮಾತುಕತೆ ನಡೆಸುವುದಾಗಿ ಹೇಳುತ್ತಾ, ಕಾಲಹರಣ ಮಾಡುವ ಬದಲು ಸರ್ಕಾರವು ನೇರವಾಗಿ ಮರ್ದಿತ ಜನರೊಡನೆ ಪ್ರಾಯೋಗಿಕ ಸಂವಾದಕ್ಕಿಳಿಯುವುದು ಅತ್ಯಗತ್ಯ. ಯಾವ ಮಾವೋವಾದಿ ತಾನೆ ವಿಧಾನ ಸೌಧಕ್ಕೆ ತೆರಳಿ ಸಚಿವರೊಡನೆ ಸಂಧಾನ ನಡೆಸುತ್ತಾನೆಂದು ನಿರೀಕ್ಷಿಸಬೇಕು ? ಅಷ್ಟು ಮಳೆ ಸುರಿದರೂ ಕಾಡಿನಿಂದ ಹೊರಬರಲಾರದ ಮಾವೋವಾದಿಗಳು ವಿಧಾನಸೌಧಕ್ಕೆ ಬಂದು ಸಂವಾದದಲ್ಲಿ ಪಾಲ್ಗೊಳ್ಳುತ್ತಾರೆಂಬ ಆಶಯದಲ್ಲಿ ಹುರುಳಿಲ್ಲ. ಅವರೆತ್ತುವ ಪ್ರಶ್ನೆಗಳಿಗೆ ಸರ್ಕಾರವು ಕಾರ್ಯತಃ ಉತ್ತರ ನೀಡುವುದು ಶಕ್ಯ. ಅದಕ್ಕೆ ಸಾಮಾಜಿಕ-ಆರ್ಥಿಕ ಪರಿಹಾರವಿದೆ. ಅದನ್ನು ಜನಕ್ಕೆ ತಲುಪಿಸಲು ಸರ್ಕಾರದ ಕೈಗಳನ್ನು ಯಾರೂ ಕಟ್ಟಿಹಾಕಿಲ್ಲ ಮತ್ತು ಅದಕ್ಕೆ ಮಾವೋವಾದಿಗಳ ಒಪ್ಪಿಗೆ ಪಡೆಯುವ ಅಗತ್ಯವಿಲ್ಲ. ಎಷ್ಟು ಆಯೋಗಗಳನ್ನು ನೇಮಿಸಿದರೂ ಕಡೆಗೆ ಲಭ್ಯವಿರುವ ಹಾದಿ ಇದೊಂದೇ. ಪ್ರಶ್ನೆಗಳನ್ನೆತ್ತುವ ವ್ಯಕ್ತಿಗಳನ್ನು, ಸಂಸ್ಥೆಗಳನ್ನು, ಮಾವೋವಾದಿಗಳು ಅಥವಾ ಮಾವೋವಾದಿ-ಬೆಂಬಲಿಗರು ಎಂದು ಪುಕಾರೆಬ್ಬಿಸುವುದರಿಂದ ಪ್ರಶ್ನೆಗೆ ಪರಿಹಾರ ಸಿಗುವುದಿಲ್ಲ. ಸಾಮಾಜಿಕ-ಆರ್ಥಿಕ ಯೋಜನೆಗಳನ್ನು ಕಾರ್ಯಗತಗೊಳಿಸಲು ಸರ್ಕಾರವು ಮುಂದಾದರೆ ಮಾವೋವಾದಿಗಳು ನೆಟ್ಟಗೆ ಪಟ್ಟಣ ಸೇರಿಕೊಂಡಾರು, ಕಾಡಿನ ಮತ್ತು ನಾಡಿನ ಜನ ನಿರಾತಂಕದಿಂದ ಬಾಳಿಯಾರು. ಕೊಲ್ಲುವುದು ಮತ್ತು ಕೊಲ್ಲಿಸಿಕೊಳ್ಳುವುದು ಜನಕ್ಕೆ ಹಿತವಲ್ಲ; ಅದು ಪೊಲೀಸರಿಗೂ ಹಿತವಲ್ಲ, ಮಾವೋವಾದಿಗಳಿಗೂ ಅಲ್ಲ. ಮಾವೋವಾದದಿಂದ ಬಹಿರಂಗ ಸಂಘಟಿತ ಪ್ರಜಾಪ್ರಭುತ್ವವಾದಿ ಹೋರಾಟಗಳತ್ತ ಮುನ್ನಡೆಯಲು ಹಾದಿ ಸುಗಮವಾಗುತ್ತದೆ ಕೂಡ. ಸರ್ಕಾರವು ಸಂಧಾನ ನಡೆಸಲು ಬದ್ಧವಾಗಿದ್ದರೆ, ಶಸ್ತ್ರಾಸ್ತ್ರಗಳನ್ನು ಹಿಡಿದಿರದ ಆದಿವಾಸಿಗಳಿದ್ದಾರೆ, ಅವರ ಸಂಘಟನೆ ಇದೆ, ಅದರ ಕಾರ್ಯಕರ್ತರಿದ್ದಾರೆ; ಅವರನ್ನು ಕರೆದು ಯೋಜನೆಗಳನ್ನು ಚರ್ಚಿಸಿ ಅನುಷ್ಠಾನಗೊಳಿಸಲು ತ್ವರಿತಗತಿಯಲ್ಲಿ ಮುಂದೆ ಸಾಗಬೇಕು.

* * *

ಬರೋಡದಲ್ಲಿ ಸಂಘಪರಿವಾರದ 'ಸುಸಂಸ್ಕೃತ ಕಾರ್ಯಕರ್ತರು' ವಿಶ್ವವಿದ್ಯಾಲಯದ ಒಬ್ಬ ಕಲಾವಿದನ ಮೇಲೆ ಹಲ್ಲೆ ನಡೆಸಿದ್ದು, ಆ ಗೂಂಡಾಗಿರಿಯನ್ನು ವಿರೋಧಿಸಿ ವಿಭಾಗದ ಡೀನ್ ರಾಜೀನಾಮೆ ನೀಡಿದ್ದು, ಆಮೇಲೆ ಮನಸ್ಸಿಲ್ಲದ ಮನಸ್ಸಿನಿಂದ ಉಪಕುಲಪತಿಗಳು ಎಂಥದೋ ಕ್ರಮ ಜರುಗಿಸುವುದಾಗಿ ಭರವಸೆ ನೀಡಿದ್ದು ಹಾಗೂ ಅದನ್ನು ಮಾಡದಿದ್ದುದು, ಇವೆಲ್ಲಾ ಹಳೆಯ ಸಮಾಚಾರ. ಹೊಸ ಸಮಾಚಾರವೇನೆಂದರೆ, ಈ ಡೀನ್ ಅಹಮದಾಬಾದಿನಲ್ಲಿ ಒಂದು ಸಭೆಯಲ್ಲಿ ಪಾಲ್ಗೊಳ್ಳುತ್ತಿದ್ದಾಗ ಮತ್ತೆ ಅದೇ 'ಸಾಂಸ್ಕೃತಿಕ ಕಾರ್ಯಕರ್ತರ ತಂಡ' ಅವರ ಮೇಲೆ ಹಲ್ಲೆ ನಡೆಸಿತು ಎಂಬುದು. ಮುಖ್ಯಮಂತ್ರಿ ಮೋದಿಯವರು ಆ ತಂಡದ ನಾಯಕರೂ ಆಗಿರುವುದರಿಂದ ಹಲ್ಲೆಕೋರರ ಮೇಲೆ ಯಾವ ಕ್ರಮವನ್ನೂ ಜರುಗಿಸಿಲ್ಲ; ಬಹುಶಃ ಜರುಗಿಸುವುದೂ ಇಲ್ಲ. ಗುಜರಾತಿನ ಮರು ರೂಪ ಇತ್ತೀಚೆಗೆ ಬಿಜಾಪುರದಲ್ಲಿ ಪ್ರಕಟವಾಯಿತು. ಅಲ್ಲಿಯ ಮಹಿಳಾ ವಿಶ್ವವಿದ್ಯಾಲಯದ ಸಿಂಡಿಕೇಟ್ ಸಭೆ ಜರುಗುತ್ತಿದ್ದಾಗ ವಿದ್ಯಾರ್ಥಿ ಹಣೆಪಟ್ಟಿ ಧರಿಸುವವರ ಒಂದು ತಂಡ ಒಳನುಗ್ಗಿ ಹಲ್ಲೆ ನಡೆಸಿದೆ. ಸಭೆಗೆ ಕನಿಷ್ಠ ಎಷ್ಟು ಮಂದಿ ಸದಸ್ಯರು ಹಾಜರಿದ್ದರೆ ಅದರ ತೀರ್ಮಾನಗಳು ಅಸಿಂಧುವಾಗುವುದಿಲ್ಲವೆಂಬುದಕ್ಕೆ ನಿರ್ದಿಷ್ಟ ನಿಯಮಗಳಿವೆ. ಅದರ ಉಲ್ಲಂಘನೆಯಾಗಿದ್ದರೆ ಚಾನ್ಸಲರ್ ಆಗಿರುವ ರಾಜ್ಯಪಾಲರು ತೀರ್ಮಾನಗಳನ್ನು ಅಸಿಂಧುವೆಂದು ತಳ್ಳಿಹಾಕಲು ಸಾಧ್ಯವಿದೆ. ಅಂತೆಯೇ, ಉಪಕುಲಪತಿಗಳ ಮೇಲೆ ಆಪಾದನೆಗಳಿದ್ದರೆ ಅವನ್ನು ವಿಚಾರಿಸಲು ಚಾನ್ಸಲರ್ ಇದ್ದಾರೆ. ಇದಾವುದನ್ನೂ ಲೆಕ್ಕಿಸದೆ ವಿಶ್ವವಿದ್ಯಾಲಯದ ಕುಲಸಚಿವರು ಉಪಕುಲಪತಿಗಳ ವಿರುದ್ಧ ಕೀಳುಮಟ್ಟದ ಸಂಚನ್ನು ರೂಪಿಸಿರುವಂತೆ ತೋರುತ್ತಿದೆ. ಅದಕ್ಕೆ ಸರಿಯಾಗಿ ವಿದ್ಯಾರ್ಥಿ ಪರಿಷತ್ತಿನ ನಾಯಕರು ಪ್ರತಿಧ್ವನಿಸಿದ್ದಾರೆ. ಆದರೆ ಮೋದಿ ಸರ್ಕಾರದಂತೆ ಕುಮಾರಸ್ವಾಮಿ ಸರ್ಕಾರವೂ ಹಲ್ಲೆಕೋರರಿಗೆ ರಕ್ಷಣೆ ನೀಡುತ್ತಿದೆ. ''ಮೋದಿಯಾದರೇನು ಶಿವ, ಪ್ರಕಾಶ್ ಆದರೇನು ಶಿವ, ಎಲ್ಲಾ ಒಂದೇ ಶಿವ'' ಎನ್ನುವಂತಹ ಪರಿಸ್ಥಿತಿಯುಂಟಾಗಿರುವುದು ನಮ್ಮ ಗೃಹಸಚಿವ ಶ್ರೀ. ಎಂ. ಪಿ. ಪ್ರಕಾಶ್ ಅವರಿಗೆ ಶೋಭೆ-ಕೀರ್ತಿ ತರುವುದಿಲ್ಲ. ಮಾನ್ಯ ಯಡಿಯೂರಪ್ಪನವರು ಅಕ್ಟೋಬರ್‌ನಲ್ಲಿ ಮುಖ್ಯಮಂತ್ರಿಯಾದರೆ ಶ್ರೀ. ಪ್ರಕಾಶ್ ಅವರ ಸ್ಥಾನಕ್ಕೆ ಮೋದಿ-ಪ್ರತಿಕೃತಿಯೊಂದು ಬರುವುದು ಸಹಜ. ಆಗ ನಮ್ಮ ರಾಜ್ಯದಲ್ಲಿ ಕಾನೂನು ವ್ಯವಸ್ಥೆ ಯಾವ ಹಂತವನ್ನು ಮುಟ್ಟುತ್ತದೆಂಬುದಕ್ಕೆ ಇದೊಂದು ಪೂರ್ವಸೂಚನೆ. ಇನ್ನೊಂದು ಸೂಚನೆ ಕನ್ನಡ ಭವನದ ಆವರಣದಲ್ಲಿ ಬಸವಣ್ಣನವರ ಹಿತಚಿಂತಕರು ಮತ್ತು ಪೋಷಕರು ತಾವೆಂದು ಘೋಷಿಸಿಕೊಂಡು ಏಕಸ್ವಾಮ್ಯ ಪಡೆದಿರುವವರಂತೆ ಪೋಷಾಕು ಧರಿಸುವ ಮಹಾನ್ ನಾಯಕ ಶ್ರೀ ಭೀಮಣ್ಣ ಖಂಡ್ರೆಯವರ ಪಡೆಯಿಂದ ದೊರೆಯಿತು. ''ಆನು ದೇವಾ ಹೊರಗಣವನು...'' ಪುಸ್ತಕವನ್ನು ಸುಟ್ಟು, ಡಾ॥ ಬಂಜಗೆರೆಯವರನ್ನು ಬಂಧಿಸಬೇಕೆಂದು ''ರಾಜ್ಯವ್ಯಾಪಿ ಹೋರಾಟ'' ನಡೆಸುವ ಖಂಡ್ರೆ ಪಡೆಯು ಸರ್ಕಾರವು ನೇಮಿಸಿದ್ದ ಸಮಿತಿಯ ಸದಸ್ಯರನ್ನು ಅಪಮಾನಗೊಳಿಸಿ, ಸಭೆಗೆ ನುಗ್ಗಿ ದಾಂಧಲೆ ನಡೆಸಿ, ತನ್ನ ಮೇರೆಯಿಲ್ಲದ ದುರಹಂಕಾರವನ್ನು ಮೆರೆದಿದೆ. ಸದಸ್ಯರಾದ ಪ್ರೊ॥ ಬರಗೂರು ರಾಮಚಂದ್ರಪ್ಪ ಮತ್ತು ಪ್ರೊ॥ ಚಂದ್ರಶೇಖರ ಪಾಟೀಲರನ್ನು ಅವಾಚ್ಯ ಶಬ್ದಗಳಿಂದ ದೂಷಿಸಲಾಯಿತೆಂದು ಸಹ ಕೇಳಿಬಂದಿದೆ. ಇದು ಸಾರ್ವಜನಿಕವಾಗಿ ನಡೆದಿದೆಯಾದರೂ ಹಲ್ಲೆಕೋರರ ಮೇಲೆ ಯಾವ ಕ್ರಮವೂ ಜರುಗಿಲ್ಲ. ಮಾನ್ಯ ಶ್ರೀ. ಎಂ. ಪಿ. ಪ್ರಕಾಶ್ ಅವರು ಇದಕ್ಕೂ ಏನಾದರೂ ತಾಂತ್ರಿಕ ಕಾರಣ ಕೊಡಬಲ್ಲರು; ಆದರೆ ಕಲುಷಿತವಾದ ವಾತಾವರಣವು ಆವರಿಸುತ್ತಿರುವುದನ್ನು ನಿರಾಕರಿಸಲಾರರು. ಪ್ರಜಾಪ್ರಭುತ್ವವಾದಿ ಹೋರಾಟಗಳನ್ನು ಅತಿಯಾಗಿ ನಿಯಂತ್ರಿಸುವ ನಮ್ಮ ಕಾನೂನು ಮತ್ತು ಭದ್ರತೆಯ ವ್ಯವಸ್ಥೆಯು ಬಿಜಾಪುರ ಮತ್ತು ಕನ್ನಡ ಭವನ ಮುಂತಾದೆಡೆ ನಡೆಯುವ ಹಲ್ಲೆಗಳಿಗೆ ರಕ್ಷಣೆ ನೀಡುತ್ತಿದೆ. ನಾಳೆಯ ಘೋರ ದಿನಗಳ ಸ್ವರೂಪದ ಮುನ್ನೆಚ್ಚರಿಕೆ ಇದರಲ್ಲಿದೆ. ನಾಗರಿಕ ಸಮಾಜ ಇದರಿಂದ ಎಚ್ಚೆತ್ತುಕೊಳ್ಳಬೇಕಾಗಿದೆ.

* * *

ಬ್ರಿಟನ್ನಿನಲ್ಲಿ ಭಯೋತ್ಪಾದನೆಯ ಕೃತ್ಯ ನಡೆದದ್ದರಿಂದ ಆಸ್ಟ್ರೇಲಿಯಾದಲ್ಲಿ ಡಾ॥ ಹನೀಫ್ ಬಂಧನಕ್ಕೊಳಗಾಗಿ ಪ್ರಕೃತದಲ್ಲಿ ಕಾರಾಗೃಹದ ಏಕಾಂತವಾಸಕ್ಕೆ ಗುರಿಯಾಗಿದ್ದಾರೆ. ಆತ ತಪ್ಪಿತಸ್ಥನಾಗಿದ್ದರೆ ತಕ್ಕ ಶಿಕ್ಷೆ ನೀಡಬಾರದೆಂದು ಯಾರೂ ಹೇಳುವುದಿಲ್ಲ. ಆದರೆ ಆಸ್ಟ್ರೇಲಿಯ ಸರ್ಕಾರವು ಅಮೆರಿಕಾದ ಬುಷ್‌ಮನ್ ಅಧ್ಯಕ್ಷರಂತೆ ನಡೆದುಕೊಳ್ಳುತ್ತಿದೆಯೆಂಬ ಆಪಾದನೆ ಕೇಳಿಬಂದಿದೆ. ನ್ಯಾಯಾಲಯವು ಆತನನ್ನು ಬಿಡುಗಡೆ ಮಾಡಿದಾಗ ಆತನ ವೀಸಾವನ್ನು ರದ್ದುಮಾಡಿ, ವೀಸಾ ಇಲ್ಲದ್ದೇ ಅಪರಾಧವೆಂದು ಹೇಳುತ್ತಾ ಸರ್ಕಾರವು ಕ್ರೂರ ಪ್ರಹಸನವನ್ನು ಅಭಿನಯಿಸುತ್ತಿದೆ. ನಮ್ಮ ಛತ್ತೀಸಗಢ ಸರ್ಕಾರವು ಡಾ॥ ವಿಶ್ವಜಿತ್ ಸೇನರನ್ನು ಉಪದ್ರವಕಾರಿಯೆಂದು ಬಂಧಿಸಿರುವುದಕ್ಕೂ ಆಸ್ಟ್ರೇಲಿಯ ಸರ್ಕಾರವು ಡಾ॥ ಹನೀಫ್‌ನನ್ನು ನಡೆಸಿಕೊಳ್ಳುತ್ತಿರುವುದಕ್ಕೂ ಬಹಳ ವ್ಯತ್ಯಾಸವೇನಿಲ್ಲ. ಅದೇ ಕಾರಣದಿಂದ ಬಹುಶಃ ನಮ್ಮ ಪ್ರಧಾನಿಗಳು ಗಟ್ಟಿಯಾಗಿ ಏನೂ ಹೇಳಲಿಲ್ಲ. ಹೇಳಲು ಸಾಧ್ಯವಿಲ್ಲ ಸಹ; ಏಕೆಂದರೆ, ಇರಾಕ್- ಆಫ್ಘಾನಿಸ್ತಾನ-ಪ್ಯಾಲಿಸ್ಟೈನ್‌ಗಳಲ್ಲಿ ಅಮೆರಿಕಾ-ಬ್ರಿಟನ್ ನೇತೃತ್ವದಲ್ಲಿ ನಡೆಯುತ್ತಲೇ ಇರುವ ಪಾತಕಗಳು, ಹತ್ಯೆಗಳು ಮತ್ತು ಲೂಟಿ ಬಗ್ಗೆ ನಿಷ್ಕಲ್ಮಶ ಹೃದಯದಿಂದ ನಮ್ಮ ಪ್ರಧಾನಿ ಏನನ್ನೂ ಹೇಳಿಲ್ಲ. ಅದಕ್ಕೂ ಭಯೋತ್ಪಾದನೆಯ ಕೃತ್ಯಗಳಿಗೂ ನೇರವಾಗಿ ಸಂಬಂಧವಿದೆಯೆಂಬುದನ್ನು ಬ್ರಿಟನ್ನಿನ ಮೈಕ್ ಮಾರ್ಕ್ಯುಸೀ, ಅಮೆರಿಕಾದ ನೋಮ್ ಚಾಮ್‌ಸ್ಕಿ ಮುಂತಾದವರಂತೆ ಧೈರ್ಯವಾಗಿ ಹೇಳಲು ಸಹ ನಮ್ಮ ಪ್ರಧಾನಿ ಅಂಜುತ್ತಾರೆ. ಅಮೆರಿಕಾ-ಬ್ರಿಟನ್‌ಗಳ ಅಘೋಷಿತ ಸೈನ್ಯಬಲದಂತೆ ಭಾರತವು ನಡೆದುಕೊಳ್ಳುತ್ತಿರುವಾಗ ಇನ್ನೂ ಅನೇಕ ವಿಪತ್ತುಗಳು ಸಂಭವಿಸುವುದು ಅನಿವಾರ್ಯ. ''ರೋಗ್ ಸ್ಟೇಟ್'' ಅಮೆರಿಕಾ ಹೇಳಿದ್ದು, ಮಾಡಿದ್ದು, ಎಲ್ಲಾ ಸಮರ್ಥನೀಯವೆಂದು ಬಗೆಯುವುದನ್ನು ಭಾರತ ಸರ್ಕಾರವು ಕೂಡಲೆ ನಿಲ್ಲಿಸಬೇಕು.

* * *

''ಅಮೆರಿಕಾದೊಂದಿಗೆ ನಮ್ಮ ದೇಶವು ಮಾಡಿಕೊಳ್ಳಬೇಕೆಂದಿರುವ ಪರಮಾಣು ಶಕ್ತಿಯ ಒಪ್ಪಂದವನ್ನು ಎಲ್ಲ ದೇಶಭಕ್ತರೂ ಒಪ್ಪಬೇಕು, ಸ್ವಾಗತಿಸಬೇಕು'' ಎಂದು ಪ್ರಧಾನಿ ಹೇಳಿರುವುದು ಸರ್ವಥಾ ಖಂಡನೀಯ. ದೇಶದ ಸಾರ್ವಭೌಮತ್ವವನ್ನು ಕಡೆಗಣಿಸುವಂತಿದ್ದರೆ ಅದನ್ನೇಕೆ ನಾವು ಮಾನ್ಯ ಮಾಡಬೇಕು ? ಅಂಥದ್ದನ್ನು ತಿರಸ್ಕರಿಸುವುದು ದೇಶಭಕ್ತಿ

ಯಲ್ಲವೆ ? ಬುಷ್ ಭಾಷೆಯನ್ನು ಮನಮೋಹನರು ಕರಗತ ಮಾಡಿಕೊಳ್ಳುತ್ತಿದ್ದಾರೆ! ಅದಕ್ಕೇ ಅವರು ನಿಮಿಟ್ಸ್ ಸ್ವಾಗತಿಸಿದ್ದು. (ಈ ಬಗ್ಗೆ ಸಂಪಾದಕೀಯ ಮತ್ತು ವಿಶ್ವವೀಕ್ಷಣೆ ಹಾಗೂ ಡಾ|| ಎಂ. ಆರ್. ಶ್ರೀನಿವಾಸನ್‌ರೊಂದಿಗೆ ಸಂದರ್ಶನ ನೋಡಿ). ಇತ್ತೀಚೆಗೆ ಅಮೆರಿಕಾದ ಮಿಲಿಟರಿಯ ಉನ್ನತ ಅಧಿಕಾರಿ ಕೋಹ್ಲರ್ ಭಾರತಕ್ಕೆ ಬಂದಿದ್ದಾಗ, ಇನ್ನು ಮುಂದೆ ಅಮೆರಿಕಾದ ಯುದ್ಧ ವಿಮಾನಗಳಿಗೆ ಭಾರತದ ವಿಮಾನ ನಿಲ್ದಾಣಗಳಲ್ಲಿ ಇಳಿಯಲು, ಇಂಧನ ತುಂಬಿಸಿಕೊಳ್ಳಲು, ಅವಕಾಶ ನೀಡುವಂತಹ ಒಪ್ಪಂದ ಜಾರಿಯಾಗಲಿದೆಯೆಂದು ತಿಳಿಸಿದ. ಪ್ರಧಾನಿಯವರ ಹೇಸಿಗೆ ತುಂಟತನಕ್ಕೆ ಇದು ಇನ್ನೊಂದು ನಿದರ್ಶನ. ಬೇರೆ ದೇಶಗಳ ಮೇಲೆ ಬಾಂಬು ಸುರಿಸಲು ನಮ್ಮ ದೇಶದ ವಿಮಾನ ನಿಲ್ದಾಣಗಳಲ್ಲಿ ನಿಲುಗಡೆ ಹಾಗೂ ಇಂಧನ ಸೌಲಭ್ಯ ನೀಡುವುದು ಆ ದೇಶಗಳ ಮೇಲೆ ನಾವು ಆಕ್ರಮಣ ನಡೆಸಿದಂತೆಯೇ ಸರಿ. ನಮ್ಮ ದೇಶ ಎತ್ತ ಸಾಗುತ್ತಿದೆ ? ಮನಮೋಹನ ಸಿಂಗ್ ಸರ್ಕಾರಕ್ಕೆ ಬೆಂಬಲ ನೀಡುತ್ತಿರುವ ಪಕ್ಷಗಳು ಎತ್ತಿದ ಸ್ವರದಲ್ಲಿ ಕೇಳಬೇಕು : ಇದಕ್ಕೇ ಏನು ನಾವು ಬೆಂಬಲ ನೀಡುತ್ತಿರುವುದು, ಎಂದು.

* * *

ಸಲ್ಮಾನ್ ರಷ್ದಿ ಇನ್ನು ಮುಂದೆ 'ಸರ್' ಅಂಕಿತವನ್ನು ತನ್ನ ಹೆಸರಿಗೆ ಅಂಟಿಸಿಕೊಳ್ಳಬಹುದಂತೆ! ಪುಸ್ತಕ ಬರೆದದ್ದಕ್ಕೆ ಈ ಶ್ಲಾಘನೆಯೋ ಅಥವಾ ''ಅಮೆರಿಕಾಕ್ಕೆ ಜೈ'' ಎಂದು ಘೋಷಿಸಿದ್ದರಿಂದಲೋ ಎಂಬುದನ್ನು ವಿಮರ್ಶೆ ಮಾಡಿ ತಿಳಿದುಕೊಳ್ಳಬೇಕು. ಆತನಿಗೆ ಆ ಪ್ರಶಸ್ತಿ ನೀಡಿದ್ದು ಇಸ್ಲಾಂನ ಜಡ್ಡು ಮತಾಂಧರಿಗೆ ಕೋಪ ತರಿಸಿದೆ. ಯಥಾಪ್ರಕಾರ ಅವರ ''ಫತ್ವಾ'' ಇದ್ದೇ ಇದೆ! ''ಫತ್ವಾ'' ಎಂಬುದು ಅಂತರರಾಷ್ಟ್ರೀಯ ರಾಜಕೀಯದಲ್ಲಿ ಮನ್ನಣೆ ಗಳಿಸುವುದಿಲ್ಲವೆಂದು ತಿಳಿದಿದ್ದೂ ಇಂತಹ ಮೂರ್ಖ ಆಜ್ಞೆಗಳನ್ನು ಹೊರಡಿಸುವ ಮುಲ್ಲಾಗಳು ಇನ್ನೂ ಮಧ್ಯಯುಗೀಯ ಅಂಧಕಾರದ ಶ್ರದ್ಧೆಯ ಆರಾಧಕರೇ ಆಗಿದ್ದಾರೆ. ಅವರು ಹಾಕಿಕೊಳ್ಳದ ಪ್ರಶ್ನೆ ಇದು : ''ನಾವು ಹೇಗೂ ರಾಜಪ್ರಭುತ್ವವನ್ನು ಧಿಕ್ಕರಿಸಿದ್ದೇವೆ; ಹಾಗಿರುವಾಗ, ರಾಣಿಯು ನೀಡುವ ಬರಡು ಪ್ರಶಸ್ತಿಯ ಬಗ್ಗೆ ನಾವೇಕೆ ತಲೆ ಕೆಡಿಸಿಕೊಳ್ಳಬೇಕು ?''

ಮುಲ್ಲಾಗಳು ಹಾಕಿಕೊಳ್ಳದ ಪ್ರಶ್ನೆಯನ್ನು ನಾವಂತೂ ಹಾಕಿಕೊಳ್ಳಬೇಕಷ್ಟೆ.

* * *

ನಮ್ಮ ಉನ್ನತ ಶಿಕ್ಷಣ ಮಂತ್ರಿ ಶ್ರೀ. ಡಿ. ಎಚ್. ಶಂಕರಮೂರ್ತಿಯವರ ದರ್ಬಾರಿನಲ್ಲಿ ಹುಚ್ಚು ತೀರ್ಮಾನಗಳು ಹಲವು. ಸ್ನಾತಕೋತ್ತರ ಶಿಕ್ಷಣ ಪಡೆಯಬಯಸುವ ವಿದ್ಯಾರ್ಥಿಗಳಿಗೆ ಪರೀಕ್ಷೆ ನಡೆಸುವುದಾಗಿ ಪಟ್ಟು ಹಿಡಿದು ನಂತರ ಅದೀಗ ಬೇಡವೆಂದು ತೆಪ್ಪಗಾಗಿದ್ದಾರೆ. ವಿದ್ಯಾರ್ಥಿಗಳಿಗೆ ಮಾನಸಿಕ ಹೊಡೆತವಲ್ಲದೆ ನೂರಾರು ರೂಪಾಯಿಗಳ ದಂಡ ವಿಧಿಸಿದಂತಾಯಿತು. ಈಗ ಪ್ರತ್ಯೇಕವಾಗಿ ವಿಶ್ವವಿದ್ಯಾಲಯಗಳು ಪರೀಕ್ಷೆ ನಡೆಸುತ್ತವಂತೆ; ಅದಕ್ಕೆ ಮತ್ತೆ ವಿದ್ಯಾರ್ಥಿಗಳು ಹಣ ತೆರಬೇಕು. ಎಲ್ಲಿಂದ ತರಬೇಕು ಇದನ್ನೆಲ್ಲಾ? ಹಣವಿಲ್ಲದವರಿಗೆ ಶಿಕ್ಷಣ ಬೇಡವೆಂಬುದು ಅವರ ಸೂತ್ರ. ವಿಶ್ವವಿದ್ಯಾಲಯಗಳಿಗೂ ಲಕ್ಷಗಟ್ಟಲೆ ಹಣ ಮತ್ತು ಶ್ರಮ ದಂಡವಾಗಿದೆ. ಸಜ್ಜನರೆಂದು ಹೇಳಲಾದ ಶ್ರೀ. ಶಂಕರಮೂರ್ತಿಗಳು ವಿದ್ಯಾರ್ಥಿಗಳಿಗೆ ಹಾಗೂ ವಿಶ್ವವಿದ್ಯಾನಿಲಯಗಳಿಗೆ ಉಂಟಾಗಿರುವ ನಷ್ಟವನ್ನು ತಮ್ಮ ಜೇಬಿನಿಂದ ಹಣ ತೆಗೆದುಕೊಟ್ಟು ತುಂಬಿಸುವ ಸೌಜನ್ಯ ತೋರಿಸಿಯಾರೆ ? ಇಂತಹವರ ಕೈಗೆ ಸಿಕ್ಕು ನಮ್ಮ ಶಿಕ್ಷಣ ನೀತಿ ಮತ್ತು ವಾತಾವರಣ ಸಿಕ್ಕುಸಿಕ್ಕಾಗಿದೆ. ಅದನ್ನು ಲೆಕ್ಕಿಸದೆ ಸರ್ಕಾರ ಕೂತಿದೆ, ಅದನ್ನು ನೋಡಿ ಕಣ್ಣು ಮಿಟುಕಿಸುತ್ತಾ ಶಾಸಕರು ಕೂತಿದ್ದಾರೆ.

* * *

ಕೆಟ್ಟ ಕನಸೆಂದು ಮರೆತುಬಿಡಬೇಕಾದ ರೀತಿಯಲ್ಲಿ ನಮ್ಮ ರಾಷ್ಟ್ರಾಧ್ಯಕ್ಷರ ಚುನಾವಣೆ ನಡೆದಿದೆ. ವಸ್ತುಸ್ಥಿತಿಯನ್ನು ಒಪ್ಪಿಕೊಳ್ಳದೆ ಅರಚಿಕೊಳ್ಳುವುದು, ಮೈ ಪರಚಿಕೊಳ್ಳುವುದು ವಿಶೇಷವಾಗಿ ಕಂಡುಬಂದಿತು. ಮಾನ್ಯರಾದ ಸುಷ್ಮಾ ಸ್ವರಾಜ್, ಜಾರ್ಜ್ ಫರ್ನಾಂಡೀಸ್ ಮತ್ತು ಲಾಲ್ ಕೃಷ್ಣ ಅದ್ವಾನಿ ತಾವು ಅನುಸರಿಸಿದ ಹಾದಿಯು ಅಸಹ್ಯವಾದ ಕೊಳಚೆಯಿಂದ ತುಂಬಿತ್ತೆಂದು ಈಗಲಾದರೂ ಒಪ್ಪಿಯಾರೆ? ಅಂತಹ ಅಸಭ್ಯತೆಯ ನಡುವೆಯೂ ಸಂಯಮ ಕಳೆದುಕೊಳ್ಳದೆ ವರ್ತಿಸಿದ ಶ್ರೀಮತಿ ಪ್ರತಿಭಾ ಪಾಟೀಲರು ರಾಷ್ಟ್ರಾಧ್ಯಕ್ಷರ ಪದವಿಗೆ ಚುನಾಯಿತರಾಗಿದ್ದಾರೆ. ಅವರಿಗೆ ಅಭಿನಂದನೆಗಳನ್ನು ಹೇಳುತ್ತಾ ಮಾಂತ್ರಿಕರು ಹಾಗೂ ದುರ್ಗೆ, ಬಾಬಾ ಮುಂತಾದವರನ್ನು ರಾಷ್ಟ್ರಪತಿ ಭವನದೊಳಕ್ಕೆ ಬಿಟ್ಟುಕೊಳ್ಳದಿರಲೆಂದು ಆಶಿಸೋಣ.

## ಹೊಲದೊಡೆಯ

ರಂಟೆ ಕುಂಟೆ ಹೊಡೆದು
ಮಗನ ಸಾಲಿ ಬಿಡಿಸಿ
ಬೆವರ ಬಸಿದು,
ಅಪ್ಪ-ಮಗ
ಬಿತ್ತಿ ಬೆಳೆದ
ಹೊಲ...

ಅಜ್ಜ
ಮುತ್ತಜ್ಜಗಳು
ಹಣ್ಣಾಗಿ ಉದುರಿದ
ಸಮಾಧಿಗಳ
ಮೇಲೆ...
ಎದ್ದಿವೆ
ಕಾರಖಾನೆಗಳು...

ಮಾಲೀಕನ
ಮನೆಯ
ಗುಲಾಬಿ ತೋಟಕೆ
ನೀರು ಹನಿಸುತ
ಭಿಕ್ಷೆ ಬೇಡುತ
ತನ್ನವರ ಸಮಾಧಿ
ಹುಡುಕುತ
ಅಲ್ಲೇ ನಿಂತವ್ನೆ
ಹೊಲದೊಡೆಯ !!

ಬಿ. ಶ್ರೀನಿವಾಸ
ಶಿರಸ್ತೆದಾರ್, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಹಾವೇರಿ



# ಸುವರ್ಣ ಭಾರತದ ನಡುರಾತ್ರಿಯ ಚಿಂತನೆಗಳು

**ಭಾ**ರತಮಾತೆಗೆ ಸ್ವಾತಂತ್ರ್ಯ ಸಿಕ್ಕಿ ಈಗ ಚಿನ್ನದ ಹಬ್ಬದ ಸಂಭ್ರಮ. ಸುವರ್ಣ ಭಾರತ! ''ಸುವರ್ಣಮಯೇನ ಪಾತ್ರೇಣ ಸತ್ಯಸ್ಯ ಅಪಿಹಿತಂ ಮುಖಂ!'' ಭಾರತ ದೇಶದ ಎಲ್ಲ ದೇವದೇವತೆಯರ ಮೂರ್ತಿಗಳೂ ಮತ್ತೊಮ್ಮೆ ಚಿನ್ನದ ತಗಡುಗಳನ್ನು ಬಡಿಸಿಕೊಂಡು ಘಸ್ನಿ ಮಹಮ್ಮದನಿಂದ ಆಗಿದ್ದ ಆಘಾತವನ್ನು ಮರೆತು ಮತ್ತೊಮ್ಮೆ ಕಂಗೊಳಿಸುತ್ತಿವೆ! ಅಂದಿದ್ದ ಛಪ್ಪನ್ನಾರು ರಾಜ ಮಹಾರಾಜ ಚಕ್ರವರ್ತಿಗಳ ಸುವರ್ಣ ಕಿರೀಟ, ಡಾಬು, ಕಿಂಕಾಪುಗಳನ್ನು ನಾಚಿಸುವಷ್ಟು ಮಂದಿ ಸುವರ್ಣಾಧಿಪತಿಗಳೂ, ಹೊಸ ನವಾಬರುಗಳೂ ಭಾರತ ಮಾತೆಯ ಆಸ್ಥಾನವನ್ನು ಅಲಂಕರಿಸಿದ್ದಾರೆ. ಮೈಸೂರಿನ ಮತ್ತು ಜಯಪುರದ ಅರಮನೆಗಳನ್ನು ನಾಚಿಸುವ ಪಂಚತಾರಾ ಸಪ್ತತಾರಾ ಹೋಟೆಲುಗಳ ಕಿಕ್ಕಿರಿದ ಸಭಾಂಗಣಗಳಲ್ಲಿ ಈ ಸುವರ್ಣ ಜಯಂತಿಯನ್ನು ರಾತ್ರಿ ಎಲ್ಲ ಆಚರಿಸಿ, ಆ ಅರ್ಧರಾತ್ರಿಯಲ್ಲಿ 'ಟ್ರಿಸ್ಟ್ ವಿತ್ ಡೆಸ್ಟಿನಿ'ಯಾಗಿ ಆಚರಿಸಿದ ಮೊಟ್ಟ ಮೊದಲ ಸ್ವಾತಂತ್ರ್ಯೋತ್ಸವವನ್ನು ನಾಚಿಸುವ, ಮರೆಸುವ, ವೈಭವವನ್ನು ಮೆರೆಯಲಾಗುತ್ತದೆ. ರಾಷ್ಟ್ರಾದ್ಯಂತ ವಾಣಿಜ್ಯ ಛೇಂಬರುಗಳಲ್ಲಿ, ರಿಸಾರ್ಟ್‌ಗಳಲ್ಲಿ ಇದಕ್ಕೆ ಕಾರಣರಾದವರಿಗೆಲ್ಲ ಕೃತಜ್ಞತೆಯನ್ನು ಸಮರ್ಪಿಸಲಾಗುತ್ತದೆ. ಸ್ವದೇಶೀ ದ್ರಾಕ್ಷಾರಸಗಳಿಂದ, ವಿದೇಶಿ ಮದ್ಯಗಳ ಟೋಸ್ಟ್ ನೀಡಲಾಗುತ್ತದೆ. ನಗರಗಳೆಲ್ಲಾ ಕಣ್ಣು ಕುಕ್ಕಿ ಕೋರೈಸುತ್ತವೆ, ಜಗಜಗಿಸುವ ದೀಪ ಮಾಲೆಯ ಸುವರ್ಣ ತೇಜದಲ್ಲಿ. ಈ ಸುವರ್ಣ ಭಾರತದಲ್ಲಿ ಅರವತ್ತು ವರ್ಷಗಳಲ್ಲಿ ಅಸಾಧ್ಯವೆನಿಸಿದ್ದೆಲ್ಲವೂ ಸಾಧ್ಯವಾಗಿವೆ. ವಿದೇಶೀ ವಿನಿಮಯಕ್ಕಾಗಿ ಚಿನ್ನವನ್ನೇ ಅಡವಿಡಬೇಕಾಯ್ತು, ಒಮ್ಮೆ. ಆ ಪರಿಸ್ಥಿತಿಯನ್ನು ತಲುಪಲು ನಮ್ಮ ದರಿದ್ರ ನಾರಾಯಣರ ಪಾತ್ರವೇನೆಂಬುದು ಗೌಣ! ಸಾಧಾರಣ ಜನ ತಮ್ಮ ಬಳಿ ಇದ್ದಬದ್ದ ಚಿನ್ನವನ್ನೆಲ್ಲಾ ದಾನವಾಗಿ ನೀಡಿದ್ದರು. 'ಜೈ ಜವಾನ್ ಜೈ ಕಿಸಾನ್' ಎಂದು ಘೋಷಿಸಿ ಸ್ಫೂರ್ತಿ ನೀಡಿದ್ದ ನಮ್ಮ ನಾಯಕರಿಗೆ ಒಮ್ಮೆ ವಿನೋಬಾ ಹೇಳಿದ್ದರೆಂದು ಅಂದು. ಇಂದು ಎಷ್ಟು ಬೇಕಾದರೂ ಚಿನ್ನವನ್ನು ಯಾರು ಬೇಕಾದರೂ ಆಮದು ಮಾಡಿಕೊಳ್ಳಬಹುದು! ಅಹಹಾ! ಎಂಥ ಪರಿವರ್ತನೆ. ಆತ್ಮಹತ್ಯೆ ಏಕೆ? ಚಿನ್ನವನ್ನು ಆಮದು ಮಾಡಿಕೊಳ್ಳಪ್ಪಾ! ಆಹಾರವಿಲ್ಲದಿದ್ದರೆ ಚಿನ್ನವನ್ನೇ ತಿನ್ನು! ಆಹಾರವನ್ನು ಆಮದು ಮಾಡಿಕೊಂಡೆವು, ಹಿಂದೆ. ಅದನ್ನು ಮಾರಿಬಂದ ಹಣವನ್ನು ದೇಶದಲ್ಲಿ ಹೇಗೆ ಬೇಕಾದರೂ ನಿರ್ಭಿಡೆಯಿಂದ ಖರ್ಚು ಮಾಡಿಕೊಳ್ಳುತ್ತೇವೆ ಎಂಬ ಅಮೆರಿಕದ ಷರತ್ತಿಗೆ ಒಪ್ಪಿಕೊಂಡಿದ್ದೆವು ಅಂದು. ಅಂದು ಏನಾದರೂ ಇರಲಿ, ಆಹಾರದಲ್ಲಿ ಸ್ವಾವಲಂಬನೆ ಬೇಕೆಂದು ಅದಕ್ಕೆ ಸ್ಫೂರ್ತಿದಾಯಕ ನಾಯಕತ್ವ ನೀಡಿದ್ದೆವು, ಒಮ್ಮೆ ಹಸಿರು ಕ್ರಾಂತಿಗೆ ಸುವರ್ಣಕ್ಕಿಂತ ಹೆಚ್ಚು ಆದ್ಯತೆ ನೀಡಿದ್ದೆವು. ಒಮ್ಮೆ ನಮ್ಮ ರಾಷ್ಟ್ರದಲ್ಲಿ ೬೦ ಮಿಲಿಯನ್ ಟನ್ ಆಹಾರದ ಶೇಖರಣೆ ಇತ್ತು. ದೇಶದ ಬಹುಭಾಗ ಬಡಜನತೆಗೆ ಸುಲಭ ದರದಲ್ಲಿ ರೇಷನ್ ಮೂಲಕ ಆಹಾರ ಪೂರೈಸುವುದು ದೇಶದ ಅಭಿವೃದ್ಧಿಗೆ ಅಗತ್ಯವೆಂದು ನಂಬಿದ್ದೆವು. ಒಮ್ಮೆ! ಇಂದು ಆಹಾರವನ್ನು ಮತ್ತೊಮ್ಮೆ ಆಮದು ಮಾಡಿಕೊಳ್ಳುತ್ತಿದ್ದೇವೆ! ದೇಶದ ವಿದೇಶೀ ವಿನಿಮಯದ ಬೊಕ್ಕಸ ಬಿರಿಯುತ್ತಿದೆ. ಎಷ್ಟು ಬೇಕಾದರೂ ಯಾರು ಬೇಕಾದರೂ ಹೇಗೆ ಬೇಕಾದರೂ ಖರ್ಚು ಮಾಡಿ, ಉಪಭೋಗಿಸಿ. ಹೇ ರೈತ, ಆತ್ಮಹತ್ಯೆ ಏಕೆ, ಪೆಂಗೆ? ವಿದೇಶಕ್ಕೆ ಹೋಗಿ ಬಾ! ಅದೊಂದೇ ದಾರಿ ಅಭಿವೃದ್ಧಿಗೆ, ಜಿಡಿಪಿ ದರ ಶೇ. ೧೦ಕ್ಕೆ ತಲುಪಲು! ವಿಶ್ವದಲ್ಲೆಲ್ಲೂ ಇಲ್ಲದಷ್ಟು ಸಂಖ್ಯೆಯ ಅತಿ ಶ್ರೀಮಂತರನ್ನು ತುಂಬಿದ ಹುಲುಸಾದ ತಂಪಾದ ರಾಷ್ಟ್ರವಾಗಲು ಕೃಷಿ ಭೂಮಿಯನ್ನು ಕಿತ್ತುಕೊಳ್ಳಿ ಸ್ವಾಮಿ! ನಂದಗುಡಿ ಎಸ್‌ಇಜೆಡ್‌ಗೆ ಅನುಮತಿ ನೀಡಿ ಎಂದರೆ ಆಯ್ತು. ಆದರೆ ನಿಮ್ಮ ರಾಜ್ಯದಲ್ಲಿ ಆಹಾರ ಧಾನ್ಯ ಬೆಳೆ ತೀರ ಕಮ್ಮಿಯಾಗಿದೆ ಗಮನಿಸಿ ಎನ್ನುವ ಪ್ರಧಾನಿಯವರು ನೋಟು ಕೊಡುತ್ತಾರೆ, ಊಟ ಕೊಡಲಾರರು ಇಂದು. ಒಂದು ಕಡೆ ರೈತರು ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ ಎಂದರೆ ಮಣ್ಣಿನ ಮಕ್ಕಳೆಂದೇ ಹೇಳಿಕೊಂಡು ರಾಜ್ಯವಾಳಿದವರು, ಆಳುವವರು, ಹಾಲಿ, ಮಾಜಿ ನಾಯಕಮಣಿಗಳು, ''ಮಾಡಿಕೊಳ್ಳಲಿ ಬಿಡಿ ಪಾಪ!'' ಎಂದು ಅಪ್ಪಣೆ ಕೊಡಿಸುವ ಈ ಘಟ್ಟದ ಸುವರ್ಣಮಯ ಸಾಧನೆ ಬಹಳ ಮಹತ್ವದ್ದು. ಮೊನ್ನೆ ಜಗದ್ಗುರುಗಳು ನಗರಕ್ಕೆ ಬಂದಾಗ ಇದೇ ನಾಯಕಮಣಿಗಳು ಅವರಿಗೆ ಸುವರ್ಣ ಕಿರೀಟವನ್ನು ಅರ್ಪಿಸಿ ಸ್ವಾಗತಿಸಲಿಲ್ಲವೇ? ಇದು ಸುವರ್ಣ ಭಾರತವಲ್ಲವೆನ್ನುತ್ತೀರಾ? ಇನ್ನೂ ಪುರಾವೆ ಬೇಕೇ ನಿಮಗೆ? ಛೇ! ನೀವು ದೇಶ ಭಕ್ತರಲ್ಲ ಬಿಡಿ.

ಸುವರ್ಣ ಭಾರತವೆಂದರೆ ಸಾರ್ವಭೌಮ ಭಾರತವೇ ಎಂದು ಪ್ರಶ್ನಿಸುವ ಹುಂಬತನ ನಿಮಗೇಕೆ? ಜಾಗತೀಕರಣದ ಈ ಕಾಲದಲ್ಲಿ ರಾಷ್ಟ್ರರಾಷ್ಟ್ರಗಳ ಸಾರ್ವಭೌಮತೆಗೆ ಚಿಕ್ಕಾಸೂ ಬೆಲೆ ಇಲ್ಲವೆನ್ನುವುದನ್ನು ಅರಿಯದವರೇ ನೀವು! ಅಭಿವೃದ್ಧಿಗೆ, ಶೇ. ೧೦ ಅಭಿವೃದ್ಧಿಗೆ ಸಾರ್ವಭೌಮತೆಯನ್ನು ತ್ಯಜಿಸುವುದು ಒಂದು ಸಣ್ಣ ಬೆಲೆ ಅಷ್ಟೆ. ಅಷ್ಟಕ್ಕೂ ಅದು ಪರಸ್ಪರ ಸಹಕಾರವೇ ವಿನಾ ಸಾರ್ವಭೌಮತೆಯ ಪ್ರಶ್ನೆಯೇ ಅಲ್ಲ. ನಿಮಿಟ್ಜ್ ಹಡಗು ಬಂದರೆ ಏಕೆ ಬೊಬ್ಬೆ ಇಡುತ್ತೀರಿ? ಮಿತ್ರ ರಾಷ್ಟ್ರವೊಂದು ತನ್ನ ಅಶ್ವಮೇಧಯಾಗ ಮಾಡುತ್ತಿದೆ. ಅದರ ಕುದುರೆ ಅಂಡಲೆದು ಬಂದರೆ ಅದಕ್ಕೆ ಒಂದಷ್ಟು ಹುಲ್ಲು ನೀರು ಕೊಟ್ಟು ಸತ್ಕರಿಸುವುದು ಅಧೀನತೆಯ ಪ್ರಶ್ನೆಯೇ ಅಲ್ಲ! ಅತಿಥಿ ಸತ್ಕಾರ ನಮ್ಮ ಧರ್ಮ. ಅದು ಮಿತ್ರತ್ವದ ಪ್ರಶ್ನೆ. ಅಷ್ಟಕ್ಕೂ ನಾವು ಕರೆದು ಬಂದವ ನಮ್ಮ ಅಭ್ಯಾಗತ! ಇದು ಸುವರ್ಣ ಭಾರತದ ಅಹಮಹಿಕೆಯ ಸುಂದರ ಪ್ರತೀಕ. ಎಲ್ಲಾ ಆವರಣಗಳನ್ನು ಕಳೆದುಕೊಂಡು ಬೆಳಗುವ ಬೆಳವಣಿಗೆ. ಅರವತ್ತು ವರ್ಷದಲ್ಲಿ ಇದೊಂದು ಮಹತ್ತರ ಮೈಲಿಗಲ್ಲು. ಅಂದಿನ ಶಕ್ತಿಯ ಧಾತ್ರಿ ಇಂದಿರಮ್ಮ ಅಮೆರಿಕದ ಏಳನೆಯ ನೌಕಾಪಡೆಯನ್ನು, ಬೋಟ ಕ್ಲಬ್ ಭಾಷಣದಲ್ಲಿ ''ಬಂಗಾಳ ಕೊಲ್ಲಿಯನ್ನು ಪ್ರವೇಶಿಸ್ತೀರಿ, ಹುಷಾರ್, ತೊಲಗಿ'' ಎಂದು ಘಂಟಾಘೋಷವಾಗಿ ಕೂಗಿದ್ದ ಇತಿಹಾಸ ನೆನಪು ಕಾಡಿಸುತ್ತದೆಯೆ? ಇಂದಿನ ಜಾಗತಿಕ ಸನ್ನಿವೇಶದಲ್ಲಿ ನಿಮಿಟ್ಜು ಬರಲಿ, ಅವರ ಕಾಲಾಳು ಪದಾತಿಗಳು ಬರಲಿ. ನಮ್ಮ ಸೈನಿಕ ಪಡೆಯೊಡನೆ ಹಿಮಾಲಯದಲ್ಲೆ ಬಂದೇ ಕವಾಯತು ಮಾಡಲಿ. ಹೆಯಿಲ್ ಬ್ರಿಟಾನಿಯಾ! ಹೆಯಿಲ್ ಅಮೆರಿಕಾ! ಹೆಯಿಲ್ ಸುವರ್ಣ ಭಾರತ! ವಸಾಹತುಶಾಹಿ ಕಾಲದ ಆ ಕೂಗುಗಳೊಂದಿಗೆ ನಮ್ಮದೂ ಬೆರೆತು ಎಲ್ಲಿದ್ದವರು ಎಲ್ಲಿಗೆ ತಲುಪಿದ್ದೇವೆ! ಬನ್ನಿ ಸುವರ್ಣ ಹಬ್ಬ ಮಾಡೋಣ. ಸ್ವಾತಂತ್ರ್ಯದ ಪ್ರಥಮ ಸಂಗ್ರಾಮದ ನೂರೈವತ್ತು ವರ್ಷಗಳೂ, ಸ್ವತಂತ್ರ ಭಾರತದ ಸುವರ್ಣ ವರ್ಷಗಳೂ ಒಂದಾಗಿ ಬಂದಿವೆ. ಅಂದಿನ ಕೆಲವು ಅರಸರು ತಮ್ಮ ಅರಸೊತ್ತಿಗೆಗಳನ್ನು ರಕ್ಷಿಸಿಕೊಳ್ಳಲು ಹೋರಾಡಿದರು, ರಕ್ಷಿಸುವೆನೆಂದು. ರಾಣಿ ವಿಕ್ಟೋರಿಯಾ ಆಶ್ವಾಸನೆ ನೀಡಿದಳು. ಆ ಅರಸರನ್ನು ನಾಚಿಸುವ, ಅವರದೇ ಸಂತಾನವಾದ, ಶ್ರೀಮಂತ ಉದ್ಯಮಿಗಳ ಪಡೆಯೇ ತುಂಬಿ ತುಳುಕುತ್ತಿರುವ ಸುವರ್ಣ ಭಾರತ ಪ್ರಥಮ ಸಂಗ್ರಾಮದ ಆ ಒಂದು ಆಶಯವನ್ನು ಸಾಧಿಸಿ ಜಯಭೇರಿ ಹೊಡೆದಿದೆಯೆಲ್ಲವೆ?

ಆದರೆ ಅದೇ ಸಂಗ್ರಾಮದಲ್ಲಿ ೧೫೦ ವರ್ಷಗಳೂ ತಮ್ಮ ಆಶಯಗಳ ಸಾಧನೆಗೆ ಹೋರಾಡುತ್ತಲೇ ಬಂದಿರುವವರು ಏಕೆ ಆತ್ಮಹತ್ಯೆ ಮಾಡಿಕೊಳ್ಳಬೇಕು? ಹತಾಶರಾಗಿ ಆತ್ಮಹತ್ಯೆಯ ಬಾಂಬುಗಳಾಗಬೇಕು? ಅರ್ಥವಿಲ್ಲದ ವೈಯಕ್ತಿಕ ಹಿಂಸೆಗೆ ಇಳಿಯಬೇಕು? ರೈತರೇ, ಕಾರ್ಮಿಕರೇ, ನೀವ್ಯಾಕೆ ಆತ್ಮಹತ್ಯೆ ಮಾಡಿಕೊಳ್ಳಬೇಕು? ಈ ಸಂಗ್ರಾಮವನ್ನು ಗೆದ್ದವರು ನೀವು, ಮಹಾರಾಜರಲ್ಲ ಎಂಬ ತಿಳಿವು ಇನ್ನೂ ನಿಮಗೆ ಏಕೆ ಮೂಡಲಿಲ್ಲ? ನಿಮ್ಮನ್ನು ಆತ್ಮಹತ್ಯೆ ಮಾಡಿಕೊಳ್ಳಲಿ ಬಿಡಿ ಎನ್ನುವವರ ವಿರುದ್ಧ ಸಿಡಿದೇಳುವ ಶೌರ್ಯ ನಿಮ್ಮಲ್ಲಿ ತುಂಬಿರುವುದರ ಪ್ರಜ್ಞೆ ನಿಮಗೇಕೆ ಮೂಡುತ್ತಿಲ್ಲ? ನಿಮ್ಮನ್ನು ಆತ್ಮಹತ್ಯೆ ಮಾಡಿಕೊಳ್ಳಲಿ ಎಂದು ಹೇಳುವವರೆಲ್ಲಾ ತಾವೇ ಆತ್ಮಹತ್ಯೆಗೆ ಶರಣಾಗುವಂತೆ ಅವರ ವಿರುದ್ಧ ತಿರುಗಿಬೀಳುವ ಕೆಚ್ಚು ನಿಮಗೆ ಬರಬೇಕಾದರೆ ಒಂದು ಬದಲಾವಣೆ ಅಗತ್ಯವಾಗುತ್ತದೆ. ನೀವು ಹೋರಾಡಿ ಗೆದ್ದು ಪುನಃ ಪುನಃ ಅದೇ ಮಹಾರಾಜರನ್ನೇ ನಿಮ್ಮ ನಾಯಕನನ್ನಾಗಿ, ಅರಸನನ್ನಾಗಿ, ಕೂರಿಸುವ ಭೋಳೆತನವನ್ನು ಬಿಡಬೇಕು. ನಿಮ್ಮ ನಾಯಕತ್ವವನ್ನು ನೀವೇ ವಹಿಸಿಕೊಳ್ಳಬೇಕು. ಹೊಸ ರೂಪದ, ಹೊಸ ಉಡಿಗೆಯ ರಾಜಮಹಾರಾಜರನ್ನು ಗುರುತಿಸಿ, ಅವರನ್ನು ದೂರವಿಡುವ ಜಾಣ್ಮೆಯನ್ನು ತೋರಬೇಕು. ಬೆಂದು ಬಸವಳಿದ ಕಾರ್ಮಿಕ ರೈತಾಪಿವರ್ಗದ ಸಮಾನ ಸಂದರ್ಭದಲ್ಲಿ ತಮ್ಮದೇ ನಾಯಕತ್ವದಲ್ಲಿ ವ್ಯಾಪಕವಾದ ಬಂಡೇಳದೆ ನಿಮ್ಮ ಸುವರ್ಣ ಭವಿಷ್ಯವನ್ನು ನಿರ್ಮಿಸಿಕೊಳ್ಳಲಾಗುವುದಿಲ್ಲ. ೬೦ ವರ್ಷ ಕಾದಿದ್ದಾಯ್ತು. ಅದು ಒಂದು ಜೀವಮಾನದ ಕಾಲ. ಅಂದಿನ ಅವರೆಲ್ಲ ಸಂಜೆಗೆ ಸೇರಿದವರು. ಹೊಸ ಪೀಳಿಗೆಯ ಜನರು ಹೊಸ ಮಾದರಿಯ ಹೋರಾಟಗಳನ್ನು ಸಂಘಟಿಸಿಕೊಳ್ಳದೆ ಅವರ ಜೀವನ ಸುಗಮವಾಗುವುದಿಲ್ಲ. ದೇವರ ವಿಗ್ರಹಗಳಿಗೆ ಚಿನ್ನದ ತಗಡುಗಳನ್ನು ಝಡಿಯುವ ಕೆಲಸ ನಿಮ್ಮದಲ್ಲ. ನೀವು ಮನಸ್ಸು ಮಾಡಿದರೆ, ಈ ಆತ್ಮಹತ್ಯೆಯ ಪರಿಸ್ಥಿತಿಯನ್ನು ಹಿಮ್ಮೆಟ್ಟಿಸುವುದು ನಿಮಗೆ ಸಾಧ್ಯ. ಆತ್ಮಹತ್ಯೆ ಎಂದೇ ಆದರೂ ಹೇಡಿತನ... ಅದಕ್ಕಿಂತ

೨೩ನೇ ಪುಟಕ್ಕೆ

# ಬ್ರಿಟಿಷರ ಎದೆ ನಡುಗಿಸಿದ ಅಲ್ಲೂರಿ ಸೀತಾರಾಮರಾಜು



ಒಂದು ದಿನ ಅಲ್ಲೂರಿ ತಮ್ಮ ತಂದೆಯ ಜೊತೆಗೆ ರಾಜಮಂಡ್ರಿಯ ಬೀದಿಯಲ್ಲಿ ಹೋಗುತ್ತಿದ್ದಾಗ ಓರ್ವ ಬ್ರಿಟಿಷ್ ಅಧಿಕಾರಿ ಕುದುರೆಯ ಮೇಲೆ ಸವಾರಿ ಮಾಡುತ್ತಾ ಆ ಕಡೆ ಬಂದ. ಬೀದಿಯಲ್ಲಿದ್ದವರೆಲ್ಲಾ ಆ ಅಧಿಕಾರಿಗೆ ನಮಸ್ಕರಿಸತೊಡಗಿದರು. ಅದನ್ನು ಕಂಡ ಬಾಲಕ ಸಹ ಕೈ ಎತ್ತಿದಾಗ, ತಕ್ಷಣವೇ ತಂದೆ ಆ ಬಾಲಕನ ಕೈ ಮೇಲೆ ಹೊಡೆದರು. ''ಬಿಳಿಯರಿಗೆ ನಮಸ್ಕರಿಸುತ್ತೀಯಾ ? ಅವರು ನಮ್ಮ ದೇಶವನ್ನು ಆಕ್ರಮಿಸಿ ಇಲ್ಲಿಯ ಸಂಪತ್ತನ್ನು ಕೊಳ್ಳೆಹೊಡೆಯುತ್ತಿದ್ದಾರೆ. ಈ ಲೂಟಿಕೋರರಿಗೆ ನಮಸ್ಕರಿಸುವುದು ನಮ್ಮ ಆತ್ಮಾಭಿಮಾನಕ್ಕೆ ಸಲ್ಲದು'' ಎಂದರು. ತಂದೆಯವರ ಮಾತುಗಳು ಬಾಲಕ ಅಲ್ಲೂರಿಯ ಮನಸ್ಸಿನಲ್ಲಿ ನಾಟಿಬಿಟ್ಟಿತು.

ಅಲ್ಲೂರಿಗೆ ಹನ್ನೊಂದು ವರ್ಷವಿರುವಾಗಲೇ ತಂದೆ ಕಾಲರಾ ರೋಗಕ್ಕೆ ಬಲಿಯಾದರು. ಕುಟುಂಬದ ಆದಾಯ ನಿಂತುಹೋಗಿ ಸಂಸಾರ ಬೀದಿಪಾಲಾಗುವ ಸ್ಥಿತಿ ಒದಗಿತು. ಆದರೂ ಧೃತಿಗೆಡದ ತಾಯಿ ಸೂರ್ಯನಾರಾಯಣಮ್ಮ ಅನೇಕ ಕಷ್ಟ-ನಷ್ಟಗಳನ್ನು ಎದುರಿಸಿ ಬಂಧುಗಳ ಸಹಾಯದೊಂದಿಗೆ ಅಲ್ಲೂರಿ ಮತ್ತು ಅವನ ತಂಗಿಯನ್ನು ಓದಿಸಿದರು. ಮೊದಮೊದಲು ವಿದ್ಯಾಭ್ಯಾಸದ ಬಗ್ಗೆ ಅತ್ಯಂತ ಆಸಕ್ತಿಯನ್ನು ಹೊಂದಿದ್ದ ಅಲ್ಲೂರಿ ಕಾಲಕ್ರಮೇಣ ಉದಾಸೀನನಾದ. ಬ್ರಿಟಿಷರ ಶಿಕ್ಷಣ ಕ್ರಮ ಅವರಿಗೆ ಸರಿಕಾಣಲಿಲ್ಲವೇನೋ ? ಶಾಲೆಗೆ ಹೋಗುವುದರ ಬಗ್ಗೆ ನಿರಾಸಕ್ತಿ ತಳೆದರೂ ಜ್ಞಾನಾರ್ಜನೆಯ ಬಗ್ಗೆ ಅಲ್ಲೂರಿಗೆ ಒಲವಿತ್ತು. ತೆಲುಗು ಭಾಷೆಯೊಂದಿಗೆ ಹಿಂದಿ, ಸಂಸ್ಕೃತ, ಉರ್ದು ಭಾಷೆಗಳಲ್ಲಿ ಪ್ರಾವೀಣ್ಯ ಪಡೆದ. ಆಯುರ್ವೇದ ವೈದ್ಯ ಪದ್ಧತಿಯನ್ನು ಕಲಿತ. ಅಷ್ಟೇ ಅಲ್ಲ , ವ್ಯಾಯಾಮ, ಕುದುರೆ ಸವಾರಿ, ಕತ್ತಿ ವಿದ್ಯೆ, ಬಿಲ್ಲು ವಿದ್ಯೆ ಮುಂತಾದವುಗಳನ್ನು ಕರಗತಮಾಡಿಕೊಂಡ.

ಜನತೆಯ ಜೀವನವನ್ನು ಗಮನಿಸುತ್ತಿದ್ದ ಅಲ್ಲೂರಿಗೆ ಕಷ್ಟಪಟ್ಟು ದುಡಿಯುವ ವ್ಯಕ್ತಿ ಬಡತನದಿಂದ ನರಳಿದರೆ, ಶ್ರಮಪಡದ ಕೆಲವರು ದುಡಿಯುವ ಜನತೆಯನ್ನು ಶೋಷಿಸಿ ಐಷಾರಾಮದ ಜೀವನ ನಡೆಸುವುದನ್ನು ನೋಡಿ ಅವರಲ್ಲಿ ತೀವ್ರ ಸಂಕಟ ಉಂಟಾಗುತ್ತಿತ್ತು. ಬಡವರು ಬಡವರಾಗಿಯೇ ಉಳಿಯುವ ಈ ವ್ಯವಸ್ಥೆಯನ್ನು ಕಿತ್ತೊಗೆಯಬೇಕೆಂದು ನಿರ್ಧರಿಸಿದ.

ಅಲ್ಲೂರಿಯವರು ಆಂಧ್ರಪ್ರದೇಶವನ್ನು ತಮ್ಮ ರಣರಂಗವನ್ನಾಗಿ ಆಯ್ಕೆ ಮಾಡಿಕೊಂಡಾಗಲೇ ದೇಶದ ಉದ್ದಗಲಕ್ಕೂ ಬ್ರಿಟಿಷರ ವಿರುದ್ಧ ವ್ಯಾಪಕ ಪ್ರತಿಭಟನೆಗಳು ಆರಂಭವಾಗಿದ್ದವು. ವ್ಯಾಪಾರದ ಹೆಸರಿನಲ್ಲಿ ನಮ್ಮ ನಾಡಿಗೆ ಕಾಲಿಟ್ಟ ಬ್ರಿಟಿಷರು ಸಂಚಿನ ಮೂಲಕ ಈ ದೇಶದ ಯಜಮಾನರಾದರು. ಇಡೀ ದೇಶವನ್ನು ತಮ್ಮ ಬೂಟುಗಳಡಿಯಲ್ಲಿ ತಂದ ಬ್ರಿಟಿಷರು ಇಲ್ಲಿನ ಅಪಾರ ಸಂಪನ್ಮೂಲಗಳನ್ನು, ಅಗ್ಗವಾದ ಮಾನವ ಶ್ರಮವನ್ನು ದೋಚಲಾರಂಭಿಸಿದರು. ಆದರೆ ಬ್ರಿಟಿಷರ ದೌರ್ಜನ್ಯಗಳನ್ನು, ಪರಕೀಯರ ಆಳ್ವಿಕೆಯನ್ನು, ಜನ ಎಂದಿಗೂ ಒಪ್ಪಲಿಲ್ಲ. ಮೌನವಾಗಿಯೇ ಕುದಿಯುತ್ತಿದ್ದ ಜನತೆಯ ಆಕ್ರೋಶ ಆಗಾಗ, ಅಲ್ಲಲ್ಲಿ ಪ್ರತಿರೋಧದ ಕಿಡಿಗಳಾಗಿ ಸಿಡಿಯುತ್ತಲೇ ಇದ್ದವು. ಅಲ್ಲಲ್ಲಿ ಕಾಣಿಸಿಕೊಂಡ ಪ್ರತಿಭಟನೆ, ಬಂಡಾಯ, ದಂಗೆ ಕೊನೆಗೆ ಸಾಮೂಹಿಕ ಹೋರಾಟವಾಗಿ ಪರಿವರ್ತನೆಗೊಂಡಿತು.

೧೮೫೭ರಲ್ಲಿ ಸಿಪಾಯಿ ದಂಗೆ, ೧೯೦೫ ಬಂಗಾಳದ ವಿಭಜನೆಯ ವಿರುದ್ಧದ ಚಳುವಳಿ, ಜನತೆಯ ಆಕ್ರೋಶಕ್ಕೆ ಇಂಬು ನೀಡಿದಂತಹವು. ೧೯೧೭ರಲ್ಲಿ ರಷ್ಯಾದಲ್ಲಿ ನಡೆದ ಕ್ರಾಂತಿ ಲೆನಿನ್‌ರ ನೇತೃತ್ವದಲ್ಲಿ ಶೋಷಣೆಮುಕ್ತ ದುಡಿಯುವ ಜನತೆಯ ಸಮಾಜ ಸೃಷ್ಟಿಸಿದ್ದು ನಮ್ಮ ದೇಶದ ಜನರ ಮೇಲೂ ಸಹ ಅಗಾಧ ಪ್ರಭಾವವನ್ನು ಬೀರಿತು. ದೇಶದೆಲ್ಲೆಡೆ ಹರಡುತ್ತಿದ್ದ ಸಂಗ್ರಾಮದ ಜ್ವಾಲೆಗಳು ಆಂಧ್ರದಲ್ಲೂ ಹರಡದಿರುತ್ತದೆಯೆ ? ೧೯೦೭ರಲ್ಲಿ ಬಿಪಿನ್ ಚಂದ್ರ ಪಾಲ್ ಆಂಧ್ರ ಪ್ರದೇಶದಲ್ಲಿ ಪರ್ಯಟನೆ ಮಾಡಿ ಜನತೆಯಲ್ಲಿ ರಾಷ್ಟ್ರೀಯತಾ ಭಾವನೆಯನ್ನು ಬಿತ್ತಿದರು. ಸ್ವಾತಂತ್ರ್ಯದ ಘೋಷಣೆ ಎಲ್ಲೆಡೆ ಮೊಳಗಿತು. ವಿದ್ಯಾರ್ಥಿ ಯುವಜನರು, ರೈತ-ಕಾರ್ಮಿಕರು ಬ್ರಿಟಿಷರ ವಿರುದ್ಧ ಸಿಡಿದೆದ್ದರು. 'ಕರ ನಿರಾಕರಣೆ'ಯ ಸಮರಶೀಲ ಚಳುವಳಿ ಬೆಳೆಯಿತು. ಹಲವಾರು ಕಡೆ ಜನ ಪೊಲೀಸರನ್ನು ಎದುರಿಸಿ ವೀರ ಮರಣವನ್ನಪ್ಪಿದರು.

ವಿಶಾಖಪಟ್ಟಣ ಜಿಲ್ಲೆಯ ಚಿಂತಪಲ್ಲಿ ಎಂಬಲ್ಲಿ ತಹಸೀಲ್ದಾರನಾಗಿದ್ದ ಬಾಸ್ಟಿಯನ್ ಎಂಬ ಅಧಿಕಾರಿ ನಡೆಸುತ್ತಿದ್ದ ದಮನದ ವಿರುದ್ಧ ಅಲ್ಲೂರಿ ಸರ್ಕಾರಕ್ಕೆ ವರದಿಯೊಂದನ್ನು ಕಳಿಸಿದರು. ಕ್ರೂರಿಗೆ ಶಿಕ್ಷೆ ವಿಧಿಸುವ ಬದಲಿಗೆ ಆ 'ಘನ' ಸರ್ಕಾರ ಅಲ್ಲೂರಿಯವರ ಮೇಲೆ ಭದ್ರತಾ ಕೇಸನ್ನು ಹಾಕಿತು ! ಸಾಕ್ಷ್ಯಾಧಾರಗಳಿಲ್ಲವೆಂದು ಕೇಸು ವಜಾ ಆದರೂ ಪೊಲೀಸರು ಅಲ್ಲೂರಿಯ ಮೇಲೆ ಕಣ್ಣಿಟ್ಟಿದ್ದರು. ಅಲ್ಲೂರಿಯವರು ಬ್ರಿಟಿಷರ ಕಣ್ಣಿಗೆ ಮಣ್ಣೆರಚಲು ನಿರ್ಧರಿಸಿ ಅಲ್ಪ ಕಾಲ ಯೋಗಿಯಂತೆ ವರ್ತಿಸಲಾರಂಭಿಸಿದರು. ಈ ಚರ್ಯೆ ಒಂದು ಕಡೆ ಪೊಲೀಸರ ಗುಮಾನಿಯನ್ನು ತಗ್ಗಿಸಿದರೆ ಇನ್ನೊಂದೆಡೆ ಜನತೆಗೆ ಅವರು ಹತ್ತಿರವಾಗಲು ಸಹಾಯ ಮಾಡಿತು. ಅಂತಹ ಜನತೆಯ ಅಜ್ಞಾನವನ್ನು ಬಳಸಿಕೊಂಡು ಬಡ್ಡಿ ವ್ಯಾಪಾರಿಗಳು ಮೋಸ ಮಾಡುತ್ತಿದ್ದರು. ಅವರಿಗೆ ಸಾಲ ನೀಡಿ ಅವರ ಭೂಮಿಯನ್ನು ನುಂಗುತ್ತಿದ್ದರು. ಬ್ರಿಟಿಷರು ಕೂಡ ದನಕರುಗಳನ್ನು ಮೇಯಿಸಲು ತೆರಿಗೆ ಸಂಗ್ರಹಿಸಲಾರಂಭಿಸಿದರು. ಕೃಷಿ ನಿಷೇಧಿಸಿದರು. ಅವರಿಂದ ವಸ್ತುಗಳನ್ನು ಸುಲಭವಾಗಿ ಕಸಿದುಕೊಳ್ಳುತ್ತಿದ್ದರು. ಕೂಲಿ ಕೆಲಸಕ್ಕಾಗಿ ಹಗಲಿರುಳು ದುಡಿಸಿಕೊಂಡು ಕೇವಲ ೧೨ ಪೈಸೆ ಕೂಲಿ ನೀಡುತ್ತಿದ್ದರು. ಎಷ್ಟೋ ಬಾರಿ ಜನ ಗೆಡ್ಡೆಗೆಣಸುಗಳನ್ನು ತಿಂದು ಬದುಕಬೇಕಾಗುತ್ತಿತ್ತು. ಕೆಲವು ಬಾರಿ ಹುಣಸೇ ಬೀಜಗಳ ಅಂಬಲಿಯನ್ನು ಕುಡಿಯುತ್ತಿದ್ದುದುಂಟು.

''ಸಾಯಿಸಬೇಕಾದರೆ ಇಲ್ಲಿಗೆ ಹೊಡಿ'' ಎಂದು ತಮ್ಮ ಎದೆಯನ್ನು ತೋರಿಸಿದರು ಅಲ್ಲೂರಿ. ಸಾವಿನ ಬಾಯಿಯಲ್ಲಿದ್ದಾಗಲೂ ಸರಸವೇ ! ಗುಡಾಲ್ ಎದೆಗೆ ಗುರಿಯಿಟ್ಟ. ಮರುಕ್ಷಣವೇ ೨೭ರ ಹರೆಯದ ಆ ವಿಪ್ಲವ ಜ್ಯೋತಿ ನಂದಿಹೋಯಿತು. ಆಂಧ್ರ ಅಷ್ಟೇ ಅಲ್ಲದೆ ದೇಶದೆಲ್ಲೆಡೆ ಸಹಸ್ರಾರು ಯುವಕ- ಯುವತಿಯರು ಸ್ವಾತಂತ್ರ್ಯ ಸಮರಕ್ಕೆ ಧುಮುಕಲು ಅಲ್ಲೂರಿ ಸ್ಫೂರ್ತಿಯಾದರು. ಇಂದಿನ ಯುವ ಜನತೆಗೆ ದೇಶದ ಬಗ್ಗೆ ಅಭಿಮಾನ ಕಡಿಮೆಯಾಗುತ್ತಿದ್ದು, ಹೊಟ್ಟೆಪಾಡಿನ ಚಿಂತೆಯೇ ಅಗಾಧವಾಗಿಹೋಗಿ ನಿಸ್ವಾರ್ಥ ಜೀವನವನ್ನು ನಡೆಸಿ ಹೋರಾಡಿದ ತ್ಯಾಗ ಪುರುಷರ ಜೀವನದ ಆದರ್ಶಗಳನ್ನು ಇಂದು ಜನರು ಮರೆತಿರುವುದು ವಿಷಾದಕರ. ೨೭ರ ಹರೆಯದ ಅಲ್ಲೂರಿ ಸೀತಾರಾಮರಾಜು ಅವರ ಕೆಚ್ಚು, ಧೈರ್ಯ, ದೇಶಭಕ್ತಿ, ಅರ್ಪಣಾ ಮನೋಭಾವ ಮರೆಯಾಗಿವೆ.

ವೀರೇಶ್ ಬಳ್ಳಾರಿ

ಇಂತಹ ಪರಿಸ್ಥಿತಿಯಲ್ಲಿ ಅಲ್ಲೂರಿಯವರು ಜನತೆಯಲ್ಲಿ ಅಜ್ಞಾನ-ಅನೈತಿಕತೆಗಳನ್ನು ತೊಡೆದುಹಾಕಲು ಪ್ರಯತ್ನಿಸಿದರು. ತಮ್ಮತಮ್ಮಲ್ಲಿನ ಭಿನ್ನಾಭಿಪ್ರಾಯಗಳನ್ನು ಪರಿಹರಿಸಿ ಕೊಳ್ಳಲು ಬ್ರಿಟಿಷರ ಕೋರ್ಟಿಗೆ ಹೋಗುವುದನ್ನು ತಪ್ಪಿಸಿ, ಅಲ್ಲೂರಿಯವರೇ ಪಂಚಾಯಿತಿ ನ್ಯಾಯಸ್ಥಾನಗಳಲ್ಲಿ ವಿವಾದಗಳನ್ನು ಬಗೆಹರಿಸುತ್ತಿದ್ದರು. ಆ ಜನರ ಕಾಯಿಲೆ ಕಸಾಲೆಗಳಿಗೆ ಆಯುರ್ವೇದ ಚಿಕಿತ್ಸೆಯನ್ನು ನೀಡುತ್ತಿದ್ದರು. ತಮ್ಮ ನಾಡಿನಲ್ಲಿಯೇ ತಾವು ಪರಕೀಯರಾಗಿ ಬದುಕಬೇಕಾದಾಗ ಸಹಜವಾಗಿಯೇ ಆ ಜನರಲ್ಲಿ ಉಂಟಾಗುತ್ತಿದ್ದ ಅಸಂತೃಪ್ತಿಯನ್ನು ಆಕ್ರೋಶವಾಗಿ ಬದಲಾಯಿಸಿ ಬ್ರಿಟಿಷರ ವಿರುದ್ಧ ಸಿಡಿದೇಳುವಂತೆ ಅಲ್ಲೂರಿ ಆ ಜನತೆಗೆ ಮಾರ್ಗದರ್ಶನ ನೀಡಿದರು. ಬ್ರಿಟಿಷರನ್ನು ತೊಲಗಿಸಿ ಸ್ವಾತಂತ್ರ್ಯ ಪಡೆಯಬೇಕೆಂಬ ಪ್ರಬಲವಾದ ಇಚ್ಛೆಯನ್ನು ಬೆಳೆಸಿದರು. ಆ ಇಚ್ಛೆಯನ್ನು ಬಲಿಷ್ಠ ಹೋರಾಟವನ್ನಾಗಿ ಬೆಳೆಸಿ ತಾವೇ ನಾಯಕರಾಗಿ ನಿಂತರು.

ತಾತ್ಕಾಲಿಕವಾಗಿ ಅಲ್ಲೂರಿಯವರ ಮೇಲೆ ಪೊಲೀಸರ ಗುಮಾನಿ ಕಡಿಮೆಯಾಗಿದ್ದಿತು. ತಮ್ಮಲ್ಲಾದ ಬದಲಾವಣೆ ಗುರುತಿಸಿ, ಆ ಗಿರಿಜನರು ಅಲ್ಲೂರಿಯವರನ್ನು ಗಾಢವಾಗಿ ಪ್ರೀತಿಸುತ್ತಿದ್ದುದನ್ನು ಕಂಡ ಬ್ರಿಟಿಷ್ ಅಧಿಕಾರಿಗಳು, ಪೊಲೀಸರು ತಕ್ಷಣವೇ ಕಾರ್ಯ ಪ್ರವೃತ್ತರಾದರು. ಅಲ್ಲೂರಿಯವರನ್ನು ಹೋರಾಟದ ಮಾರ್ಗದಿಂದ ತಪ್ಪಿಸಲು ೫೦ ಎಕರೆ ಜಮೀನು, ಒಂದು ಮನೆ ಮತ್ತು ವರ್ಷಕ್ಕೆ ಬೇಕಾಗುವ ದವಸ ಧಾನ್ಯಗಳನ್ನು ಕೊಡುತ್ತೇವೆಂದು ತಾಯಿ, ತಂಗಿ, ತಮ್ಮನ ಜೊತೆ ಸುಖವಾಗಿ ಬಾಳಬಹುದು ಎಂಬ ಆಮಿಷವನ್ನು ತೋರಿಸಿದರು. ತಾಯಿಯ ಮೂಲಕ ಹೇಳಿಸಲೆತ್ನಿಸಿದರು. ಆದರೆ, ಅಲ್ಲೂರಿಯವರು ಇದೆಲ್ಲವನ್ನೂ ತಿರಸ್ಕರಿಸಿದರು. ಈ ಹಿಂದೆ ಸಹ ಕೌಟುಂಬಿಕ ಜವಾಬ್ದಾರಿಯನ್ನು ಹೊರಬೇಕೋ ಅಥವಾ ಸ್ವಾತಂತ್ರ್ಯ ಸಂಗ್ರಾಮಕ್ಕೆ ಧುಮುಕಬೇಕೋ ಎಂಬ ಪ್ರಶ್ನೆ ಜೀವನದಲ್ಲಿ ಎದುರಾದಾಗ ಅಲ್ಲೂರಿಯವರು ಎರಡನೆಯದನ್ನೇ ಆರಿಸಿಕೊಂಡಿದ್ದರು. ಸಾಂಸಾರಿಕ ಹೊಣೆಗಾರಿಕೆ ತೆಗೆದುಕೊಂಡರೆ ಮನೆಯವರಿಗೆ ನೆರವಾಗಬಹುದು ನಿಜ, ಆದರೆ ಬ್ರಿಟಿಷರ ದಾಸ್ಯಕ್ಕೆ ಸಿಲುಕಿರುವ ಅಸಂಖ್ಯಾತ ತಂದೆ-ತಾಯಿಯರ ಕಣ್ಣೀರನ್ನು ಒರೆಸಲಾದೀತೆ ? ಇದು ಅವರ ವಿಚಾರವಾಗಿತ್ತು. ಒಮ್ಮೆ ಈ ವಿಚಾರ ಮೂಡಿಬಂದ ಮೇಲೆ ಅವರೆಂದೂ ಹಿಂತಿರುಗಿ ನೋಡಲಿಲ್ಲ. ಈ ಹಾದಿಯನ್ನು ಬಿಟ್ಟು ಪಕ್ಕಕ್ಕೆ ಸರಿಯುವ ಆಲೋಚನೆ ಅವರ ಮನದಲ್ಲಿ ಎಂದೂ ಮೂಡಿಬರಲೇ ಇಲ್ಲ. ಇದರಿಂದಾಗಿ ಬಂಧುಬಾಂಧವರಿಂದಲೂ ಆತ್ಮೀಯರಿಂದಲೂ ದೂರವಾಗುವ ಸಂದರ್ಭ ಬಂದರೂ ಅಳುಕಲಿಲ್ಲ. ಬ್ರಿಟಿಷರ ಎಲ್ಲಾ ಪ್ರಯತ್ನಗಳನ್ನು ಮೀರಿ ಛಲಬಿಡದ ತ್ರಿವಿಕ್ರಮನಂತೆ ಬ್ರಿಟಿಷರ ವಿರುದ್ಧ ಯುದ್ಧವನ್ನು ಸಾರಿದರು.

ರಾಜಕೀಯ ಚೈತನ್ಯವು ಕಡಿಮೆ ಇರುತ್ತಿದ್ದ ಹಿಂದಿನ ಅನೇಕ ಸಂಘರ್ಷಗಳನ್ನು ಬ್ರಿಟಿಷರು ಸುಲಭವಾಗಿ ಸೋಲಿಸಿ ತಾವು ಅಪ್ರತಿಮರೆಂದು ಭ್ರಮಿಸಿದ್ದರು. ಆದ್ದರಿಂದಲೇ

## ಪಿರಮಿಡ್ಡಿನೊಳಗೆ

ನಿನಗೆ ಗೊತ್ತೇ ಗೆಳತಿ,
ಪಿರಮಿಡ್ಡಿನೊಳಗೆ ಎಲ್ಲವೂ
ಇದ್ದಂತೇ ಇರುವುದಂತೆ
ನಿಜ, ಇಲ್ಲಿ ಎಲ್ಲವೂ
ಹಾಗೆಯೇ ಇದೆ
ಸೂರ್ಯ ಚಂದ್ರರು
ಬಂದು ಹೋಗುದ ಬಿಟ್ಟರೆ
ಬೇರಾವ ಚೋದ್ಯವೂ ಉಳಿದಿಲ್ಲ.

ಇಲ್ಲಿ ಯಾವುದೂ ಬದಲಾಗುತ್ತಿಲ್ಲ,
ದಿನಬೆಳಗಾದರೆ ಅದೇ ಪ್ರಶ್ನೆ
ಸುತ್ತೆಲ್ಲ ಬರೇ ಶೂನ್ಯ.

ಸದಾ ಬೆಳಕಿಗಾಗಿ ಕಾತರಿಸುತ್ತಿದ್ದ
ಕಣ್ಣುಗಳು
ರಾತ್ರಿ ಬೆಳಗಾಗುವುದೇ ಬೇಡವೆಂದು
ಹರಸುತ್ತಿವೆ.

ಇದೇನು ವಿಕೃತಿ ಗೆಳತಿ ?!
ಈ ಬದುಕಿನ ಚಿತ್ರವಿಚಿತ್ರ ತಿರುವುಗಳು
ಯಾರದೋ ಕೈಗೊಂಬೆಗಳಾಗಿ
ಮತ್ಯಾರದೋ ಪಾಪದ
ಪ್ರಾಯಶ್ಚಿತ್ತಕ್ಕೆ ಪಾಲುದಾರರಾಗಿ
ಯಾವಾಗ ಬಯಸಿದಂತೆ ಬದುಕುವುದು ಗೆಳತಿ ?

ಭರವಸೆಯ ಬೆಳಕು
ಪಿರಮಿಡ್ಡಿನ ಭದ್ರಗೋಡೆಗಳನ್ನು ಭೇದಿಸದು
ಈ ಕಷ್ಟಗಳೂ ಅಷ್ಟೇ
ಹೊರಹೋಗಲೊಲ್ಲವು.



ಕಣ್ಣೀರನ್ನೇ ಕುಡಿದು ಎಷ್ಟು ದಿನ ಬದುಕಲಿ !
ಈ ಅಧ್ಯಾಯ ಇಲ್ಲಿಗೇ ಮುಗಿದುಬಿಡಲಿ.
ಸುಖದ ಸುಂದರ ಮುಖವಾಡವಿರುವಂತೆಯೇ
ವಿದಾಯ ಹೇಳುತ್ತೇನೆ. ಈ ಶೋಕ
ಪಿರಮಿಡ್ಡಿನ ಬದುಕು, ಎಲ್ಲವೂ ನನ್ನೊಂದಿಗೇ ಸಮಾಧಿಯಾಗಿಬಿಡಲಿ.

**ಹೇಮಾ ವೆಂಕಟ್**
ಹವ್ಯಾಸಿ ಪತ್ರಕರ್ತೆ, ಸುಳ್ಯ ಅಂಚೆ - ೫೭೪ ೨೩೯, ದಕ್ಷಿಣ ಕನ್ನಡ

ಅಲ್ಲೂರಿ ತಮ್ಮ ರಾಜಕೀಯ ಹೋರಾಟಕ್ಕೆ ಖಚಿತವಾದ ರಾಜಕೀಯ ಲಕ್ಷ್ಯವನ್ನು ನೀಡಿದರು. ಬ್ರಿಟಿಷರಿಂದ ಸ್ವಾತಂತ್ರ್ಯವನ್ನು ಕಸಿದು ಕೊಳ್ಳಬೇಕೇ ಹೊರತು ಭಿಕ್ಷೆ ಬೇಡಿ ಪಡೆಯಬಾರದು, ಲೂಟಿಕೋರರನ್ನು ಬಗ್ಗು ಬಡಿಯಬೇಕೇ ಹೊರತು ಅವರೊಂದಿಗೆ ರಾಜಿ ಸಲ್ಲದು ಎಂಬುದು ಅಲ್ಲೂರಿಯವರ ದೃಢನಂಬಿಕೆಯಾಗಿತ್ತು. **'ದೇಶವನ್ನು ರಕ್ಷಿಸಲು ಯುದ್ಧ ಅವಶ್ಯಕ. ಸ್ವರಾಜ್ಯಕ್ಕಾಗಿ ನನ್ನ ಹೋರಾಟ'** ಎಂದು ಅಲ್ಲೂರಿ ಘೋಷಿಸಿದರು. ಜನತೆಯಲ್ಲೂ ಇದೇ ವಿಚಾರವನ್ನು ತುಂಬಿದರು. ಸಮರಕ್ಕೆ ಅವಶ್ಯವಿರುವ ಸೈನ್ಯವನ್ನು ಸಜ್ಜುಗೊಳಿಸಿದರು. ಅಲ್ಲಿನ ಯುವಕರಿಗೆ ಶಸ್ತ್ರವಿದ್ಯೆಯನ್ನು ಕಲಿಸಿಕೊಟ್ಟರು. ಪ್ರಾಣವನ್ನು ಪಣವಿಟ್ಟು ಹೋರಾಡುವ ಕಲಿಗಳನ್ನು ತಯಾರು ಮಾಡಿದರು. ಕೆಲವು ಪ್ರದೇಶಗಳಲ್ಲಿ ಯುದ್ಧ ಶಿಕ್ಷಣ ನೀಡಲು ಅಭೇದ್ಯವಾದ ಸ್ಥಾವರಗಳನ್ನು ಸ್ಥಾಪಿಸಿದರು. ಸಮರ್ಥವಾದ ಗೂಢಚಾರ ದಳವನ್ನು ಸಜ್ಜು ಮಾಡಿ ಬ್ರಿಟಿಷರ ಪ್ರತಿಯೊಂದು ಚಲನವಲನಗಳನ್ನು ತಿಳಿದುಕೊಳ್ಳುತ್ತಿದ್ದರು. ಈ ಹೋರಾಟದಲ್ಲಿ ಸ್ತ್ರೀಯರು, ಮಕ್ಕಳು, ವೃದ್ಧರು ಎಲ್ಲರೂ ಭಾಗವಹಿಸಿದರು. ಆಯುಧಗಳನ್ನು ಬಚ್ಚಿಡುವುದು, ಆಹಾರ ನೀಡುವುದು ಮುಂತಾದ ಕಷ್ಟವಾದ ಕೆಲಸಗಳನ್ನು ಸ್ತ್ರೀಯರು ಯಶಸ್ವಿಯಾಗಿ ನಿರ್ವಹಿಸಿದರು. ಯುದ್ಧಕ್ಕೆ ಅವಶ್ಯವಾದ ಶಸ್ತ್ರಾಸ್ತ್ರಗಳನ್ನು ಸಂಗ್ರಹಿಸಲು ಪೊಲೀಸ್ ಠಾಣೆಗಳ ಮೇಲೆ ದಾಳಿಗಳು ಆರಂಭವಾದವು. ೧೯೨೨ರ ಆಗಸ್ಟ್ ೨೨ರಂದು ಚಿಂತಪಲ್ಲಿಯಲ್ಲಿ, ೨೩ರಂದು ಕೃಷ್ಣದೇವಿ ಪೇಟೆಯಲ್ಲಿ, ೨೪ರಂದು ರಾಜವೊಮ್ಮಂಗಿಯಲ್ಲಿ ದಾಳಿ ನಡೆಸಿ ಬ್ರಿಟಿಷರ ವಿರುದ್ಧ ಸಮರಕ್ಕೆ ಅವರಿಂದಲೇ ಬೇಕಾದ ಶಸ್ತ್ರಾಸ್ತ್ರಗಳನ್ನು ಸಂಗ್ರಹಿಸಿದರು.

ತನ್ನ ದಾಳಿಯ ಬಗ್ಗೆ ಅಲ್ಲೂರಿಯವರು ಯಾವಾಗಲೂ ಪೊಲೀಸರಿಗೆ ಮುನ್ನೆಚ್ಚರಿಕೆ ನೀಡುತ್ತಿದ್ದರು ಎಂದರೆ ನಾವು ಅವರ ಅಸೀಮ ಸಾಹಸದ ಬಗ್ಗೆ ಊಹಿಸಿಕೊಳ್ಳಬಹುದು. ಆಂಧ್ರಪ್ರದೇಶದಲ್ಲಿ ಈ ಹೋರಾಟಗಳು ಜನತೆಯಲ್ಲಿ ಸಂಚಲನವನ್ನುಂಟುಮಾಡಿದವು. ಅಲ್ಲೂರಿಯವರನ್ನು ನೋಡಲು ಜನ ಸಾವಿರಾರು ಸಂಖ್ಯೆಯಲ್ಲಿ ನೆರೆಯುತ್ತಿದ್ದರು. ಶತ್ರು ಸೈನ್ಯದ ಜೊತೆಗೆ ನಡೆದ ಮುಖಾಮುಖಿ ಹೋರಾಟದಲ್ಲಿ ಹಲವಾರು ಬಾರಿ ಇವರ ಸೈನ್ಯದಳ ಬ್ರಿಟಿಷರನ್ನು ಅವಮಾನಕರವಾದ ರೀತಿಯಲ್ಲಿ ಸೋಲಿಸಿ ಅವರ ಶಸ್ತ್ರಾಸ್ತ್ರಗಳನ್ನು ವಶಪಡಿಸಿಕೊಂಡಿತು. ಅಲ್ಲೂರಿಯವರು ಹಲವಾರು ಬಾರಿ **'ನಾನು ಇಂತಹ ಕಡೆ ತಂಗಿದ್ದೇನೆ. ಬೇಕಿದ್ದರೆ ಬಂದು ಭೇಟಿಯಾಗಬಹುದು'** ಎಂದು ಸುದ್ದಿಯನ್ನು ಕಳುಹಿಸುತ್ತಿದ್ದರು. ಪೊಲೀಸ್ ಪಡೆಗಳು ಅಲ್ಲಿಗೆ ಬರುವುದಿರಲಿ, ತಾವಿರುವ ಸ್ಥಳದಿಂದಲೇ ಪಲಾಯನ ಮಾಡುತ್ತಿದ್ದರು.

**ಬ್ರಿಟಿಷರ ಮೇರೆಯಿಲ್ಲದ ದೌರ್ಜನ್ಯ**

ಅಲ್ಲೂರಿಯವರ ಹೋರಾಟವನ್ನು ಬಗ್ಗುಬಡಿಯಲು ಬ್ರಿಟಿಷ್ ಪ್ರಭುತ್ವ ಬೇರೆ ಬೇರೆ ಕಡೆಗಳಿಂದ ಪೊಲೀಸರನ್ನು ಕರೆಸಿಕೊಂಡಿತು. ವಿಶಾಖ-ಗೋದಾವರಿ ಜಿಲ್ಲೆಗಳ ಸಾಧಾರಣ ಪೊಲೀಸರೊಂದಿಗೆ ಬಳ್ಳಾರಿ ಸ್ಪೆಷಲ್ ಪೊಲೀಸ್, ಕೊರಾಪುಟ್ ರಿಸರ್ವ್ ಪೊಲೀಸ್, ಈಸ್ಟ್‌ಕೋಸ್ಟ್ ಮತ್ತು ಮಲಬಾರ್ ಸ್ಪೆಷಲ್ ಪೊಲೀಸ್ ಸಜ್ಜಾದರು. ಗುಡ್ಡಗಾಡಿನಲ್ಲಿ ಯುದ್ಧಮಾಡಿ ಅಭ್ಯಾಸವಿದ್ದ ಅಸ್ಸಾಮ್ ರೈಫಲ್ಸ್ ಪಡೆ ಸಹ ಬಂದಿತು. ಗುಪ್ತಚರರ ಸಂಖ್ಯೆಯನ್ನು ಸಹ ಹೆಚ್ಚಿಸಲಾಯಿತು. ಅಷ್ಟೇ ಅಲ್ಲದೆ, ಫಿರಂಗಿಗಳನ್ನು ಬಂದೂಕು ಗಳನ್ನು, ಗ್ರಾನೈಡ್‌ಗಳನ್ನು, ವೈರ್‌ಲೆಸ್ ಸೆಟ್‌ಗಳನ್ನು, ಹೀಲಿಯೋ ಲ್ಯಾಂಪ್‌ಗಳನ್ನು, ಇನ್ನಿತರ ಆಧುನಿಕ ಯುದ್ಧ ಸಾಮಗ್ರಿಗಳನ್ನು ತರಿಸಲಾಯಿತು. ಆಹಾರ ಸಾಮಗ್ರಿಗಳನ್ನು ಗುಡಾರ ಗಳಿಗೆ ತಲುಪಿಸಲು ವ್ಯಾನ್, ಲಾರಿ, ಆನೆ, ಒಂಟೆ, ಹೇಸರಗತ್ತೆಗಳನ್ನು ತರಿಸಲಾಯಿತು. ಲಕ್ಷಾಂತರ ರೂಪಾಯಿಗಳ ಜನತೆಯ ಹಣವನ್ನು ಸರ್ಕಾರ ಜನತೆಯ ಹೋರಾಟವನ್ನು ಅಡಗಿಸಲು ನೀರಿನಂತೆ ಖರ್ಚು ಮಾಡಿತು. ಇವೆಲ್ಲಾ ಪ್ರಯತ್ನಗಳೂ ಸಹ ವ್ಯರ್ಥವಾದವು. ಬ್ರಿಟಿಷರು ಅಪಜಯಗಳನ್ನೇ ಕಂಡರೆ, ನಮ್ಮ ಸೈನ್ಯ ವಿಜಯಲಕ್ಷ್ಮಿಯನ್ನೇ ತನ್ನದಾಗಿಸಿಕೊಂಡಿತು.

ಅಂದಿನ ಮದ್ರಾಸ್ ಪ್ರಭುತ್ವ ಪ್ರಧಾನ ಕಾರ್ಯದರ್ಶಿಗಳಿಗೆ ಕಳಿಸಿದ ನಿವೇದನೆ ಅಲ್ಲೂರಿಯವರ ಹೋರಾಟದಿಂದ ಬ್ರಿಟಿಷರು ಎಷ್ಟು ಭಯಭೀತರಾಗಿದ್ದರೆಂಬುದನ್ನು ತೋರಿಸಿತು. ನೇರವಾಗಿ ಅಲ್ಲೂರಿಯವರನ್ನು ಎದುರಿಸಲಾಗದು ಎಂಬುದನ್ನು ಅರಿತ ಬ್ರಿಟಿಷ್ ಸರ್ಕಾರ ಸಂಚಿನ ಮಾರ್ಗವನ್ನು ಆರಿಸಿಕೊಂಡಿತು. ಬ್ರಿಟಿಷರಿಗೆ ಇದು ಹೊಸದೇನೂ ಆಗಿರಲಿಲ್ಲ.

ಮೊದಲಿಗೆ, ಪೊಲೀಸ್ ಠಾಣೆಗಳಲ್ಲಿದ್ದ ಶಸ್ತ್ರಾಸ್ತ್ರಗಳನ್ನು ನಗರಗಳಿಗೆ ವರ್ಗಾಯಿಸ ಲಾಯಿತು. ಎಲ್ಲಾ ಜನತೆ ತಮ್ಮಲ್ಲಿದ್ದ ಶಸ್ತ್ರಾಸ್ತ್ರಗಳನ್ನು ಪೊಲೀಸರಿಗೆ ಒಪ್ಪಿಸಬೇಕೆಂಬ ಆಜ್ಞೆಯನ್ನು ಜಾರಿ ಮಾಡಿತು. ಒಪ್ಪಿಸದಿದ್ದವರನ್ನು ಸರ್ಕಾರದ ವಿರೋಧಿಗಳೆಂದು ಬಗೆದು ಕೊಲ್ಲುವ ಅಧಿಕಾರವಿದೆ ಎಂದು ಘೋಷಿಸಿತು. ಪೊಲೀಸರ ಖರ್ಚನ್ನು ಜನರೇ ವಹಿಸಿಕೊಳ್ಳಬೇಕೆಂದು 'ಶಿಕ್ಷಾ ತೆರಿಗೆ' ವಿಧಿಸಿತು. ಅಲ್ಲೂರಿಯವರು ಯಾವ ಊರಿಗೆ ಬಂದರೂ ವಿಷಯ ತಿಳಿಸಬೇಕೆಂದು, ಇಲ್ಲದಿದ್ದರೆ ಜುಲ್ಮಾನೆಯನ್ನು ಹಾಕುವುದಾಗಿ ಹೇಳಿತು. ಪೊಲೀಸರೊಂದಿಗೆ ಜನತೆ ಸಹಕರಿಸುತ್ತಿಲ್ಲವೆಂಬ ಕಾರಣದಿಂದ ಬಹಳಷ್ಟು ಜನರನ್ನು ಬಂಧಿಸಿತು. ಕೆಲವರನ್ನು ಸರ್ಕಾರ ವಿರೋಧಿಗಳೆಂದು ನಿರ್ಧರಿಸಿ ಆ ಪ್ರಾಂತ್ಯಗಳಿಂದ ಬಹಿಷ್ಕರಿಸಿತು. ಆದರೆ ಎಲ್ಲ ಕ್ರಮಗಳು ಬ್ರಿಟಿಷರ ವಿರುದ್ಧ ಜನರಲ್ಲಿ ಇನ್ನಷ್ಟು ರೋಷವನ್ನು ಹಾಗೂ ಅಲ್ಲೂರಿಯವರ ಬಗ್ಗೆ ಮತ್ತಷ್ಟು ಅಭಿಮಾನವನ್ನು ಬೆಳೆಸಲು ಸಹಾಯಕವಾದವು.

**ಜನತೆಯ ಅಸೀಮ ಪ್ರೀತಿ ಪಡೆದ ಅಲ್ಲೂರಿ**

ಇಷ್ಟೆಲ್ಲಾ ಅನುಭವಿಸಿದ್ದರೂ ಆ ಜನರಾದರೂ ಎಂತಹವರು? ಬ್ರಿಟಿಷರಿಗೆ ಅಲ್ಲೂರಿಯ ಸುಳಿವನ್ನು ನೀಡಲಿಲ್ಲ. ತಮ್ಮ ಜೀವನದಲ್ಲಿ ಸರ್ವಸ್ವವನ್ನೂ ಕಳೆದುಕೊಂಡರು. ಆದರೂ ಅಲ್ಲೂರಿಯವರ ಬಗ್ಗೆ ಒಂದೇ ಒಂದು ಅಂಶವನ್ನು ಪೊಲೀಸರಿಗೆ ತಿಳಿಸಲಿಲ್ಲ. ಅಲ್ಲೂರಿಯವರ ಬಗ್ಗೆ ಆ ಜನರಿಗಿದ್ದ ಅಸೀಮ ಪ್ರೀತಿಯೇ ಆ ಕಷ್ಟ-ನಷ್ಟಗಳನ್ನೆಲ್ಲ ಭರಿಸುವ ಶಕ್ತಿಯನ್ನು ಅವರಿಗೆ ನೀಡಿತೇನೋ? ಜನರು ಅಲ್ಲೂರಿಯವರನ್ನು ಎಷ್ಟು ಪ್ರೀತಿಸುತ್ತಿದ್ದರೋ ಅಲ್ಲೂರಿಯವರೂ ಸಹ ಜನರನ್ನು ಅಷ್ಟೇ ಪ್ರೀತಿಸುತ್ತಿದ್ದರು. ಯಾವ ಜನತೆಯ ಕಣ್ಣೀರನ್ನು ಒರೆಸಲು, ಯಾವ ಜನತೆಯ ಸಂಕಟವನ್ನು ತೊಡೆಯಲು ಈ ಹೋರಾಟಕ್ಕೆ ಧುಮುಕಿದರೋ ಅದೇ ಜನತೆಯ ಮೇಲಿನ ಬ್ರಿಟಿಷರ ಹತ್ಯಾಕಾಂಡವನ್ನು ಅವರು ಸಹಿಸದಾದರು. ತನ್ನೊಬ್ಬನಿಂದ ಪ್ರಜೆಗಳು ಸಂಕಟ ಅನುಭವಿಸುವುದಕ್ಕೆ ಅವರ ಮನಸ್ಸು ಒಪ್ಪಲಿಲ್ಲ. ಆದ್ದರಿಂದ ತಾವೇ ಬ್ರಿಟಿಷರ ಬಂಧನಕ್ಕೆ ಒಳಗಾಗುವುದು ಒಳ್ಳೆಯದು ಎಂದು ನಿರ್ಧರಿಸಿದರು.

೧೯೨೪ರ ಮೇ ೭ರಂದು ಈಸ್ಟ್‌ಕೋಸ್ಟ್ ವಿಶೇಷ ಪಡೆಯ ಮೇಜರ್ ಗುಡಾಲ್ ಎದುರಿಗೆ ಬಂದು ನಿಂತರು. ನಿರಾಯುಧರಾಗಿ ಬಂದ ಅಲ್ಲೂರಿಯವರನ್ನು ಕಂಡು ದಿಗ್ಭ್ರಾಂತಗೊಂಡ ಮೇಜರ್ ಮೊದಮೊದಲು ಅವರನ್ನು ಮುಟ್ಟಲೂ ಸಹ ಹಿಂಜರಿದ. ಸೈನಿಕರು, ಅಲ್ಲೂರಿಯವರು ಅಚಲವಾಗಿ ನಿಂತಿದ್ದನ್ನು ಕಂಡು ಧೈರ್ಯ ಪಡೆದು ಬಂಧಿಸಿದರು. ಗುಡಾಲ್ ಆಜ್ಞೆಯ ಮೇರೆಗೆ ಅವರನ್ನೊಂದು ಮಂಚಕ್ಕೆ ಕಟ್ಟಿಹಾಕ ಲಾಯಿತು. ಗುಡಾಲ್ ಆರಂಭದಲ್ಲಿ ಅಲ್ಲೂರಿಯವರೊಂದಿಗೆ ಒಳ್ಳೆಯ ಮಾತುಗಳನ್ನೇ ಆಡಲಾರಂಭಿಸಿದ. ''ನೀನು ಇಷ್ಟಪಟ್ಟರೆ ಬ್ರಿಟಿಷ್ ಸೈನ್ಯದಲ್ಲಿ ಕರ್ನಲ್ ಆಗಬಹುದು'' ಎಂದ ಗುಡಾಲ್. ಇದನ್ನು ಕೇಳಿದ ಅಲ್ಲೂರಿಯವರ ರೋಷ ಮೇರೆ ಮೀರಿತು. ಬ್ರಿಟಿಷರ ಹೇಡಿತನವನ್ನು ಕುತಂತ್ರ ಬುದ್ಧಿಯನ್ನು ಹಾಗೂ ಅವರ ಶೋಷಣೆ ದಬ್ಬಾಳಿಕೆಯನ್ನು ಉಗ್ರವಾಗಿ ಖಂಡಿಸಲಾರಂಭಿಸಿದರು. ಅಲ್ಲೂರಿಯವರ ನೈಜ ವಿಪ್ಲವ ಸ್ವರೂಪ ಕಂಡ ಗುಡಾಲ್ ಅವರನ್ನು ಮರಕ್ಕೆ ಕಟ್ಟಿಹಾಕುವಂತೆ ಸೈನಿಕರಿಗೆ ಆಜ್ಞಾಪಿಸಿದ. ''ಕೋರ್ಟಿನ ಸಮಕ್ಷಮದಲ್ಲಿ ವಿಚಾರಣೆಯಾಗಲಿ, ತೀರ್ಪನ್ನು ಕೊಡಲು ಮತ್ತು ಶಿಕ್ಷೆಯನ್ನು ನೀಡಲು ನಿನಗೆ ಯಾವ ಅಧಿಕಾರವೂ ಇಲ್ಲ'' ಎಂಬ ಅಲ್ಲೂರಿಯವರ ಮಾತನ್ನು ಧಿಕ್ಕರಿಸಿ 'ವಿಶ್ವದ ಅಗ್ರಮಾನ್ಯ ನಾಗರಿಕ'ರೆಂದು ಜಂಭಕೊಚ್ಚಿಕೊಳ್ಳುತ್ತಿದ್ದ ಬ್ರಿಟಿಷ್ ಸರ್ಕಾರದ ಪ್ರತಿನಿಧಿ ಯಾದ ಗುಡಾಲ್ ಅಲ್ಲೂರಿಯವರ ದೇಹದ ಒಂದೊಂದು ಅಂಗುಲವನ್ನೂ ಬಿಡದಂತೆ ಗುಂಡು ಹಾರಿಸಲಾರಂಭಿಸಿದ. ಆ ಸಿಂಹ ಅದಕ್ಕೆ ಅಂಜೀತೇ? ತಲೆಯೆತ್ತಿ ನಿಶ್ಚಲಚಿತ್ತರಾಗಿ ಗುಡಾಲ್‌ನನ್ನೇ ತೀಕ್ಷ್ಣವಾಗಿ ನೋಡಲಾರಂಭಿಸಿದರು ಅಲ್ಲೂರಿ. ಅಷ್ಟೆಲ್ಲಾ ಗುಂಡುಗಳನ್ನು ಹಾರಿಸಿದರೂ, ದೇಹದಲ್ಲೆಲ್ಲಾ ರಂಧ್ರಗಳಾಗುತ್ತಿದ್ದರೂ ಮಂದಸ್ಮಿತನಾಗಿದ್ದ ಯೋಧನನ್ನು ಕಂಡು ವ್ಯಗ್ರನಾದ ಗುಡಾಲ್.

''ಸಾಯಿಸಬೇಕಾದರೆ ಇಲ್ಲಿಗೆ ಹೊಡಿ'' ಎಂದು ತಮ್ಮ ಎದೆಯನ್ನು ತೋರಿಸಿದರು ಅಲ್ಲೂರಿ. ಸಾವಿನ ಬಾಯಿಯಲ್ಲಿದ್ದಾಗಲೂ ಸರಸವೇ! ಗುಡಾಲ್ ಎದೆಗೆ ಗುರಿಯಿಟ್ಟ. ಮರುಕ್ಷಣವೇ ೨೭ರ ಹರೆಯದ ಆ ವಿಪ್ಲವ ಜ್ಯೋತಿ ನಂದಿಹೋಯಿತು. ಆಂಧ್ರ ಅಷ್ಟೇ ಅಲ್ಲದೆ ದೇಶದೆಲ್ಲೆಡೆ ಸಹಸ್ರಾರು ಯುವಕ-ಯುವತಿಯರು ಸ್ವಾತಂತ್ರ್ಯ ಸಮರಕ್ಕೆ ಧುಮುಕಲು ಅಲ್ಲೂರಿ ಸ್ಫೂರ್ತಿಯಾದರು. ಇಂದಿನ ಯುವ ಜನತೆಗೆ ದೇಶದ ಬಗ್ಗೆ ಅಭಿಮಾನ ಕಡಿಮೆಯಾಗುತ್ತಿದ್ದು, ಹೊಟ್ಟೆಪಾಡಿನ ಚಿಂತೆಯೇ ಅಗಾಧವಾಗಿಹೋಗಿ ನಿಸ್ವಾರ್ಥ ಜೀವನವನ್ನು ನಡೆಸಿ ಹೋರಾಡಿದ ತ್ಯಾಗ ಪುರುಷರ ಜೀವನದ ಆದರ್ಶ ಗಳನ್ನು ಇಂದು ಜನರು ಮರೆಯುತ್ತಿರುವುದು ವಿಷಾದಕರ. ೨೭ರ ಹರೆಯದ ಅಲ್ಲೂರಿ ಸೀತಾರಾಮರಾಜು ಅವರ ಕೆಚ್ಚು, ಧೈರ್ಯ, ದೇಶಭಕ್ತಿ, ಅರ್ಪಣಾ ಮನೋಭಾವ ಮರೆಯಾಗಿವೆ. ಈಗ ಕನಿಷ್ಠ ಅವರ ತ್ಯಾಗ ಬಲಿದಾನಗಳನ್ನು ನೆನಪಿಸಿಕೊಳ್ಳುವ ಮೂಲಕ ಅವರ ವ್ಯಕ್ತಿತ್ವಕ್ಕೆ ಗೌರವ ನೀಡುವ ಕೆಲಸವನ್ನಾದರೂ ಮಾಡಬಹುದಲ್ಲವೆ?

ವೀರೇಶ್ ಬಳ್ಳಾರಿ
ನಂ. ೮೫/೬, ೨ನೇ ಹಂತ, ೫ನೇ ಮುಖ್ಯರಸ್ತೆ, ಬಿನ್ನಿ ಬಡಾವಣೆ, ಚಂದ್ರಾ ಲೇಔಟ್, ಬೆಂಗಳೂರು - ೪೦

# ಬೀದಿಗೆ ಬಂದ ಜಾತಿವಾದ–ಕೋಮುವಾದ

ಪ್ರೊ|| ಬರಗೂರು ರಾಮಚಂದ್ರಪ್ಪ

ಕರ್ನಾಟಕದಲ್ಲಿ ಈಗ ಎರಡು ಕೃತಿಗಳ ಸುತ್ತ ವಿವಾದದ ಉರಿ ಎದ್ದಿದೆ. ಡಾ|| ಬಂಜಗೆರೆ ಜಯಪ್ರಕಾಶ್ ಅವರ 'ಆನು ದೇವಾ ಹೊರಗಣವನು...' ಮತ್ತು ಡಾ|| ಎಸ್. ಎಲ್. ಭೈರಪ್ಪ ಅವರ 'ಆವರಣ' ಕೃತಿಗಳು ಈ ವಿವಾದಕ್ಕೆ ಕಾರಣವಾಗಿವೆ. 'ಆನು ದೇವಾ...' ವಿಶ್ಲೇಷಣಾತ್ಮಕ ಕೃತಿಯಾದರೆ, 'ಆವರಣ' ಕಾದಂಬರಿ. 'ಆನು ದೇವಾ' ಕೃತಿಗೆ ವಿರುದ್ಧ ವಾದವರು ಮತ್ತು 'ಆವರಣ' ಕೃತಿಗೆ ಪರವಾದವರು, ವಿವಾದವನ್ನು ವೈಚಾರಿಕ ವಾಗ್ವಾದಕ್ಕೆ ಬಿಟ್ಟುಕೊಡದೆ ಅದರಾಚೆಗಿನ ಸಂಗತಿಗಳನ್ನು ಕೈಗೆತ್ತಿಕೊಂಡು ಭಿನ್ನಾಭಿಪ್ರಾಯಕ್ಕೆ ತಡೆಯೊಡ್ಡುವ ವಿಷಮ ವಾತಾವರಣವನ್ನು ನಿರ್ಮಾಣ ಮಾಡುತ್ತಿದ್ದಾರೆ. ಯಾವುದಾದರೂ ಸಭೆಯಲ್ಲಿ 'ಆನು ದೇವಾ' ಪುಸ್ತಕದ ಪರವಾಗಿ ಎರಡು ಸಾಲು ಬಂದರೂ ಸಹಿಸದೆ ಲೇಖಕರನ್ನು ಮತ್ತು ಪುಸ್ತಕವನ್ನು ಸುಡಬೇಕು ಎನ್ನುವಷ್ಟರಮಟ್ಟಿಗೆ ಗಲಾಟೆ ಎಬ್ಬಿಸುವುದಲ್ಲದೆ ಈ ಪುಸ್ತಕವನ್ನು ಮುಟ್ಟುಗೋಲು ಹಾಕಬೇಕೆಂದು ಕೂಗಾಡುತ್ತಾರೆ. ಮಾತೆ ಮಹಾದೇವಿ, ವಿಶ್ವ ಬಸವ ಧರ್ಮಪೀಠದ ಸ್ವಾಮಿ, ಭೀಮಣ್ಣ ಖಂಡ್ರೆ – ಇಂಥವರ ಜೊತೆಗೆ ಪಾಟೀಲ ಪುಟ್ಟಪ್ಪನವರೂ ಸೇರಿಕೊಂಡು ಮುಟ್ಟುಗೋಲು ಹಾಕಲೇಬೇಕೆಂದು ಧಮಕಿ ಹಾಕುತ್ತಾರೆ. ಮುಟ್ಟುಗೋಲು ಹಾಕದಿದ್ದರೆ ಕರ್ನಾಟಕದಲ್ಲಿ ರಕ್ತದ ಕೋಡಿ ಹರಿದೀತೆಂದು ಭೀಮಣ್ಣ ಖಂಡ್ರೆಯವರೂ ಕಿಚ್ಚುಹತ್ತೀತೆಂದು ಪಾಟೀಲ ಪುಟ್ಟಪ್ಪನವರೂ ಬೆದರಿಕೆ ಹಾಕುತ್ತಿದ್ದಾರೆ. ವಿಶ್ವ ಬಸವ ಧರ್ಮಪೀಠದ ದಯಾನಂದ ಸ್ವಾಮಿ ತಮ್ಮ ಅಭಿಪ್ರಾಯಕ್ಕೆ ವಿರುದ್ಧವಾದವರ ಮೇಲೆ ಕೈಮಾಡುವಷ್ಟು ದಯಾನಿಧಿಗಳೂ ಆನಂದ ಪರವಶರೂ ಆಗಿದ್ದಾರೆ. (ಕನ್ನಡ ಸಾಹಿತ್ಯ ಪರಿಷತ್ತು ಆಯೋಜಿಸಿದ ಸಭೆಯೊಂದರಲ್ಲಿ ಈ ಸ್ವಾಮಿ ಕೈ ಎತ್ತಿದ್ದನ್ನು ನೆನೆಯಬಹುದು.) ಮಾತೆ ಮಹಾದೇವಿಯವರು ಮುಟ್ಟುಗೋಲಿನ ಕ್ರಮವನ್ನು ತಾತ್ವಿಕವಾಗಿ ವಿರೋಧಿಸಿದ ಬಂಡಾಯ ಸಾಹಿತ್ಯ ಸಂಘಟನೆಯವರನ್ನು ಕೆಟ್ಟದಾಗಿ ಜರೆಯುತ್ತ ತಮ್ಮ ಅಭಿರುಚಿಯನ್ನು ತಾವೇ ಬಯಲುಮಾಡಿಕೊಳ್ಳುತ್ತ ಮುಟ್ಟುಗೋಲು ಆಗಲೇಬೇಕೆಂಬ ಹಟಯೋಗ ತೊಟ್ಟಿದ್ದಾರೆ. ಇಂತಹ ಕೆಲ ಧುರೀಣರು ಸಾಮಾನ್ಯ ಜನರನ್ನು ಬೀದಿಗೆ ಎಳೆತಂದಿದ್ದಾರೆ.

'ಆವರಣ'ದ ವಿಷಯ ಸ್ವಲ್ಪ ಬೇರೆ ರೀತಿಯದು. ತಮ್ಮ ಮೊದಲನೇ ಕಾದಂಬರಿಯಿಂದಲೂ ('ಧರ್ಮಶ್ರೀ') ಹಿಂದೂ ಮೂಲಭೂತವಾದಕ್ಕೆ, ಜಡ ಸಂಪ್ರದಾಯದ ಮೌಲ್ಯಗಳಿಗೆ, ಬದ್ಧವಾಗಿ ಬರೆಯುತ್ತ ಬಂದ ಡಾ|| ಎಸ್. ಎಲ್. ಭೈರಪ್ಪನವರು ಈ ಮಧ್ಯೆ ಗೃಹಭಂಗ, ಪರ್ವ – ಇಂತಹ ವಿಶಿಷ್ಟ ಗುಣಾತ್ಮಕ ಕಾದಂಬರಿಗಳನ್ನು ಕೊಟ್ಟಿದ್ದಲ್ಲದೆ, 'ದಾಟು'ವಿನಂತಹ ಗಂಭೀರ ವಾಗ್ವಾದದ ಕಾದಂಬರಿಯನ್ನೂ ಬರೆದರು. ಇಂತಹ ಬೆರಳೆಣಿಕೆಯ 'ಅಪವಾದ'ಗಳನ್ನು ಬಿಟ್ಟರೆ ಅವರ ಧಾರ್ಮಿಕ ಮೂಲಭೂತವಾದ ಸದಾ ಕೆಲಸಮಾಡುತ್ತಿತ್ತು. ಆದರೆ ಅಪಾರ ಓದುಗರನ್ನು ಸಂಪಾದಿಸಿದ ಸರಳ, ಸುಭಗ ನಿರೂಪಣೆಯ ಕಾದಂಬರಿಕಾರರಾಗಿ ಭೈರಪ್ಪನವರು ಜನಪ್ರಿಯರು. ಈ ಜನಪ್ರಿಯತೆಗೆ ಧಾರ್ಮಿಕ ಮೂಲಭೂತವಾದದ ಆಯಾಮವೂ ಸೇರಿದರೆ ಆಗುವ ದುಷ್ಪರಿಣಾಮವನ್ನು 'ಆವರಣ' ಕಾದಂಬರಿಯ ಸಂದರ್ಭದಲ್ಲಿ ನಾವು ಚರ್ಚಿಸಬೇಕಾಗುತ್ತದೆ. ಆದರೆ ಇಂತಹ ಚರ್ಚೆಯನ್ನು ಮಾಡಹೊರಟ ಕೂಡಲೇ ಎದ್ದು ಕೂಗುವ, ಅಡ್ಡಿಪಡಿಸುವ ತಂಡಗಳು ಕಾಣಿಸುತ್ತವೆ. 'ನೀವು ಹಿಂದೂ ಧರ್ಮದ ವಿರೋಧಿಗಳು, ಮುಸ್ಲಿಮರ ಸಮರ್ಥಕರು, ಮುಸ್ಲಿಂ ಮೂಲಭೂತವಾದವನ್ನು ನೀವು ಏಕೆ ವಿರೋಧಿಸುವುದಿಲ್ಲ, ನಿಮ್ಮ ಪ್ರಗತಿಪರತೆಗೆ ಧಿಕ್ಕಾರ' – ಇಂತಹ ಹತ್ತಾರು ವಾಗ್‌ತ್ರಿಶೂಲಗಳನ್ನು ಎಸೆಯುತ್ತಾರೆ. ಹಿಂದೂ ಮೂಲಭೂತ ವಾದವನ್ನು ವಿರೋಧಿಸುವವರು ಮುಸ್ಲಿಂ ಮೂಲಭೂತವಾದವನ್ನೂ ವಿರೋಧಿಸಬೇಕಾಗುತ್ತದೆಯೆಂಬುದನ್ನು ನಾನು ಒಪ್ಪುತ್ತೇನೆ. ನಾನು ಎಲ್ಲ ರೀತಿಯ ಧಾರ್ಮಿಕ ಮೂಲಭೂತವಾದಗಳ ವಿರೋಧಿ. ನನ್ನಂತೆಯೇ ಅನೇಕರು ಈ ನಿಲುವು ತಾಳಿದ್ದಾರೆ. ಸಂದರ್ಭ ಬಂದಾಗ ತಮ್ಮ ನಿಲುವನ್ನು ಪ್ರಕಟಿಸಿದ್ದಾರೆ. ಆದರೆ ಅದನ್ನು ಪರಿಗಣಿಸದೆ ಹಿಂದೂ ಮೂಲಭೂತವಾದದ ಸಮರ್ಥನೆಗಾಗಿ ಮಿಥ್ಯಾರೋಪ ಮಾಡುವುದು, ಎಲ್ಲರನ್ನೂ ಒಂದೇ ತಕ್ಕಡಿಯಲ್ಲಿ ತೂಗುವುದು ಸರಿಯಲ್ಲ. ತಮ್ಮ ಧರ್ಮದ ಜಡಮೌಲ್ಯಗಳನ್ನು ವಿಮರ್ಶೆಗೊಡ್ಡಿದ ಮುಸ್ಲಿಂ ಮೂಲದ ಸಾಹಿತಿಗಳು ನಮ್ಮಲ್ಲಿದ್ದಾರೆ ಎಂಬುದನ್ನು ಮರೆಯಬಾರದು. ಸಾಮಾನ್ಯ ಮುಗ್ಧ ಹಿಂದೂ ಮನಸ್ಸುಗಳನ್ನು ಮಲಿನಗೊಳಿಸಲು ಅನ್ಯಧರ್ಮ ದ್ವೇಷವನ್ನು ಆಯುಧವಾಗಿ ಬಳಸುವವರು ಧಾರ್ಮಿಕರಾಗಲು ಹೇಗೆ ಸಾಧ್ಯ ? ಇನ್ನೊಂದು ಧರ್ಮವನ್ನು ದ್ವೇಷಿಸುವುದೇ ಸ್ವಧರ್ಮ ಪ್ರೀತಿ, ದೇಶಭಕ್ತಿ ಎಂದಾದರೆ ಅಂತಹ ಪ್ರೀತಿ, ಭಕ್ತಿಗಳು ಯಾರಿಗೆ ಬೇಕು ? ಇಂತಹ ಪ್ರಶ್ನೆಗಳನ್ನು ಕೇಳಿಕೊಳ್ಳಲು ಅಥವಾ ಕೇಳಿಸಿಕೊಳ್ಳಲು ಸಿದ್ಧವಿಲ್ಲದ ಯುದ್ಧಸನ್ನದ್ಧರು 'ಆವರಣ' ಕೃತಿಯ ಪರವಾಗಿ ಗದ್ದಲ ಎಬ್ಬಿಸುತ್ತಿದ್ದಾರೆ. ಈ ಕೃತಿಯಲ್ಲಿರುವ ಮುಸ್ಲಿಂ ವಿರೋಧಿ ಆಶಯವೇ ಇಂಥವರಿಗೆ ಆದರ್ಶವಾಗಿದೆ. ಸಾಹಿತ್ಯಕೃತಿಯೊಂದರ ಚರ್ಚೆ ಬೇಡವಾಗಿದೆ.

ನಮ್ಮ ಈ ಸನ್ನಿವೇಶದ ಒಂದು ವಿಶೇಷವೆಂದರೆ, – 'ಆನು ದೇವಾ' ವಿರೋಧಿಗಳು ಮುಟ್ಟುಗೋಲಿಗೆ ಒತ್ತಾಯಿಸುತ್ತಿದ್ದರೆ, 'ಆವರಣ' ವಿರೋಧಿಗಳು ಮುಟ್ಟುಗೋಲಿಗೆ ಒತ್ತಾಯಿಸುತ್ತಿಲ್ಲ. ಬದಲಾಗಿ ಯಾವ ಕೃತಿಯನ್ನೂ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬ ತಾತ್ವಿಕ ನಿಲುವಿಗೆ ಬದ್ಧರಾಗಿದ್ದಾರೆ. ಸಂವಿಧಾನದತ್ತ ಅಭಿವ್ಯಕ್ತಿ ಸ್ವಾತಂತ್ರ್ಯಕನುಗುಣವಾಗಿ ನಾವು ಪ್ರಜಾಸತ್ತಾತ್ಮಕ ನಿಲುವು ತಳೆಯಬೇಕೆಂಬುದು ಮತ್ತು ಸಂವಿಧಾನ, ನ್ಯಾಯಾಂಗಗಳ ತಾಂತ್ರಿಕ ಒತ್ತಾಸೆಯಾಚೆಗೂ ಅಭಿವ್ಯಕ್ತಿ ಸ್ವಾತಂತ್ರ್ಯದ ಪರಿಕಲ್ಪನೆಯು ವಿಸ್ತಾರ ಉಳ್ಳದ್ದಾಗಿದೆಯೆಂಬುದು, ಮುಟ್ಟುಗೋಲು ವಿರೋಧಿಗಳ ನಿಲುವಾಗಿದೆ. ಮುಟ್ಟುಗೋಲು ಪರವಾಗಿರುವವರು ಅಭಿವ್ಯಕ್ತಿ ಸ್ವಾತಂತ್ರ್ಯದ ದುರುಪಯೋಗವಾಗಿದೆಯೆಂದೂ ಅಭಿವ್ಯಕ್ತಿ ಸ್ವಾತಂತ್ರ್ಯದ ಹೆಸರಿನಲ್ಲಿ ಸ್ವೇಚ್ಛಾಚಾರ ಸಲ್ಲದೆಂದೂ ವಾದಿಸುತ್ತಾರೆ; ಕೆಲವರು ಬರೀ ವಾದಿಸುವುದಿಲ್ಲ, ಔಚಿತ್ಯ ಮೀರಿ ವರ್ತಿಸುತ್ತಾರೆ. ಡಾ|| ಪಿ. ವಿ. ನಾರಾಯಣರ 'ಧರ್ಮಕಾರಣ' ಕಾದಂಬರಿಯನ್ನು ಅಂದಿನ ಕರ್ನಾಟಕ ಸರ್ಕಾರವು ಮುಟ್ಟುಗೋಲು ಹಾಕಿಕೊಂಡದ್ದು ಸರಿಯೆಂದು ಸುಪ್ರೀಂ ಕೋರ್ಟು ತಾಂತ್ರಿಕ ತೀರ್ಪು ನೀಡಿದ ಮೇಲೆ ಇಂಥವರ 'ನೈತಿಕ' ಬಲ ಹೆಚ್ಚಾದಂತೆ ಕಾಣುತ್ತದೆ. ಎಲ್ಲ ಸಂದರ್ಭಗಳಲ್ಲೂ ಇಂಥದೇ ತೀರ್ಪು ಬರುತ್ತದೆಯೆಂದು ಇವರು ನಂಬಿದಂತಿದೆ.

ಹಾಗಾದರೆ, ಸಂವಿಧಾನವು ಅಭಿವ್ಯಕ್ತಿ ಸ್ವಾತಂತ್ರ್ಯದ ಬಗ್ಗೆ ಏನು ಹೇಳುತ್ತದೆಯೆಂದು ತಿಳಿಯೋಣ. ಸಂವಿಧಾನದ ೧೯(೧)ನೇ ಪರಿಚ್ಛೇದವು ವಾಕ್ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ನೀಡಿದೆ. 'ಒಬ್ಬ ವ್ಯಕ್ತಿಯು ತನ್ನ ಅಭಿಪ್ರಾಯ ಮತ್ತು ಭಾವನೆಗಳನ್ನು ಮುಕ್ತವಾಗಿ ಮಾತು, ಬರಹ, ಮುದ್ರಣ, ಚಿತ್ರ ಅಥವಾ ಇನ್ನಿತರ ವಿಧಾನಗಳ ಮೂಲಕ ಪ್ರಕಟಿಸುವುದೇ ವಾಕ್ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯ'ವೆಂದು ಸಂವಿಧಾನವು ಹೇಳುತ್ತದೆ. ಸಂವಿಧಾನದ ೧೯ (೨)ನೇ ಪರಿಚ್ಛೇದವು ವಾಕ್ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಕೆಲವು ನಿರ್ಬಂಧಗಳನ್ನು ವಿಧಿಸಿದೆ. (೧) ರಾಷ್ಟ್ರದ ಭದ್ರತೆಗೆ ಧಕ್ಕೆ ತರಬಾರದು (೨) ವಿದೇಶಗಳ ಜೊತೆಗಿನ ಸಂಬಂಧಕ್ಕೆ ಧಕ್ಕೆಯಾಗಬಾರದು (೩) ಸಾರ್ವಜನಿಕ ಶಾಂತಿ ಮತ್ತು ಸುವ್ಯವಸ್ಥೆಯನ್ನು ಕದಡಬಾರದು (೪) ಸಭ್ಯತೆ ಮತ್ತು ನೈತಿಕತೆಯ ಎಲ್ಲೆ ಮೀರಬಾರದು

'ಆನು ದೇವಾ' ವಿರೋಧಿಗಳು ಮುಟ್ಟುಗೋಲಿಗೆ ಒತ್ತಾಯಿಸುತ್ತಿದ್ದರೆ, 'ಆವರಣ' ವಿರೋಧಿಗಳು ಮುಟ್ಟುಗೋಲಿಗೆ ಒತ್ತಾಯಿಸುತ್ತಿಲ್ಲ. ಬದಲಾಗಿ ಯಾವ ಕೃತಿಯನ್ನೂ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬ ತಾತ್ವಿಕ ನಿಲುವಿಗೆ ಬದ್ಧರಾಗಿದ್ದಾರೆ. ಸಂವಿಧಾನದತ್ತ ಅಭಿವ್ಯಕ್ತಿ ಸ್ವಾತಂತ್ರ್ಯಕನುಗುಣವಾಗಿ ನಾವು ಪ್ರಜಾಸತ್ತಾತ್ಮಕ ನಿಲುವು ತಳೆಯಬೇಕೆಂಬುದು ಮತ್ತು ಸಂವಿಧಾನ, ನ್ಯಾಯಾಂಗಗಳ ತಾಂತ್ರಿಕ ಒತ್ತಾಸೆಯಾಚೆಗೂ ಅಭಿವ್ಯಕ್ತಿ ಸ್ವಾತಂತ್ರ್ಯದ ಪರಿಕಲ್ಪನೆಯು ವಿಸ್ತಾರ ಉಳ್ಳದ್ದಾಗಿದೆಯೆಂಬುದು, ಮುಟ್ಟುಗೋಲು ವಿರೋಧಿಗಳ ನಿಲುವಾಗಿದೆ.

(೫) ನ್ಯಾಯಾಲಯನಿಂದನೆಯಾಗಬಾರದು (೬) ಅಪರಾಧ ಎಸಗಲು ಪ್ರೇರಣೆ ನೀಡಬಾರದು (೭) ದೇಶದ ಸಮಗ್ರತೆಗೆ ಧಕ್ಕೆ ತರಬಾರದು/ದೇಶದ್ರೋಹ ಎಸಗಬಾರದು (೮) ಮಾನಹಾನಿ ಮಾಡಬಾರದು – ಹೀಗೆ, ಒಟ್ಟು ಎಂಟು ನಿರ್ಬಂಧಗಳನ್ನು ಸಂವಿಧಾನವು ಸ್ಪಷ್ಟವಾಗಿ ನಿರೂಪಿಸಿದೆ.

ಈಗ, 'ಅನು ದೇವಾ...' ಕೃತಿಯು ಈ ನಿರ್ಬಂಧಗಳ ಚೌಕಟ್ಟಿಗೆ ಬರುತ್ತದೆಯೇ ಎಂಬ ಪ್ರಶ್ನೆ ಬರುತ್ತದೆ ಎನ್ನುವುದು ಮುಟ್ಟುಗೋಲು ಪರವಾದವರ ವಾದ. ಈ ಕೃತಿಯಿಂದ ಬಸವಣ್ಣನವರಿಗೆ ಮಾನಹಾನಿಯಾಗಿದೆಯೆಂದು ಲಿಂಗಾಯತರಿಗೆ ನೋವಾಗಿದೆಯೆಂದೂ ಅವರು ಪ್ರತಿ ಪಾದಿಸುತ್ತಾರೆ. ಜೊತೆಗೆ, ಶಾಂತಿ ಸುವ್ಯವಸ್ಥೆಯನ್ನು ಕದಡಿದರೆ ಸಂವಿಧಾನಾತ್ಮಕ ಸಾಕ್ಷಿ ಒದಗಿದಂತಾಗುತ್ತದೆಯೆಂದೂ ಕೆಲವರು ಭಾವಿಸಿ ಉಗ್ರವಾಗಿ ವರ್ತಿಸುತ್ತಿದ್ದಾರೆ. ಹಾಗಾದರೆ, 'ಅನು ದೇವಾ...' ಕೃತಿಯಲ್ಲಿ ಬಸವಣ್ಣನವರಿಗೆ ಅವಮಾನ ಅಥವಾ ಮಾನಹಾನಿ ಮಾಡುವ ಅಂಶಗಳಿವೆಯೇ, ಲಿಂಗಾಯತರ ಭಾವನೆಗೆ ಧಕ್ಕೆ ತಂದು ನೋವುಂಟುಮಾಡುವ ಮಾತುಗಳಿವೆಯೆ – ಎಂಬುದನ್ನು ಪರಿಶೀಲಿಸಬೇಕಾಗುತ್ತದೆ. ಅವಮಾನ ಮತ್ತು ನೋವಿನ ಕಾರಣ ಕೊಡುವವರು ಮುಖ್ಯವಾಗಿ ಎರಡು ಅಂಶಗಳನ್ನು ಉಲ್ಲೇಖಿಸುತ್ತಾರೆ : (೧) ಬಸವಣ್ಣನವರನ್ನು ವಿನಾಕಾರಣ ಅಸ್ಪೃಶ್ಯ ಮಾದಿಗ ಜಾತಿಯಲ್ಲಿ ಹುಟ್ಟಿದವರೆಂದು ಪ್ರತಿಪಾದಿಸಲಾಗಿದೆ. (೨) ಬಸವಣ್ಣನವರು ದೇವದಾಸಿಯ ಅಕ್ರಮ ಸಂತಾನ ಎನ್ನಲಾಗಿದೆ. ಈ ಎರಡು ಅಂಶಗಳು 'ಅನು ದೇವಾ...'ದಲ್ಲಿ ಹೇಗೆ ನಿರೂಪಿತವಾಗಿವೆ ಎಂಬುದು ಮುಖ್ಯ ಮತ್ತು ಈ ಅಂಶಗಳು ನಿಜವೇ ಇದ್ದರೆ ಅವು ಅವಮಾನಕರವೆ ಅಥವಾ ನೋವಿನ ಸಂಗತಿಗಳೆ ಎಂಬುದು ಅತಿ ಮುಖ್ಯ. ಬಂಜಗೆರೆ ಜಯಪ್ರಕಾಶ್ ಅವರು ತಮ್ಮ ಕೃತಿಯನ್ನು 'ಬಸವಣ್ಣನ ಜಾತಿಮೂಲದ ವಿಶ್ಲೇಷಣೆ' ಎಂದು ಕರೆದುಕೊಂಡಿದ್ದಾರೆ. ಈ ವಿಶ್ಲೇಷಣೆಯ ಹಿಂದೆ ಅವರಿಗೆ ಯಾವುದೇ ದುರುದ್ದೇಶವಿದೆಯೆಂದು ಹೇಳಲಾಗುವುದಿಲ್ಲ. ಬಸವಣ್ಣನವರ ಬಗ್ಗೆ ಅಗೌರವದಿಂದ ಬರೆದಿದ್ದಾರೆಂದು ಆರೋಪಿಸಲಾಗುವುದಿಲ್ಲ. ಯಾಕೆಂದರೆ ಇಡೀ ಕೃತಿಯಲ್ಲಿ ನಿಂದನೆಯ ಯಾವ ಮಾತುಗಳೂ ಬರುವುದಿಲ್ಲ. ವಚನ ಚಳವಳಿ ಮತ್ತು ಬಸವಣ್ಣನವರ ಬಗ್ಗೆ ಅಪಾರ ಗೌರವದಿಂದಲೇ ತಮ್ಮ ವಿಚಾರಮಂಡನೆ ಮಾಡುತ್ತಾರೆ. ಅವರ ವಿಚಾರ ಪ್ರತಿಪಾದನೆ ಮತ್ತು ಅಭಿಪ್ರಾಯಗಳನ್ನು ನೀವು ಒಪ್ಪದೆ ಇರಬಹುದು. ಆದರೆ ಅಗೌರವಪೂರ್ವಕವಾಗಿ ಬರೆದಿದ್ದಾರೆಂದು ತೀರ್ಮಾನಿಸಲಾಗದು. ಬಸವ ಸಮಿತಿಯ ಅಧ್ಯಕ್ಷರಾದ ಶ್ರೀ ಅರವಿಂದ ಜತ್ತಿಯವರು ಜುಲೈ ೨೦೦೭ರ 'ಬಸವಪಥ'ದಲ್ಲಿ ಬಂಜಗೆರೆಯವರ ಕೃತಿಯ ಬಗ್ಗೆ ಕಟು ಆಕ್ಷೇಪ ಮಾಡುತ್ತಲೇ ಹೀಗೆ ಹೇಳುತ್ತಾರೆ : 'ಆದರೂ ಒಂದು ಮಾತು ಸತ್ಯ. ಕೃತಿಕಾರರು ಸ್ವತಃ ಬಸವಣ್ಣನವರ ಬಗ್ಗೆ ಗೌರವವನ್ನು ಹೊಂದಿರತಕ್ಕಂತಹ ವ್ಯಕ್ತಿಯಾಗಿದ್ದಾರೆ.' ನನ್ನ ಅಭಿಪ್ರಾಯವೂ ಇದೇ ಆಗಿದೆ. ಆದ್ದರಿಂದ, ಬಂಜಗೆರೆಯವರ ಪ್ರತಿಪಾದನೆಯನ್ನು ಒಪ್ಪದೆ ಇರುವವರು ಅದು ತಪ್ಪೆಂದು ವಾದಿಸಬಹುದೇ ಹೊರತು ಅಗೌರವದಿಂದ ಬರೆದಿದ್ದಾರೆಂದು ಹೇಳಲಾಗದು. ಬಂಜಗೆರೆಯವರು ತಮ್ಮ ವಿಶ್ಲೇಷಣೆಯನ್ನು 'ಸಾಂಸ್ಕೃತಿಕ ಶೋಧನೆ' ಎಂದು ಕರೆದುಕೊಂಡಿದ್ದಾರೆ. 'ಅಧ್ಯಯನ ಮುಂದುವರೆದಂತೆ ನನ್ನ ಈ ಪ್ರಮೇಯ ಮತ್ತಷ್ಟು ಬಲಗೊಳ್ಳಲು ಬೇಕಾದ ಆಧಾರಗಳು ಕೈಗೂಡುತ್ತವೆಯೇ ಹೊರತು ನಾನು ಮಂಡಿಸಿರುವ ಜಾತಿಮೂಲದ ಅಂಶವಂತೂ ತಲೆಕೆಳಗಾಗುವುದಿಲ್ಲ ಎಂಬ ಪ್ರಾಮಾಣಿಕ ನಂಬುಗೆ ನನಗಿದೆ. ಸತ್ಯವನ್ನು ಹುಡುಕುವುದು, ಸಾಮಾಜಿಕ ಸತ್ಯಗಳನ್ನು ಜನರ ಮುಂದೆ ಇದ್ದುದಿರುವ ಹಾಗೆಯೇ ಮಂಡಿಸುವುದು ಎಂಬ ನನ್ನ ಅಧ್ಯಯನದ ಕಾಯಕದಲ್ಲಿ ಬೇರೆ ಯಾವುದೇ ಬಗೆಯ ಮುಚ್ಚುಮರೆಯ ದುರುದ್ದೇಶಗಳೂ ಇಲ್ಲ' ಎಂದು ಸ್ಪಷ್ಟಪಡಿಸಿದ್ದಾರೆ. ಅವರಿಗೆ ದುರುದ್ದೇಶವಿಲ್ಲವೆಂಬುದು ಸ್ಪಷ್ಟ. ಆದರೆ 'ಜಾತಿ ಮೂಲದ ಅಂಶವಂತೂ ತಲೆಕೆಳಗಾಗುವುದಿಲ್ಲ' ಎಂಬ ದೃಢ, ದಿಟ್ಟ, ಸ್ಪಷ್ಟ ನಿಲುವು ಪುಸ್ತಕದಲ್ಲಿನ ಪ್ರತಿಪಾದನೆ ಬೆಳೆಯುತ್ತ ಹೋದಂತೆ ವಿನಮ್ರವಾಗುತ್ತದೆ. ಬಸವಣ್ಣ ಮತ್ತು ನಾಗಾಯಿ ದೇವರ ಸೇವೆಗೆ ಅಂಕಿತವಾದವರೆಂಬ ಊಹೆಯನ್ನು ಮಂಡಿಸುವಾಗ 'ಇದು ಹೀಗೇ ಇರಬೇಕು ಎಂದು ಸೂಚಿಸುವಷ್ಟು ನಾನು ಶಕ್ತನಲ್ಲ' (ಪುಟ ೪೧) ಎಂದು ಹೇಳುತ್ತ ಸಾಂಸ್ಕೃತಿಕ ಸಾಧ್ಯತೆಗಳತ್ತ ವಿನಯದಿಂದಲೇ ಗಮನ ಸೆಳೆಯುತ್ತಾರೆ. ಮುಂದೊಮ್ಮೆ ತಮ್ಮ ಪ್ರತಿಪಾದನೆಯು 'ಅನುಮಾನಿತ ಸತ್ಯ' ಎಂದು ಕರೆದುಕೊಳ್ಳುತ್ತಾರೆ. ಮತ್ತೆ ಕೆಳಸ್ತರದ ಸಮುದಾಯಗಳ ಬಗ್ಗೆ ನಾವು ಸಮಗ್ರ ಸಂಶೋಧನೆಯನ್ನು ಹಲವು ಆಯಾಮಗಳ ನೆಲೆಯಲ್ಲಿ ಕೈಗೊಳ್ಳಬೇಕೆಂದೂ 'ಆಗ ಮಾತ್ರವೇ ಬಸವಣ್ಣ ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿದವನೆಂಬ ಹುಸಿಸತ್ಯವನ್ನು ಹೇಳುವ ಅಪದ್ದಗಳನ್ನು ನಿವಾರಿಸಲಿಕ್ಕೆ ಸಾಧ್ಯವಾಗುತ್ತದೆ' (ಪುಟ ೮೪) ಎಂದು ದೃಢವಾಗಿ ಹೇಳುತ್ತಾರೆ. ಬಸವಣ್ಣ, ಡೋಹರ ಕಕ್ಕಯ್ಯ, ಸಮಗಾರ ಹರಳಯ್ಯ, ಕಿನ್ನರಿ ಬೊಮ್ಮಯ್ಯ, ಮಡಿವಾಳ ಮಾಚಯ್ಯ ಮುಂತಾದವರು ಕೆಳವರ್ಗದ 'ಅಸ್ಪೃಶ್ಯ ಜಾತಿಗಳಿಂದ ಮೂಡಿಬಂದ ಶರಣರಾಗಿದ್ದರು' ಎಂದು ಖಚಿತವಾಗಿ ಹೇಳುವ ಬಂಜಗೆರೆ 'ಇದಕ್ಕೆ ಪ್ರಾಜ್ಞ ವಿದ್ವಾಂಸರು ಮತ್ತು ವಿದ್ವತ್ತಿನ ನೆರವು ನೀಡಿ ಸಂಶೋಧನೆಯ ಮುಂದುವರಿಕೆಗೆ ಸಹಕರಿಸಬೇಕು ಎಂಬುದು ನನ್ನ ನಮ್ರ ವಿನಂತಿಯಾಗಿದೆ' (ಪುಟ ೮೪) ಎಂದು ಪುಸ್ತಕವನ್ನು ಮುಗಿಸುತ್ತಾರೆ. ಹೀಗಾಗಿ ಇವರ ಕೃತಿಯಲ್ಲಿ ಬಸವಣ್ಣನವರು ಅಸ್ಪೃಶ್ಯ (ಮಾದಿಗ) ಎಂಬ ದೃಢತೆ, ದೇವದಾಸಿಯ (ಬಸವಿಯ) ಸಂತಾನವಾಗಿರಬಹುದೆ ಎಂಬ ಅನುಮಾನ, ಅನುಮಾನ ಮತ್ತು ಊಹೆಗಳಿದ್ದ ಕಡೆ ಮೆದುತ್ವ, ವಿನಯ – ಎಲ್ಲವೂ ಸೇರಿಕೊಂಡಿವೆ. ತಮ್ಮ ಪ್ರತಿಪಾದನೆಗೆ ಬಂಜಗೆರೆಯವರು ಬಳಸಿರುವ ಆಧಾರಗಳನ್ನು ಏಕಾಏಕಿ ನಿರಾಕರಿಸುವಂತಿಲ್ಲ. ಬಸವಣ್ಣನವರ ಕೆಲವು ವಚನಗಳಿಗೆ ಅವರು ಕೊಡುವ ಎಲ್ಲ ಅರ್ಥಗಳು ವಾಚ್ಯವೆಂದೊ, ದೂರಾನ್ವಯವೆಂದೊ, ಧ್ವನ್ಯಾರ್ಥಗ್ರಹಿಕೆಯ ಅಭಾವದಿಂದ ಕೂಡಿವೆಯೆಂದೊ ಹೇಳಲಾಗದು. ಆದರೆ ಅವರು ಉಲ್ಲೇಖಿಸುವ ಕೆಲವು ವಿದ್ವಾಂಸರ ಹೇಳಿಕೆಗಳಿಗೆ ಮೂಲವಾದ ಕೃತಿಗಳಿಗೆ ಇವರೇ ನೇರವಾಗಿ ಹೋಗಬೇಕಿತ್ತು ಮತ್ತು ಇವರು ಆಯ್ದುಕೊಂಡ ವಚನಗಳಿಗೆ 'ವಿರುದ್ಧವಾದ' ವಚನಗಳನ್ನು ಮುಖಾಮುಖಿಯಾಗಿಸಿ ಮತ್ತಷ್ಟು ಶೋಧ ನಡೆಸಬೇಕಿತ್ತು ಎಂದು ನನಗೆ ಪ್ರಾಮಾಣಿಕವಾಗಿ ಅನ್ನಿಸುತ್ತದೆ. ಬಿ. ರಾಜಶೇಖರಪ್ಪನವರು ತಮ್ಮ ಲೇಖನವೊಂದರಲ್ಲಿ ಎತ್ತಿರುವ ಪ್ರಶ್ನೆಗಳು (ಬಸವಪಥ ಜುಲೈ ೨೦೦೭) ಈ ಮುಖಾಮುಖಿಗೆ ಭಾವೋದ್ವೇಗರಹಿತ ಆಧಾರವಾಗಬಲ್ಲವು. ಅಂತೆಯೇ ಡಾ|| ರಹಮತ್ ತರೀಕೆರೆಯವರು ಜುಲೈ ೨೦೦೭ರ 'ಸಂವಾದ' ಸಂಚಿಕೆಯಲ್ಲಿ ಬರೆದಿರುವ 'ಅನು ದೇವಾ ಹೊರಗಣವನು... ಹುಟ್ಟಿಸಿರುವ ಪ್ರಶ್ನೆಗಳು' ಎಂಬ ಪ್ರಬುದ್ಧ ಲೇಖನವು ಎತ್ತಿರುವ ಪ್ರಶ್ನೆಗಳು ಮಹತ್ವ ಪೂರ್ಣವಾಗಿವೆ. ನಾನು ಬಂಜಗೆರೆಯವರ ಪ್ರತಿಪಾದನೆಯ ಕೆಲ ಅಂಶಗಳನ್ನು ಒಪ್ಪುತ್ತೇನಾದರೂ ಅಂತಿಮ ತೀರ್ಮಾನಕ್ಕೆ ಬರಲು ಮತ್ತಷ್ಟು ಪುರಾವೆ, ಚರ್ಚೆ ಮತ್ತು ಶೋಧ ಬೇಕಿತ್ತು ಎಂಬ ಅತೃಪ್ತಿ ಉಳಿಯುತ್ತದೆ. ತನ್ನ ಪ್ರತಿಪಾದನೆಯ ಅಂಶಗಳಿಗೆ ವಿರುದ್ಧವಾದ ಅಂಶಗಳಿಗೆ ಸೂಕ್ತವಾಗಿ ಮುಖಾಮುಖಿಯಾಗುವುದು, ಸಂವಾದಿಸುವುದು, ಆ ಮೂಲಕ ತೀರ್ಮಾನಗಳಿಗೆ ತಲುಪುವುದು ಅಗತ್ಯ.

ಅದೇನೇ ಇರಲಿ, ಬಂಜಗೆರೆಯವರು ಶೂನ್ಯದಲ್ಲಿ ಶೋಧ ನಡೆಸಿಲ್ಲ. ನಿರೂಪಣೆಯಲ್ಲಿ ಸಭ್ಯತೆ, ಸೌಜನ್ಯಗಳ ಎಲ್ಲೆ ಮೀರಿಲ್ಲ. ಅವರು ಸಂಶೋಧನೆಯ ಸಾಂಪ್ರದಾಯಿಕ ವಿಧಾನಗಳನ್ನೂ ಅನುಸರಿಸಿಲ್ಲ. ತಮ್ಮದೇ ಆದ ಆಕರ, ಆಧಾರ, ವಿಧಾನಗಳ ಮೂಲಕ ಬರೆದಿದ್ದಾರೆ. ಆ ಬಗ್ಗೆ ಭಿನ್ನಾಭಿಪ್ರಾಯಿಸುವ ಅಥವಾ ಅನುಮೋದಿಸುವ ಹಕ್ಕು ಎಲ್ಲರಿಗೂ ಇದೆ. ಆದರೆ ಬಸವಣ್ಣನವರು ಅಸ್ಪೃಶ್ಯ (ಮಾದಿಗ) ಸಂಜಾತ ಅಥವಾ ದೇವದಾಸಿಪುತ್ರ ಎಂಬುದು ನಿಜವೇ ಇದ್ದರೆ ಅದು ನೋವಿನ ಸಂಗತಿಯೇ ? ಅವಮಾನಕರವೇ ? – ಈ ಪ್ರಶ್ನೆಗಳು ಸಾಮಾಜಿಕವಾಗಿ ಮಹತ್ವವುಳ್ಳವು. ಈ ಅಂಶಗಳ ಸತ್ಯಾಸತ್ಯತೆ ಏನೇ ಇರಲಿ, 'ಅಸ್ಪೃಶ್ಯ' ಎನ್ನುವುದು 'ಅವಮಾನ' ಎಂದು ಭಾವಿಸುವುದೇ ಬಸವಣ್ಣನವರಿಗೆ ಮಾಡುವ ಅವಮಾನ. ಯಾಕೆಂದರೆ ಬಸವಣ್ಣನವರು ತನ್ನನ್ನು ಅಸ್ಪೃಶ್ಯ ಎಂದು ಕರೆದುಕೊಳ್ಳುವಲ್ಲಿ ಆನಂದ ಅನುಭವಿಸುತ್ತಿದ್ದರು ಎಂಬುದನ್ನು ಅವರು ಅಸ್ಪೃಶ್ಯರಾಗಿ ಹುಟ್ಟಿಲ್ಲವೆಂದು ವಾದಿಸುವವರೂ ಒಪ್ಪುತ್ತಾರೆ. ಸ್ವತಃ ಬಸವಣ್ಣನವರಿಗೆ ಅದರಲ್ಲಿ ಆನಂದವಿರುವಾಗ ಅವಮಾನದ ಪ್ರಶ್ನೆ ಎಲ್ಲಿ ಬಂತು ? ಬಸವಣ್ಣ ಅಸ್ಪೃಶ್ಯರಾಗಿ ಹುಟ್ಟಿದ್ದಾರೆಂಬ ವಾದವನ್ನು ಅವಮಾನವೆಂದು ಭಾವಿಸುವವರು ಈ ಮೂಲಕ ಅಸ್ಪೃಶ್ಯರಿಗೂ ಅವಮಾನ ಮಾಡುತ್ತಿದ್ದಾರೆ. ಆದ್ದರಿಂದ ಆ ಅಭಿಪ್ರಾಯವನ್ನು ಬೇಕಾದರೆ ಅಲ್ಲಗಳೆಯಲಿ, ಅವಮಾನ ಎಂದು ಭಾವಿಸುವುದು ಬೇಡ. ಇನ್ನು ದೇವದಾಸಿ ಅಥವಾ ಬಸವಿ ಪುತ್ರರಾಗಿರಬಹುದೆಂಬ ಅನುಮಾನವನ್ನು 'ಅವಮಾನ' ಎಂದು ಭಾವಿಸಬೇಕಾಗಿಲ್ಲ. ಮೂಢನಂಬಿಕೆಗೆ ಬಲಿಯಾಗಿ ಪುರುಷಪ್ರಧಾನ ಸಮಾಜದ ಶೋಷಣೆಗೆ ಒಳಗಾದ ದೇವದಾಸಿ ಅಥವಾ ಬಸವಿ ಸಮುದಾಯದ ನೋವು ಮತ್ತು ಅವಮಾನಗಳನ್ನು ಅರ್ಥಮಾಡಿಕೊಂಡವರಾರೂ ಅಂಥವರ ಸಂತಾನವಾದದ್ದೇ ಅವಮಾನಕರವೆಂದೂ ನೋವಿನ ಸಂಗತಿಯೆಂದೂ ತಿಳಿಯುವುದಿಲ್ಲ. ಹಾಗೆ ತಿಳಿದರೆ ಅದು ಪುರುಷಪ್ರಧಾನ ಸಮಾಜದ ಜೀವ ವಿರೋಧಿ ನಿಲುವಾಗುತ್ತದೆ. ಇದರರ್ಥ, ಬಂಜಗೆರೆಯವರ ವಾದವನ್ನು ಒಪ್ಪಬೇಕೆಂಬ ಒತ್ತಾಯವಲ್ಲ; ಸಾಮಾಜಿಕ ವಾಸ್ತವತೆಯ ಒಂದು ಅವಲೋಕನ; ಅಷ್ಟೆ.

ಆದ್ದರಿಂದ ಬಂಜಗೆರೆಯವರ ಕೃತಿಯನ್ನು ಮುಟ್ಟುಗೋಲು ಹಾಕಬೇಕೆಂದು ಹಟಮಾಡುತ್ತಿರುವವರ ವಾದದಲ್ಲಿ ಹುರುಳಿಲ್ಲ. ಮುಟ್ಟುಗೋಲು ಹಾಕಿಕೊಳ್ಳಬೇಕೆಂದು ಒತ್ತಾಯಿಸುವ ಬದಲು 'ಅನು ದೇವಾ...' ಕೃತಿಯ ನಿಲುವುಗಳನ್ನು ಅಲ್ಲಗಳೆಯುವಂತಹ ಕೃತಿ, ಅಥವಾ ಲೇಖನಗಳನ್ನು ಬರೆಯಲಿ; ತಪ್ಪು ಮಾಹಿತಿಯಿದ್ದರೆ ರಚನಾತ್ಮಕವಾಗಿ

ಟೀಕಿಸಲಿ; ಈ ಕೃತಿಯ ಬಗ್ಗೆ ಗೌರವವೇ ಇಲ್ಲದಿದ್ದರೆ ಸಂಪೂರ್ಣ ನಿರ್ಲಕ್ಷಿಸಲಿ. ಆದರ ಬದಲು ಸಂವಾದದ ವಾತಾವರಣವನ್ನೇ ನಾಶಮಾಡ ಹೊರಡುವುದು, ಮುಗ್ಧರನ್ನು ಹಾದಿತಪ್ಪಿಸಿ ಬೀದಿಜಗಳಕ್ಕೆ ಹಚ್ಚುವುದು ಸರಿಯಲ್ಲ.

ಕೆಲವರು ಕೇಳುತ್ತಾರೆ : ಜಾತಿ ವಿನಾಶದ ಬಗ್ಗೆ ಹೋರಾಟ ಮಾಡಿದ ಬಸವಣ್ಣನವರ ಜಾತಿ ಹುಡುಕುವುದು ಏಕೆ ? – ಎಂದು. ಮೇಲ್ನೋಟಕ್ಕೆ ಇದು ಉತ್ತಮ ಆದರ್ಶದ ಮಾತೇ ಸರಿ. ಆದರೆ ಇಲ್ಲಿ ಎರಡು ಪ್ರಶ್ನೆಗಳಿವೆ. ಮೊದಲನೆಯದು ಬಸವಣ್ಣನವರ ಹೋರಾಟ ಜಾತಿವಿನಾಶವನ್ನು ಆದ್ಯತೆಯನ್ನಾಗಿಟ್ಟುಕೊಂಡಿತ್ತೊ ಅಥವಾ ಎಲ್ಲ ಜಾತಿಯವರಿಗೂ ಧಾರ್ಮಿಕ ಸಮಾನತೆಯನ್ನು ತಂದುಕೊಡುವ ಶಿವ ಕೇಂದ್ರಿತ ಹೋರಾಟವಾಗಿತ್ತೊ ಎಂಬುದು. ಎರಡನೆಯದು ಕನ್ನಡ ಸಾಹಿತ್ಯ ಸಂಶೋಧನೆಯಲ್ಲಿ ಯಾರೂ ಜಾತಿಯನ್ನು ಹುಡುಕಿಲ್ಲವೇ ? – ಎಂಬುದು. ನಾನು ಎತ್ತಿದ ಮೊದಲನೆಯ ಪ್ರಶ್ನೆಯನ್ನು ವಚನ ಚಳವಳಿಯ ಗೌರವಯುತ ಪುನರ್‌ಮೌಲ್ಯೀಕರಣಕ್ಕೆ ಪ್ರೇರಣೆಯಾಗಿ ಬಳಸಿಕೊಳ್ಳಬಹುದೆಂದು ಭಾವಿಸುತ್ತೇನೆ. ವಚನ ಚಳವಳಿಯು ಧಾರ್ಮಿಕ ಸಮಾನತೆಗಾಗಿ ನಡೆದ ಬಹು ದೊಡ್ಡ ಆಂದೋಲನ; ವಚನ ಸಾಹಿತ್ಯ – ವಿಶೇಷವಾಗಿ ಭಕ್ತಸ್ಥಲ – ಕವಿಮನಸ್ಸಿನ ಅನನ್ಯಕೊಡುಗೆ. (ಇದೇ ಮಾತನ್ನು ನಾನು ಮಾಹೇಶ್ವರ ಸ್ಥಲದ ಬಗ್ಗೆ ಹೇಳುವುದಿಲ್ಲ.) ವೈದಿಕಧರ್ಮಕ್ಕೆ ಎದುರಾಗಿ, ಉತ್ತರವಾಗಿ ಬಂದ, ಬೆಳೆದ ಈ ಚಳವಳಿ ಚಾರಿತ್ರಿಕವಾಗಿ ಪ್ರಗತಿಪರ ಪಕ್ವತೆಯನ್ನು ತೋರಿದಂತೆಯೇ ಕೆಲವು ಇತಿಮಿತಿಗಳಿಗೂ ಒಳಪಟ್ಟಿತ್ತು. ದೇಹದೊಳಗೆ ದೇವಾಲಯದ ಕಲ್ಪನೆಯನ್ನು ತಂದದ್ದು ತಾತ್ವಿಕ ಪಕ್ವತೆಗೆ ಒಂದು ಉತ್ತಮ ಉದಾಹರಣೆ. ಅಂತೆಯೇ 'ಶರಣ ಸತಿ ಲಿಂಗ ಪತಿ' ಎಂಬ ಕಲ್ಪನೆಯಲ್ಲಿ ಭಕ್ತಿಯನ್ನು ಖಾಸಗಿಗೊಳಿಸಿದ್ದು ಮತ್ತೊಂದು ಪ್ರಬುದ್ಧ ತಾತ್ವಿಕ ಚಿಂತನೆ. ಆದರೆ ಎಲ್ಲವೂ ನಡೆದದ್ದು 'ಏಕದೇವೋಪಾಸನೆ'ಯ ಕೇಂದ್ರದಲ್ಲಿ ಎಂಬುದು ಇದರ ಇತಿಮಿತಿ. ಈ ಅಂಶವನ್ನು ಕುರಿತು ನಾನು ೧೯೯೩ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿಯ 'ಕನ್ನಡ ಸಾಹಿತ್ಯ ಪುನರ್‌ಮೌಲ್ಯೀಕರಣ ಮಾಲೆ'ಗೆ ಬರೆದ ಪ್ರಸ್ತಾವನೆಯಲ್ಲಿ ಪ್ರಸ್ತಾಪಿಸಿದ್ದೆ. ಅಲ್ಲಿನ ಕೆಲವು ಸಾಲುಗಳು ಹೀಗಿವೆ: ''ವಚನಕಾರರು ಎಲ್ಲ ಜಾತಿ-ವರ್ಗಗಳನ್ನು ಒಂದುಗೂಡಿಸಲು ಪ್ರಯತ್ನಿಸಿದ್ದು ನಿಜವಾದರೂ ಅದಕ್ಕೆಲ್ಲ ಕೇಂದ್ರವೆಂದರೆ ಶಿವಭಕ್ತಿ. ಶಿವಭಕ್ತನಲ್ಲದವನು ರಾಜನಾದರೂ ಒಂದೇ, ಸಾಮಾನ್ಯನಾದರೂ ಒಂದೇ. ಭವಿಯ ಬಗ್ಗೆ ಪ್ರೀತ್ಯಾದರಗಳಿಲ್ಲದ ನಿಲುವು ತೆಗೆದುಕೊಂಡ ವಚನ ಚಳವಳಿ ಶಿವಭಕ್ತಿಯನ್ನು ಶಕ್ತಿ ಕೇಂದ್ರವಾಗಿಸಿಕೊಂಡಿತು... ಭಕ್ತಿಯ ಖಾಸಗೀಕರಣ ಮತ್ತು ಕೇಂದ್ರೀಕರಣಗಳ ವೈರುಧ್ಯವನ್ನು ಒಡಲೊಳಗಿಟ್ಟುಕೊಂಡೇ ಬೆಳೆಯಿತು. ಏಕದೇವೋಪಾಸನೆಯ ತತ್ವಕ್ಕೆ ಶಿವನೇ ಕೇಂದ್ರ, ಶಿವನೇ ಶಕ್ತಿ. ಈ ಕೇಂದ್ರಶಕ್ತಿಗೆ ಬದ್ಧರಾದವರು ಮಾತ್ರ ಭಕ್ತರು... ಶಿವವ್ಯಕ್ತಿತ್ವ, ಶಿವಮನಸ್ಸು ಮತ್ತು ಶಿವಮನುಷ್ಯ ಮುಖ್ಯವಾದ ವಚನ ಚಳವಳಿಯ ಫಲಿತವನ್ನು ನಾನು 'ಶಿವಸಂಸ್ಕೃತಿ' ಎಂದು ಕರೆಯುತ್ತೇನೆ... ವಚನ ಚಳವಳಿಯನ್ನು ಬೇರೆಲ್ಲ ಅಂಶಗಳಿಗಿಂತ 'ಶಿವಸಂಸ್ಕೃತಿ ಚಳವಳಿ'ಯೆಂದು ಗುರುತಿಸುವುದೇ ಸರಿ... ಕೇಂದ್ರೀಕೃತ ಅಲ್ಲಾಭಕ್ತಿ, ರಾಮಭಕ್ತಿ, ಶಿವಭಕ್ತಿಗಳು ಉಗ್ರರೂಪ ಪಡೆದಂತೆಲ್ಲ ಧಾರ್ಮಿಕ ಮೂಲಭೂತವಾದೀ ಶಕ್ತಿಗಳಾಗುವ ಅಪಾಯವಿರುತ್ತದೆ. ಭಕ್ತಿಯ ಕೇಂದ್ರೀಕರಣಕ್ಕೂ ಮೂಲಭೂತವಾದಕ್ಕೂ ಆಳದಲ್ಲಿ ಸಂಬಂಧ ಸಾಧ್ಯವೆಂಬ ಸೂಚನೆಯನ್ನು ಇಲ್ಲಿ ಸಾದರಪಡಿಸುತ್ತಿದ್ದೇನೆ...'' ಮುಂದೆ ನಾನು ೨೦೦೩ರಲ್ಲಿ 'ಪ್ರಜಾವಾಣಿ'ಯಲ್ಲಿ ಬರೆಯುತ್ತಿದ್ದ 'ಪರಂಪರೆಯೊಂದಿಗೆ ಪಿಸುಮಾತು' ಎಂಬ ಅಂಕಣದಲ್ಲಿ 'ಭಕ್ತಭವಿಗಳ ನಡುವೆ ಬೆಚ್ಚಿಬಿದ್ದ ಭಕ್ತಿ' ಎಂಬ ಲೇಖನ ಬರೆದು ಈ ವಿಚಾರವನ್ನು ಮತ್ತಷ್ಟು ಪುರಾವೆಗಳ ಸಮೇತ ವಿಸ್ತರಿಸಿದ್ದೆ. ಹರಿಹರ, ರಾಘವಾಂಕರ ಕೆಲ ಕೃತಿಗಳನ್ನು ಮೆಚ್ಚುತ್ತಲೇ ಶಿವಭಕ್ತರಲ್ಲದವರ ಬಗ್ಗೆ ತಳೆದ ಕಠೋರ ನಿಲುವನ್ನು ಚರ್ಚಿಸಿದ್ದೆ. 'ಸಿದ್ಧರಾಮ ಚಾರಿತ್ರ' ಒಂದು ಕಡೆ ಶಿವನಲ್ಲವೆಂಬ ಪರವಾದಿಯ ತಲೆಯ ಮೇಲೆ ಎಡಗಾಲಿನ ಚಪ್ಪಲಿ ಇಡಬೇಕು ಎಂಬರ್ಥದ ಮಾತು ಬರುವುದನ್ನು ಜ್ಞಾಪಿಸಿದರೆ ಶಿವಕೇಂದ್ರಿತ ಭಕ್ತಿ ತಳೆಯುತ್ತ ಹೋದ ಉಗ್ರರೂಪಕ್ಕೆ ಒಳ್ಳೆ ಉದಾಹರಣೆಯಾದೀತು. ಇಂತಹ ಇತಿಮಿತಿಗಳ ಬಗ್ಗೆ ಸೂಕ್ತ ಚರ್ಚೆಯಾಗಬೇಕಾದ ಅಗತ್ಯವಿದೆ. ಸಂಕ್ಷಿಪ್ತವಾಗಿ ಈ ಅಂಶಗಳನ್ನು ಪ್ರಸ್ತಾಪಿಸಲು ಕಾರಣವಿದೆ. ಅಂದು ಭಕ್ತಿಯ ಕೇಂದ್ರೀಕರಣದಲ್ಲಿ – ಏಕದೈವನಿಷ್ಠೆಯ ಉಗ್ರತೆಯಲ್ಲಿ ಸೇರಿಕೊಂಡಿದ್ದ ಮೂಲಭೂತವಾದಿ ಮನೋಧರ್ಮವು ಇಂದು ಆ 'ಮುಟ್ಟುಗೋಲು ಮನೋಧರ್ಮ'ದಲ್ಲಿ ಪ್ರಕಟಗೊಳ್ಳುತ್ತಿದೆಯೆಂದು ನನಗನ್ನಿಸುತ್ತಿದೆ. ಹನ್ನೆರಡನೆಯ ಶತಮಾನದಲ್ಲೇ ಬಸವಣ್ಣನವರ ವಿಚಾರಧಾರೆಯನ್ನು ಒಪ್ಪದ ಜಡ ಸಂಪ್ರದಾಯದ ವೀರಶೈವರಿದ್ದರೆಂದೂ ಕೆಲವು ಸಂಶೋಧಕರು ಗುರುತಿಸಿದ್ದಾರೆ. ಸಂಶೋಧಕರಾದ ಶ್ರೀ ಪಿ. ಬಿ. ದೇಸಾಯಿಯವರು ಬಿಜ್ಜಳನು ಜೈನನಲ್ಲವೆಂದೂ ಸಂಪ್ರದಾಯಸ್ಥ ವೀರಶೈವನೆಂದೂ ಪ್ರತಿಪಾದಿಸುತ್ತಾರೆ. ಇದರ ಸತ್ಯಾಸತ್ಯತೆ ಏನೇ ಇರಲಿ, ಏಕದೇವೋಪಾಸನೆಯು ವಿವಿಧ ಜಾತಿ-ವರ್ಗಗಳನ್ನು ಧಾರ್ಮಿಕ ಸಮಾನತೆಯ 'ಶಿವಧರ್ಮ' ಮತ್ತು 'ಶಿವ ಸಂಸ್ಕೃತಿ'ಗೆ ಕರೆತಂದಂತೆ ಮುಂದೆ ಉಗ್ರರೂಪಿಗಳಿಗೂ ಒಂದು ಒತ್ತಾಸೆಯಾಯಿತೆಂದು ಭಾವಿಸಬಹುದು. ಶಿವಭಕ್ತರಲ್ಲದವರ ಉಗ್ರ ನಿರಾಕರಣೆಯಲ್ಲೇ ಈ ಒತ್ತಾಸೆಯಿದೆ. ಅಂದಿನಂತೆ ಇಂದೂ ಪ್ರಗತಿಪರ ವೀರಶೈವರು ಮತ್ತು ಯಥಾಸ್ಥಿತಿವಾದಿ, ಜಾತಿವಾದಿ ವೀರಶೈವರು ಒಟ್ಟಿಗೇ ಇದ್ದಾರೆ. ಆದ್ದರಿಂದ 'ಆನು ದೇವಾ' ಕೃತಿಯನ್ನು ಮುಟ್ಟುಗೋಲು ಹಾಕಿಕೊಳ್ಳಬೇಕೆಂದು ಎಲ್ಲ ವೀರಶೈವರೂ ಒತ್ತಾಯಿಸುತ್ತಿದ್ದಾರೆಂದೂ ಎಲ್ಲ ವೀರಶೈವರೂ ಯಥಾಸ್ಥಿತಿವಾದಿಗಳೆಂದೂ ತಿಳಿಯಬಾರದು. ಚನ್ನವೀರ ಕಣವಿ, ಚಂದ್ರಶೇಖರ ಪಾಟೀಲ, ಕೆ. ಮರುಳಸಿದ್ದಪ್ಪ, ಲಿಂಗದೇವರು ಹಳೆಮನೆ, ಚನ್ನಬಸಪ್ಪ ಬೆಟ್ಟದೂರು, ಚಂದ್ರಶೇಖರ ತಾಳ್ಯ – ಈ ಕೆಲವರು ಹುಟ್ಟಿನಿಂದ ಲಿಂಗಾಯತರಾದರೂ ಅದನ್ನು ಮೀರಿದ ನಿಲುವುಗಳನ್ನು ತೆಗೆದುಕೊಂಡು ಮುಟ್ಟುಗೋಲನ್ನು ವಿರೋಧಿಸಿದ್ದಾರೆ. ದಿಟ್ಟ

## ಆಟ

**ಪ**ಗಡೆಗಳು ನಾವು.
ದೀಪಾವಳಿಯಲ್ಲೊಮ್ಮೆ ಬಿಡು।

ದಟ್ಟ ಬಟ್ಟೆಯ ಮೇಲೆ ಪಟ್ಟೆ ಚಿ
ಅದರೊಳೊಂದು ಗರ್ಭ,
ಅದೇ ಮುಕ್ತಿಯ ದ್ವಾರ.

ಈ ನಡುವೆ,
ಎಷ್ಟೊಂದು ತಾಣಗಳು, ತಿರು
ನಮ್ಮ ನಮ್ಮಲ್ಲೇ ಬಣಗಳು,
ಅದರಲ್ಲೂ ಗುಂಪುಗಳು,
ಒಬ್ಬರ ಸೋಲಿಸಿ ಒಬ್ಬರು
ಗೆಲ್ಲಲು ಕಡಿದಾಟ.



ಜಡ ಪಗಡೆಗಳು ನಾವು
ಕವಡೆಗಳದೇ ಆಟ
ಮಾಯದ ಆಟ
ಎಸೆವ ಕೈಗಳಿಗೂ ತಿಳಿಯದ ಆಟ.

ಯಾವ ಕಾಯಿಗೆ
ಎಷ್ಟು ಹೊಡೆತವೊ
ಯಾವುದು
ಯಾವ ಕಟ್ಟೆಗೊ
ಹೊಟ್ಟೆ ಕಮರಿಸುವುದೊ
ಮುಕ್ತಿ ಪಡೆವುದೊ ?

ಗಲವು ಸೋಲು ಏನೇ ಇರಲ
ಆಟಕ್ಕೊಂದು ಕೊನೆ,
ಪೆಟ್ಟಿಗೆಯ ಕತ್ತಲು,
ಮತ್ತೆ ಕವಡೆಗಳು ಮಾತಾಡುವ ತನಕ.

ಎಸೆವ ಕೈಗಳಿಗೆ ಗೊತ್ತಿಲ್ಲ,
ಅವುಗಳದೂ ಇದೇ ಹಾಡು !

ಶ್ವೇತಾ ನರಗುಂದ
೨೨, ಸುಭಾಷ ನಗರ, ಎಂ.ಎ. ಸೆಕ್ಟರ್ ೧, ಬೆಳಗಾವಿ - ೫೯೦ ೦೧೬

ನಿಲುವು ತೆಗೆದುಕೊಂಡ ಇವರು ಅಭಿನಂದನಾರ್ಹರು. 'ಬಸವ ಸಮಿತಿ'ಯು 'ಆನು ದೇವಾ'ಕ್ಕೆ ಪ್ರತಿಕ್ರಿಯೆಯಾಗಿ 'ಬಸವಪಥ'ದ ಒಂದು ಸಂಚಿಕೆಯನ್ನೇ ಮೀಸಲಾಗಿಟ್ಟಿದೆ. ಅಧ್ಯಕ್ಷರು ಕೆಲವು ಉದ್ರೇಕದ ಮಾತುಗಳನ್ನಾಡಿದ್ದರೂ ಲೇಖನಗಳು ಚರ್ಚೆಯನ್ನು ಸಾಧ್ಯವಾಗಿಸುತ್ತವೆ.

ಆದರೆ ನನಗೆ ಆಘಾತಕಾರಿಯೆನ್ನಿಸಿದ್ದೆಂದರೆ ಹುಟ್ಟಿನಿಂದ ಲಿಂಗಾಯತರಾದ ಅನೇಕ ಪ್ರಸಿದ್ಧ, ಗಣ್ಯ ಲೇಖಕರು ಮುಟ್ಟುಗೋಲಿನ ವಿಷಯದಲ್ಲಿ ವಹಿಸಿದ ಮೌನ ! ತಮಗೆ ಒಪ್ಪಿತ ವಾಗದಿದ್ದರೆ, ಸದರಿ ಕೃತಿಯ ವಿಚಾರವನ್ನು ನಿರಾಕರಿಸಿಯೂ ಮುಟ್ಟುಗೋಲಿನ ಒತ್ತಾಯವನ್ನು ವಿರೋಧಿಸುವಷ್ಟು ಪ್ರಜಾಸತ್ತಾತ್ಮಕತೆ ಇವರಲ್ಲಿಲ್ಲವೇ ಎಂಬ ಪ್ರಶ್ನೆ ತೀರಾ ಸಹಜ.

ಇಷ್ಟೆಲ್ಲ ವಿವರಿಸುವಾಗ ಬಸವಣ್ಣನವರು ಮತ್ತು ವಚನ ಚಳವಳಿಯು ಜಾತಿವಿನಾಶವನ್ನು ಆದ್ಯ ಅಂಶವನ್ನಾಗಿಟ್ಟುಕೊಂಡಿತ್ತೆ ಅಥವಾ ಎಲ್ಲ ಜಾತಿಯವರಿಗೂ ಧಾರ್ಮಿಕ ಸಮಾನತೆಯನ್ನು ತಂದುಕೊಡುವ ಶಿವಕೇಂದ್ರಿತ ಹೋರಾಟವಾಗಿತ್ತೆ ಎಂದು ನಾನೇ ಹಾಕಿಕೊಂಡ ಪ್ರಶ್ನೆಗೆ ಉತ್ತರಿಸುತ್ತಿದ್ದೆ. ಈಗ ಎರಡನೇ ಪ್ರಶ್ನೆಗೆ ಬರೋಣ. ಕನ್ನಡ ಸಾಹಿತ್ಯ ಸಂಶೋಧನೆಯಲ್ಲಿ ಯಾರೂ ಜಾತಿಯನ್ನು ಹುಡುಕಿಲ್ಲವೇ ? ಎಲ್ಲಾದರೂ ಉಂಟೇ ! ಕವಿಗಳ ಜಾತಿ-ಧರ್ಮ ಗಳನ್ನು ಬಿಟ್ಟು ಎಷ್ಟು ಜನ ಸಂಶೋಧನೆ ಮಾಡಿದ್ದಾರೆ ? ಪ್ರತಿ ಕವಿಯ ಜನ್ಮ ಮೂಲದ ಬಗ್ಗೆ ಸಂಶೋಧನೆ ಮತ್ತು ಚರ್ಚೆ ನಡೆದಿದೆ. ಅಷ್ಟೇ ಅಲ್ಲ, ತಂತಮ್ಮ ಜಾತಿ-ಧರ್ಮದ ಕವಿ-ಲೇಖಕರನ್ನು ಕುರಿತು ಸಂಶೋಧನೆ ಮಾಡಿದವರೇ ಹೆಚ್ಚು. ಈ ವಿಷಯಕ್ಕೆ ಕಾಣಿಸದ ಜಾತಿವಿನಾಶದ ಪ್ರಶ್ನೆ ಈಗ ಮಾತ್ರ ಯಾಕೆ ಮುಖ್ಯವಾಗುತ್ತಿದೆ ? ಬಸವಣ್ಣನವರು ಮೂಲತಃ ಬ್ರಾಹ್ಮಣರು ಎಂದು ಸಂಶೋಧಿಸಿದಾಗ ಅವರ ಜಾತಿಯನ್ನೇಕೆ ಹುಡುಕುತ್ತೀರಿ ಎಂದು ಪ್ರಶ್ನಿಸದೆ ಇದ್ದವರು 'ಅಸ್ಪೃಶ್ಯ' ಎಂದಕೂಡಲೆ (ಅದು ತಪ್ಪೋ, ಸರಿಯೋ ಬೇರೆ ಪ್ರಶ್ನೆ) ಜಾತಿವಿನಾಶದ ವಿಷಯವನ್ನು ಯಾಕೆ ಮುಂದು ಮಾಡಲಾಗುತ್ತಿದೆ ? ಒಂದು ವೇಳೆ ಬಸವಣ್ಣ ನವರು ಅಸ್ಪೃಶ್ಯರಾಗಿಯೇ ಹುಟ್ಟಿದ್ದುದು ನಿಜವಾದರೆ, ಈ ದೇಶದಲ್ಲಿ ಎಂಟುನೂರು ವರ್ಷಗಳ ಹಿಂದೆ ಅಸ್ಪೃಶ್ಯರೊಬ್ಬರು ಧಾರ್ಮಿಕ ಸಮಾನತೆಯ ಹೋರಾಟ ಕಟ್ಟಲು ಸಾಧ್ಯ ವಾಯಿತೆಂಬುದು ನಮ್ಮ ಸಾಮಾಜಿಕ ಚರಿತ್ರೆಯಲ್ಲಿ ಒಂದು ಮೈಲಿಗಲ್ಲಾಗುವುದಿಲ್ಲವೆ ? ಆದ್ದರಿಂದ ಹುಸಿ ಆದರ್ಶದ ಮಾತುಗಳನ್ನು ಬದಿಗಿಟ್ಟು ವಾಸ್ತವವನ್ನು ಎದುರಿಸೋಣ. ನಿರ್ವಿಕಾರವಾಗಿ ಜಾತಿಯನ್ನು ಸಾಮಾಜಿಕ ವಾಸ್ತವವೆಂದು ಗ್ರಹಿಸುವುದು ಬೇರೆ; ಜಾತಿವಾದ ಮಾಡುವುದು ಬೇರೆ. ಮುಟ್ಟುಗೋಲಿಗೆ ಒತ್ತಾಯಿಸುತ್ತಿರುವವರ ವರ್ತನೆಯಲ್ಲಿ ಜಾತಿವಾದದ ವಾಸನೆಯಿದೆ; ಧಾರ್ಮಿಕ ಮೂಲಭೂತವಾದ ಆವರಿಸಿಕೊಂಡಿದೆ.

'ಆನು ದೇವಾ ಹೊರಗಣವನು...' ಕುರಿತ ವಾದ-ವಿವಾದ- ಮೊಂಡುವಾದಗಳ ಮಧ್ಯೆ ನಾನು ರಹಮತ್ ತರೀಕೆರೆಯವರಂತೆಯೇ ಹೀಗೆ ಭಾವಿಸುತ್ತೇನೆ : 'ಇಬ್ಬರು ದಲಿತ ಶರಣರ ಮನೆಯ ದಾಸರ ಮಕ್ಕಳು ಬೆರಣಿ ಆರಿಸಲು ಹೋಗಿ ಸಂಗ ಮಾಡಿದಾಗ ತಾನು ಹುಟ್ಟಿದೆ ಎಂದು ಹೇಳಿಕೊಳ್ಳುವ ಬಸವಣ್ಣ, ದಲಿತ ಮೂಲದವನು ಎಂದು ಸಾಬೀತಾದರೆ ಸಂತೋಷವಾಗುತ್ತದೆ. ಸಾಬೀತಾಗ ದಿದ್ದರೆ ದುಗುಡವಾಗುವುದಿಲ್ಲ.' (ಸಂವಾದ : ಜುಲೈ-೨೦೦೭)

ಡಾ|| ಎಸ್. ಎಲ್. ಭೈರಪ್ಪನವರ 'ಆವರಣ'ದ್ದು ಇನ್ನೊಂದು ಕತೆ. ಈ ಕಾದಂಬರಿಯ ನಾಯಕಿ ಲಕ್ಷ್ಮಿ 'ಅಪ್ಪಟ ಗಾಂಧಿವಾದಿ' ನರಸಿಂಹಯ್ಯನವರ ಮಗಳು. ಮುಸ್ಲಿಂ ಅಮೀರನನ್ನು ಮದುವೆ ಯಾದವಳು. ಬರಬರುತ್ತ ಅಮೀರನ ವರ್ತನೆ ಇಷ್ಟವಾಗು ವುದಿಲ್ಲ. ಇಬ್ಬರೂ ಪರಸ್ಪರ ದೂರವಾಗುವ ಸನ್ನಿವೇಶ ನಿರ್ಮಾಣ ವಾಗುತ್ತೆ. ಈಕೆ ಸಂಶೋಧನಾತ್ಮಕ ಗ್ರಂಥಗಳನ್ನು ಅಧ್ಯಯನ ಮಾಡಿ ಔರಂಗಜೇಬನ ಕಾಲ ಕುರಿತು ಕಾದಂಬರಿ ಬರೆಯ ತೊಡಗುತ್ತಾಳೆ. ಇದರ ಫಲವಾಗಿ ಕಾದಂಬರಿಯೊಳಗೊಂದು ಕಾದಂಬರಿ ಹುಟ್ಟುತ್ತದೆ.

'ಆವರಣ'ವನ್ನು ಐತಿಹಾಸಿಕ ಕಾದಂಬರಿ ಎಂದು ಭೈರಪ್ಪ ನವರೇ ಹೇಳಿಕೊಂಡಿದ್ದಾರೆ. ಸಮಕಾಲೀನ ಪಾತ್ರಗಳು ಮತ್ತು ಸನ್ನಿವೇಶಗಳ ನಡುವೆ ಐತಿಹಾಸಿಕ ಕಾದಂಬರಿಯು ನಿರೂಪಿತ ಗೊಂಡಿರುವುದರಿಂದ ಲೇಖಕರ ಇವತ್ತಿನ ಆಲೋಚನೆಗಳು ಅಂತರ್ಗತವಾಗಿವೆ. ಇದು ತಪ್ಪಲ್ಲ, ಆದರೆ ಈ ಆಲೋಚನೆಗಳ ಸತ್ಯಾಸತ್ಯತೆ, ಪ್ರಸ್ತುತತೆ ಮತ್ತು ದೃಷ್ಟಿ ಧೋರಣೆಗಳು ಯಾವುವು, ಎಂತಹವು ಎಂಬ ಪ್ರಶ್ನೆ ಮುಖ್ಯವಾಗುತ್ತದೆ.

ಲಕ್ಷ್ಮಿಯು ಒಂದು ಸಭೆಯಲ್ಲಿ ಹೀಗೆ ಪ್ರತಿಪಾದಿಸುತ್ತಾಳೆ : 'ಐತಿಹಾಸಿಕ ವ್ಯಕ್ತಿಗಳನ್ನು ಪುನರ್ವಿನ್ಯಾಸಗೊಳಿಸುವ ಕೆಲಸವನ್ನು ರಾಜಕಾರಣಿಗಳು ಮಾಡಿಸುತ್ತಿದ್ದಾರೆ. ರಾಜಕೀಯ ಸಿದ್ಧಾಂತಗಳಂತೂ ಇವರ ಬೆನ್ನೆಲುಬಾಗಿವೆ. ಇತಿಹಾಸದ ಜವಾಬ್ದಾರಿಯಿಲ್ಲದ ಸಾಹಿತಿಗಳು ಅದಕ್ಕೆ ತಕ್ಕಂತೆ ಕಥೆ, ಕಾದಂಬರಿ, ನಾಟಕಗಳನ್ನು ಬರೆಯುತ್ತಲೇ ಇದ್ದಾರೆ' (ಪುಟ ೧೩೩). ಈ ಮಾತುಗಳು ಸ್ವತಃ ಸಂಘಪರಿವಾರದವರಿಗೆ ಮತ್ತು ಭೈರಪ್ಪನವರಿಗೆ ಅನ್ವಯಿಸುತ್ತವೆ. 'ಆವರಣ'ವೇ ನನ್ನ ಈ ಮಾತಿಗೆ ತಕ್ಕ ನಿದರ್ಶನವಾಗಿದೆ. ಇಡೀ ಕಾದಂಬರಿಯು ಔರಂಗಜೇಬನ ನೆಪದಲ್ಲಿ ಮುಸ್ಲಿಂ ಸಮುದಾಯದ ಬಗ್ಗೆ ತೀವ್ರ ಅಸಹನೆ ಹುಟ್ಟಿಸುತ್ತದೆ. ಅರೆಸತ್ಯಗಳನ್ನು ಪೂರ್ಣಸತ್ಯಗಳೆಂಬಂತೆ ಪ್ರತಿಪಾದಿಸುತ್ತದೆ; ಕಾದಂಬರಿಯ ಉದ್ದೇಶವೇ ಮುಸ್ಲಿಂ ವಿರೋಧಿ ಮನೋಧರ್ಮದಿಂದ ಪ್ರೇರಿತವಾಗಿದೆ. ಹೀಗಾಗಿ 'ಆವರಣ'ವು ಸಂಘ ಪರಿವಾರದ ಕರಪತ್ರವಾಗಿ ಮಾತ್ರ ಯಶಸ್ವಿಯಾಗುತ್ತದೆ, ಕಾದಂಬರಿಯಾಗಿ ಸೋಲುತ್ತದೆ. ಕಾದಂಬರಿಯ ಪಾತ್ರವಾದ ಲಕ್ಷ್ಮಿ ಎದುರಿಸುವ ಬಿಕ್ಕಟ್ಟು ಮತ್ತು ಕಂಡುಕೊಳ್ಳುವ ಪರಿಹಾರಗಳು ಸ್ವತಃ ಕಾದಂಬರಿಕಾರರವೇ ಆಗಿವೆ. ಲಕ್ಷ್ಮಿಯು ತಾನು ಬರೆಯುತ್ತಿರುವ ಕಾದಂಬರಿಯ ಬಗ್ಗೆ ಒಮ್ಮೆ ಹೀಗೆ ಯೋಚಿಸುತ್ತಾಳೆ : 'ತಾನು ಬರೆದ ಕಥಾ ನಿರೂಪಣೆಗೆ ಇನ್ನಷ್ಟು ಕಲಾತ್ಮಕತೆಯನ್ನು ಕೊಡಹೊರಟರೆ ಇತಿಹಾಸದ ವಾಸ್ತವತೆ ತೆಳುವಾಗುತ್ತದೆ. ಇತಿಹಾಸದ ವಾಸ್ತವತೆಯನ್ನು ಘನಿಷ್ಠವಾಗಿ ಉಳಿಸಿಕೊಳ್ಳಬೇಕೆಂದರೆ ಕಲಾತ್ಮಕತೆಯ ಹಂಬಲವನ್ನು ಕೈಬಿಡಬೇಕು' (ಪುಟ ೧೩೮). ಈ ದ್ವಂದ್ವ ಸ್ವತಃ ಭೈರಪ್ಪನವರದೂ ಆಗಿರುವಂತಿದೆ ಮತ್ತು ಈ ಚಿಂತನೆಯೇ ತೆಳುವಾದ ತಳಹದಿಯ ಮೇಲೆ ನಿಂತಿದೆ. ಇತಿಹಾಸದ ವಾಸ್ತವತೆಯನ್ನು ವಿವಿಧ ಕಲಾತ್ಮಕ ಸಾಧ್ಯತೆಯ ಮೂಲಕ – ರೂಪಕಾತ್ಮಕವಾಗಿ, ಧ್ವನ್ಯಾತ್ಮಕ ನೆಲೆಯಲ್ಲಿ – ನಿರೂಪಿಸುವುದು ಉತ್ತಮ ಕಾದಂಬರಿಕಾರರಿಗೆ ಸಾಧ್ಯವಾಗುತ್ತದೆ. ಇತಿಹಾಸದ ವಾಸ್ತವತೆ ಯೆಂದರೆ ಪ್ರತಿಸಾಲನ್ನು ಹಾಗೆಯೇ ಉಲ್ಲೇಖಿಸುವುದಲ್ಲ; ವ್ಯಾಖ್ಯಾನ, ಪುನರ್‌ವ್ಯಾಖ್ಯಾನ ಗಳಿಂದ ಇತಿಹಾಸದ ವಾಸ್ತವತೆಯು ಸಮಕಾಲೀನ ಪ್ರಜ್ಞೆಯಲ್ಲಿ ಪ್ರತಿಫಲಿಸುತ್ತ ಸ್ವೋಪಜ್ಞ ಕಲಾಕಾರನ ಕೈಯಲ್ಲಿ ಕಲಾತ್ಮಕವಾಗಲು ಸಾಧ್ಯ. 'ಆವರಣ'ದಲ್ಲಿ ಇದು ಸಾಧ್ಯವಾಗಿಲ್ಲದಿರುವುದು ಏಕಕಾಲಕ್ಕೆ ಕಲಾತ್ಮಕತೆ ಮತ್ತು ಇತಿಹಾಸದ ವಾಸ್ತವತೆಗಳ ಕೊರತೆ ಎದ್ದು ಕಾಣುತ್ತದೆ.

ಔರಂಗಜೇಬನು ಕಾಶಿಯ ವಿಶ್ವನಾಥ ದೇವಾಲಯವನ್ನು ಧ್ವಂಸ ಮಾಡಿಸಿದ ಎಂದು ನಂಬಿದರೂ ಅದಕ್ಕಾಗಿ ಇಡೀ ಮುಸ್ಲಿಂ ಸಮುದಾಯದ ಬಗ್ಗೆ ದ್ವೇಷ ಸಾಧಿಸಬೇಕಾಗಿಲ್ಲ. ಹನ್ನೊಂದನೇ ಶತಮಾನದಲ್ಲಿ ಕಾಶ್ಮೀರದ ರಾಜ ಹರ್ಷನು ವ್ಯವಸ್ಥಿತವಾಗಿ ದೇವಾಲಯಗಳ ನಾಶ ಮತ್ತು ವಿಗ್ರಹಭಂಜಕ ಕೆಲಸಗಳನ್ನು ನಡೆಸಲು 'ದೇವೋತ್ಪಾಟನ ನಾಯಕ' ಎಂಬ ವಿಶೇಷಾಧಿಕಾರಿಯನ್ನು ನೇಮಿಸಿಕೊಂಡಿದ್ದನೆಂದು ಕವಿ ಕಲ್ಹಣನ 'ರಾಜತರಂಗಿಣಿ'ಯು ಉಲ್ಲೇಖಿಸುತ್ತದೆ. ನಾವು ಎಲ್ಲ ಹಿಂದೂ ರಾಜರನ್ನು ಮತ್ತು ಹಿಂದೂ ಧರ್ಮೀಯರನ್ನು ದ್ವೇಷಿಸಬಹುದೆ ? ಇಂಥ ಕೃತ್ಯಗಳ ಹಿಂದೆ ರಾಜತ್ವದ ರಾಜಕೀಯದ ಪಾಲು ಎಷ್ಟು – ಮತಾಂಧತೆಯ ಪಾಲು ಎಷ್ಟು ಎಂದು ವಿಶ್ಲೇಷಿಸುವ ಅಗತ್ಯವೂ ಇದೆ. ಇಲ್ಲದಿದ್ದರೆ ನಮ್ಮ ಚರ್ಚೆಗೆ ಅಗತ್ಯ ಸಮಗ್ರತೆ ಲಭ್ಯವಾಗುವುದಿಲ್ಲ. ಹಿಂದೂ ರಾಜರಲ್ಲಿ ಉತ್ತಮರೂ ಮತ್ತು ಕೆಟ್ಟವರೂ ಇದ್ದಂತೆ ಮುಸ್ಲಿಂ ರಾಜರಲ್ಲೂ ಇದ್ದಾರೆ. ಮೂಲತಃ ಇವರೆಲ್ಲ ಪ್ರಜಾಪ್ರಭುತ್ವದ ಪ್ರಜೆಗಳು; ರಾಜಕಾರಣದ ರಾಜರು; ಅನಂತರ ನಿರ್ದಿಷ್ಟ ಧರ್ಮೀಯರು.

ಭೈರಪ್ಪನವರು ತಮ್ಮ ತಿಳಿವಳಿಕೆ ಮತ್ತು ನಿಲುವುಗಳನ್ನು ಪ್ರತಿಪಾದಿಸಲು ಸಮರ್ಥ ಪ್ರತಿನಾಯಕರನ್ನೂ ಸೃಷ್ಟಿಸಿಕೊಳ್ಳು ವುದಿಲ್ಲ. ಯಾವುದೇ ನಿಲುವು ತನಗೆ ವಿರುದ್ಧವಾದ ನೆಲೆ ಗಳೊಂದಿಗೆ ಮುಖಾಮುಖಿಯಾಗಿ ಸಂವಾದಿಸಿ, ಹೊಸ ಬೆಳಕಿನಲ್ಲಿ ಹೊರಬಂದಾಗ 'ಸತ್ಯ'ವಾಗುತ್ತದೆ. ತನ್ನ ಕಾದಂಬರಿಯಲ್ಲಿ ಸತ್ಯಾನ್ವೇಷಣೆ ಮಾಡುತ್ತಿದ್ದೇನೆಂದು ಹೇಳಿಕೊಳ್ಳುವ ಭೈರಪ್ಪನವರು ಸೃಷ್ಟಿಸುವ 'ಅಪ್ಪಟ ಗಾಂಧಿವಾದಿ'ಯ ಪಾತ್ರವು ಸಂಘಪರಿವಾರದ ನೇತಾರನಂತಿದೆ. ಲಕ್ಷ್ಮಿಯ ತಂದೆ 'ಅಪ್ಪಟ' ಗಾಂಧಿವಾದಿ. ತನ್ನ ಮಗಳು ಮುಸ್ಲಿಮನನ್ನು ಮದುವೆಯಾಗಹೊರಟಾಗ 'ನಿನ್ನ ಹೊಟ್ಟೇಲಿ ಹುಟ್ಟುವ ಮಗುವೋ ಅದರ ಮಗುವೋ, ಯಾವುದೋ ಒಂದು ತಲೆಮಾರಿನ ಘುಗುವು ನಮ್ಮ ದೇವಸ್ಥಾನವನ್ನು ಒಡೆದು ನಾಶ ಮಾಡುತ್ತೆ. ಅದರ ಪಾಪ ನಿನಗೆ ತಟ್ಟುತ್ತೆ' (ಪುಟ ೧೯) ಎಂದು ಹೇಳುತ್ತಾನೆ. ಗಾಂಧಿ ಹೆಸರು ಹೇಳುತ್ತಲೇ

೨೭ನೇ ಪುಟಕ್ಕೆ

**ಒಂದನೇ ತರಗತಿಯಿಂದ ಭಾಷೆಯಾಗಿ ಇಂಗ್ಲಿಷ್ ಕಲಿಕೆ ಆರಂಭ**




'ಮಮ್ಮಿಯಮ್ಮ' ಮನೆಯಲ್ಲಿ ಪಾಠ ಹೇಳಿಕೊಡ್ತಾರೆ...!
'ಡ್ಯಾಡಿಯಪ್ಪ' ಶಾಲೆಗೆ ಕರೆದುಕೊಂಡು ಬರ್ತಾರೆ...!

ಸಾಂಸ್ಕೃತಿಕ ಕ್ಷೇತ್ರದ ಒಬ್ಬ ಮಹತ್ವದ ವ್ಯಕ್ತಿ ಲೋಕದಿಂದ ಕಣ್ಮರೆಯಾದ ಕಾಲು ಶತಮಾನದ ನಂತರ ಆತನನ್ನು ಅನೇಕರು ಮರೆತುಬಿಡುತ್ತಾರೆ. ಸಾಹಿತ್ಯ ಮತ್ತು ಇತರ ಕ್ಷೇತ್ರಗಳಲ್ಲಿ ಮಡಿದ ಅನೇಕರನ್ನು 'ಜನ ಇಷ್ಟು ಬೇಗ ಇವರನ್ನು ಮರೆತಿದ್ದಾರೆಯೇ ?' ಎನ್ನುವ ಪ್ರಶ್ನೆಗಳು ಅನೇಕರ ಬಾಯಿಂದ ಕೇಳುವದನ್ನು ನಾವು ನೋಡಿದ್ದೇವೆ. ಅಂತಹ ಪ್ರಶ್ನೆ ಎದುರಾದಾಗ ಒಂದೆರಡು ಕಡೆ ವಿಚಾರ ಸಂಕಿರಣಗಳು ನಡೆಯುವದುಂಟು. ಆದರೆ ಡಿ.ಎಲ್.ಎನ್. ವಿಷಯದಲ್ಲಿ ಹಾಗಾಗಲಿಲ್ಲ ಎನ್ನುವದು ಗಮನಾರ್ಹ. ಡಿ.ಎಲ್.ಎನ್. ಅವರು ಸಂಪಾದಿಸಿದ ಕೃತಿಗಳಲ್ಲಿ ಅವರೇ ಬರೆದ 'ಗ್ರಂಥ ಸಂಪಾದನೆ'ಯನ್ನು ವಿದ್ವಾಂಸರು ಒಂದಲ್ಲ ಒಂದು ಸಂದರ್ಭಗಳಲ್ಲಿ ಉಪಯೋಗಿಸುತ್ತಿದ್ದಾರೆ. ಸಂಪಾದಿಸಿದ ಕೃತಿಗಳನ್ನು ಪರಿಷ್ಕರಿಸುವಾಗ 'ಗ್ರಂಥ ಸಂಪಾದನೆ'ಯ ಅಗತ್ಯ ಬಿದ್ದೇಬೀಳುತ್ತದೆ. ಹಂಪಿ ಕನ್ನಡ ವಿಶ್ವವಿದ್ಯಾನಿಲಯದ ಒಬ್ಬ ವಿದ್ವಾಂಸರು ಗ್ರಂಥ ಸಂಪಾದನೆಯಲ್ಲಿ ಅನುಸರಿಸಬೇಕಾದ ಮಾರ್ಗವನ್ನು 'ಡಿ.ಎಲ್.ಎನ್. ಮಾರ್ಗ' ಎಂದೇ ಹೆಸರಿಸಿದ್ದಾರೆ. ಗ್ರಂಥ ಸಂಪಾದನೆಗೆ ಸಂಬಂಧಿಸಿದಂತೆ ಡಿ.ಎಲ್.ಎನ್. ಅವರನ್ನು ಮಾತ್ರ ಹೆಸರಿಸುವದು ಗಮನಾರ್ಹ. ನಾಲ್ಕು ಶತಮಾನ ಕಳೆದರೂ ಡಿ.ಎಲ್.ಎನ್. ಜೀವಂತವಾಗಿರುತ್ತಾರೆ.



# ಡಿ.ಎಲ್. ಎನ್. 'ಸಹ'ವಾಸ

ದಿನವೂ ಬೆಳಿಗ್ಗೆ ವಾಕ್ ಹೋಗುವ ಅಭ್ಯಾಸ ಇಟ್ಟುಕೊಂಡಿದ್ದೇನೆ. ಹಾಗೆ ಹೋಗುವಾಗ ಬರುವಾಗ ಹುಡುಗರು ಹುಡುಗಿಯರು ಮೊಬೈಲ್‌ನಲ್ಲಿ ಮಾತನಾಡುತ್ತಿರುತ್ತಾರೆ. ಹಾಗೆ ಮಾತನಾಡುವವರನ್ನೆಲ್ಲ ನೋಡಿದಾಗ ಕರುಳು ಕಿವುಚಿದಂತಾಗುತ್ತದೆ. ಅಸೂಯೆಯಿಂದ ಹಾಗಾಗುವುದಿಲ್ಲ. ನಾನು ಓದುವ ಕಾಲದಲ್ಲಿ ಮೊಬೈಲ್ ಇದ್ದಿದ್ದರೆ, ನನ್ನ ಗುರುಗಳಾದ ಡಿ.ಎಲ್.ಎನ್. ಅವರ ಜೊತೆ ಎಷ್ಟು ಬೇಕಾದರೂ ಮಾತನಾಡಬಹುದಿತ್ತಲ್ಲ ಅನಿಸುತ್ತದೆ. ಓದು ಮುಗಿದಾಗಲೂ ಡಿ.ಎಲ್.ಎನ್. ಅವರ ಜೊತೆ ಮಾತನಾಡಲು ಮೈಸೂರಿಗೆ ಹೋಗಬೇಕಾಗಿತ್ತು ಅಥವಾ ಗುರುಗಳು ಬೆಂಗಳೂರಿಗೆ ಬರುವುದನ್ನೇ ಕಾಯುತ್ತಿದ್ದೆ. ಅವರು ಬಂದಾಗ ಬಸವನಗುಡಿಯ ಅವರ ಭಾವನ ಮನೆಯಲ್ಲಿ ತಂಗುತ್ತಿದ್ದರು. ಅವರನ್ನು ನೋಡಲು ಅಲ್ಲಿಗೆ ಓಡಿಹೋಗುತ್ತಿದ್ದೆ.

ಗುರುಗಳನ್ನು ನೋಡಲು, ಮಾತನಾಡಲು ನಾನು ಹೋಗುತ್ತಿದ್ದುದು ಯಾವುದೇ ವಿದ್ವತ್ ಸಮಸ್ಯೆಯನ್ನು ಚರ್ಚಿಸುವದಕ್ಕಲ್ಲ. ಯಾವುದಾದರೂ ಖುಷಿಯ ವಿಚಾರ ವಿದ್ದರೆ ನಗುತ್ತ ಅವರಿಗೆ ಹೇಳುತ್ತಿದ್ದೆ, ಬೇಸರವಾಗಿದ್ದರೆ ಅವರ ಎದುರಿಗೆ ಅಳುತ್ತಿದ್ದೆ. ಈ ಅಳುವಿಗೆ ಕೊನೆ ಮೊದಲು ಇರುತ್ತಿರಲಿಲ್ಲ. ನಾನು ಅಳು ನಿಲ್ಲಿಸುವವರೆಗೆ ಗುರುಗಳು ಏನನ್ನೂ ಮಾತನಾಡುತ್ತಿರಲಿಲ್ಲ. ಅಳು ನಿಂತ ಮೇಲೆ 'ಏನು ?' ಎಂದು ಕೇಳಿ ಸಮಾಧಾನಪಡಿಸುತ್ತಿದ್ದರು. ಅವರ ಬಳಿ ಇದ್ದಾಗ ನಾನು ಮಗುವಾಗಿರುತ್ತಿದ್ದೆ.

ನನ್ನ ಮತ್ತು ಗುರುಗಳ ಆತ್ಮೀಯತೆ ಹೇಗೆ, ಏಕೆ ಉಂಟಾಯಿತೆಂದು ಇಂದಿಗೂ ನನಗೆ ತಿಳಿಯದು. ಮೈಸೂರು ಬಿಡುವವರೆಗೆ ಗುರುಗಳನ್ನು ನೋಡದ ಒಂದು ದಿನವೂ ಇಲ್ಲ. ಬೆಳಿಗ್ಗೆ ಏಳೂವರೆಗೆ ಗುರುಗಳು ನನ್ನ ರೂಮಿಗೆ ಬರುತ್ತಿದ್ದರು. ನನ್ನ ರೂಮಿನ ಪಕ್ಕ ಒಂದು ಚಿಕ್ಕ ಅಂಗಡಿ ಇತ್ತು, ಅಲ್ಲಿ ನಶ್ಯ ಕೊಂಡುಕೊಳ್ಳುವ ನೆಪ, ಅಷ್ಟೆ.

ನಶ್ಯ ಕೊಂಡಮೇಲೆ 'ಸಿಗರೇಟ್ ಎಷ್ಟು ಬೇಕಯ್ಯ ?' ಎಂದು ನಗುತ್ತ ಕೇಳುತ್ತಿದ್ದರು. 'ಬೇಡ ಸರ್' ಎಂದು ನಾನು ಹೇಳಿದರೆ 'ಯಾಕೆ, ಸಿಗರೇಟ್ ಸೇದುವದನ್ನು ಬಿಟ್ಟು ಬಿಟ್ಟೆಯಾ ?' ಎಂದು ರೇಗಿಸುತ್ತಿದ್ದರು. ಗುರುಗಳ ಬಳಿ ಯಾವದೇ ಕಾರಣಕ್ಕೆ ಸುಳ್ಳು ಹೇಳಿದವನಲ್ಲ. 'ಬಿಟ್ಟಿಲ್ಲ ಸರ್, ಆದರೆ ನಿಮ್ಮ ಹತ್ತಿರ ತೆಗೆದುಕೊಳ್ಳುವದು ಮಹಾಪಾಪ, ನನಗೆ ಬೇಕಾದಾಗ ನಾನೇ ಕೊಂಡುಕೊಳ್ಳುತ್ತೇನೆ' ಎನ್ನುತ್ತಿದ್ದೆ. ಈ ಸಂಭಾಷಣೆ ಲೆಕ್ಕವಿಲ್ಲದಷ್ಟು ಬಾರಿ ನಡೆದಿದೆ.

ಅಂಗಡಿಯಿಂದ ಮುಂದಕ್ಕೆ ಹೊರಟಾಗ ಜೊತೆಯಲ್ಲಿ ನಾನೂ ಹೆಜ್ಜೆ ಹಾಕುತ್ತಿದ್ದೆ. ಅವರು ಬಾ ಎನ್ನುತ್ತಿರಲಿಲ್ಲ. 'ಬರ್ತೀನಿ ಸರ್' ಎಂದು ನಾನೂ ಹೇಳುತ್ತಿರಲಿಲ್ಲ. ಸಹಜವಾಗಿ ನಡೆಯುತ್ತಿತ್ತು.

ಮೈಸೂರಿನ ಚಾಮರಾಜಪುರಂ ರೈಲು ನಿಲ್ದಾಣದ ಒಂದು ಪಕ್ಕದಲ್ಲಿ ಅವರ ಮನೆಯಿತ್ತು. ಇನ್ನೊಂದು ಪಾರ್ಶ್ವದಲ್ಲಿ ನನ್ನ ರೂಮ್ ಇತ್ತು. ಒಂದೂವರೆ ಫರ್ಲಾಂಗ್ ಅಂತರ ಅಷ್ಟೆ. ಮನೆ ಮುಟ್ಟಿದ ತಕ್ಷಣ ಗುರುಗಳು, 'ಪ್ರಭಾ, ವೈಕುಂಠರಾಜು ಬಂದಿದಾನೆ' ಎನ್ನುತ್ತಿದ್ದರು. ಎಂದರೆ ನನಗೆ ತಿಂಡಿ ತಂದುಕೊಡಬೇಕು ಎಂದರ್ಥ. ದೋಸೆ, ಇಡ್ಲಿ, ಉಪ್ಪಿಟ್ಟು, ಆದರೆ ಗುರುಗಳು ಏನನ್ನೂ ಕೇಳುತ್ತಿರಲಿಲ್ಲ. ಒಂದೊಂದು ದಿನ 'ರಾಗಿ ರೊಟ್ಟಿ ತಿನ್ನುವ ಅಭ್ಯಾಸ ಇದೆಯಾ ?' ಎಂದು ಕೇಳುತ್ತಿದ್ದರು, ನಾನು ಉತ್ತರ ಕೊಡುವಷ್ಟರಲ್ಲಿ ಪ್ರಭಾ ರೊಟ್ಟಿ ತಂದುಕೊಡುತ್ತಿದ್ದರು.

**ಡಾ॥ ಬಿ. ವಿ. ವೈಕುಂಠರಾಜು**

ನಾನು ತಿಂಡಿ ತಿನ್ನುವಾಗ ಗುರುಗಳು ಆರಾಮ ಕುರ್ಚಿಯಲ್ಲಿ ಕುಳಿತು ಒಂದಿಷ್ಟು ಹೊತ್ತು ಏನನ್ನಾದರೂ ಮಾತಾಡುತ್ತಿದ್ದರು. ಅಂತಹ ಸಂದರ್ಭದಲ್ಲಿ ಅವರು ಮುಗ್ಧರು ಎಂದು ನನಗೆ ಅರ್ಥವಾಗುತ್ತಿತ್ತು.

'ವೈಕುಂಠರಾಜು, ಸಂಸ್ಕೃತದ ಪ್ರಶ್ನೆಪತ್ರಿಕೆ ಔಟ್ ಆಗಿದೆಯಂತಲ್ಲ ?' ಎಂದು ಒಮ್ಮೆ ನನಗೆ ಕೇಳಿದರು. ಆಗ ನಾನು 'ಆಗಿತ್ತು ಸರ್' ಎಂದು ಹೇಳಿದೆ. 'ನಿನಗೂ ಪೇಪರ್ ಸಿಕ್ಕಿತ್ತಾ ?' ಎಂದು ಕೇಳಿದಾಗ 'ಸಿಕ್ಕಿತ್ತು ಸರ್' ಎಂದೆ. 'ಅಲ್ಲಯ್ಯ, ನಿಮಗೆ ಹುಡುಗರಿಗೆ ಪೇಪರ್ ಸಿಕ್ಕಿತು. ಆದರೆ ಹುಡುಗಿಯರಿಗೆ ಹೇಗೆ ಸಿಕ್ಕುತ್ತೆ ?' ಎಂದು ಗುರುಗಳು ಏನೂ ಅರ್ಥವಾಗದಿದ್ದ ರೀತಿಯಲ್ಲಿ ಕೇಳಿದರು. 'ಹುಡುಗಿಯರಿಗೆ ಹುಡುಗರು ಕೊಡ್ತಾರೆ ಸರ್. ಯಾಕೆ ಅಂತಾ ನಿಮಗೆ ಅರ್ಥವಾಗೊಲ್ವಾ ? ಹುಡುಗರು ಪೈಪೋಟಿಯಿಂದ ಹುಡುಗಿಯರಿಗೆ ಕೊಡ್ತಾರೆ, ಯಾಕೆಂದ್ರೆ Attraction ಇರುತ್ತಲ್ವಾ' ಎಂದೆ. ಅವರಿಗೆ ನಗು ತಡೆದುಕೊಳ್ಳಲಾಗಲಿಲ್ಲ, ಎರಡೂ ಕೈ ಚಪ್ಪಾಳೆ ತಟ್ಟುತ್ತಾ 'ಓ ಹೌದು, Attraction ಇರೊತ್ತಲ್ಲಾ' ಎಂದು ಎಷ್ಟು ಹೊತ್ತಾದರೂ ನಗುತ್ತಿದ್ದರು.

ಹುಡುಗರಿಗೆ ಪ್ರಶ್ನೆಪತ್ರಿಕೆ ಸಿಗುವದು ಸಹಜ, ಹೇಗಾದರೂ ಮಾಡಿ ಸಂಪಾದಿಸುತ್ತಾರೆ. ಆದರೆ

ಹುಡುಗಿಯರಿಗೆ ಹೇಗೆ ಸಿಕ್ಕುತ್ತದೆ ಎನ್ನುವುದು ಗುರುಗಳಿಗೆ ಬಿಡಿಸಲಾಗದ ಪ್ರಶ್ನೆಯಾಗಿತ್ತು. ನಾನು ಅವರಿಗೆ ಬಿಡಿಸಿ ಹೇಳಿದಾಗ ಬಾಯಿತುಂಬಾ ನಕ್ಕರು. ಇಂತಹ ಸರಳ ವಿಷಯವೂ ನನ್ನ ಗುರುಗಳಿಗೆ ಅರ್ಥವಾಗುವದಿಲ್ಲವೆ ? ಎಂದು ನನಗೆ ಆಶ್ಚರ್ಯವಾಯಿತು. ಆದರೆ ಗುರುಗಳು ತೀರಾ ಸರಳ ವಿಷಯಗಳನ್ನು ತಿಳಿದುಕೊಳ್ಳುವ ಗೋಜಿಗೇ ಹೋಗುತ್ತಿರಲಿಲ್ಲ. ವಿದ್ವತ್ ಸಮಸ್ಯೆಗಳನ್ನು ಬಿಡಿಸಲು ಅವರ ಮನಸ್ಸು ಸದಾ ಹೆಣಗುತ್ತಿತ್ತು.

ಈಗಿನ ಕಾಲದಲ್ಲಿ ಸಾಹಿತ್ಯ ಸಮ್ಮೇಳನದ ಅಧ್ಯಕ್ಷನಾಗಲು ಅನೇಕರು ಪೈಪೋಟಿ ನಡೆಸುತ್ತಿರುತ್ತಾರೆ. ಆದರೆ ೬೦ರ ದಶಕದಲ್ಲಿ ಕನ್ನಡಕ್ಕಾಗಿ ಮಡಿದ ಹಿರಿಯರೊಬ್ಬರನ್ನು'ಸದ್ದಿಲ್ಲದೆ ಅಧ್ಯಕ್ಷರನ್ನಾಗಿ ಆಯ್ಕೆ ಮಾಡಲಾಗುತ್ತಿತ್ತು. ೧೯೬೦ರಲ್ಲಿ ಬೀದರ್‌ನಲ್ಲಿ ನಡೆದ ೪೧ನೆಯ ಸಾಹಿತ್ಯ ಸಮ್ಮೇಳನಕ್ಕೆ ಪ್ರೊ|| ಡಿ.ಎಲ್.ಎನ್. ಅಧ್ಯಕ್ಷರಾಗಿದ್ದರು. ಅವರು ತಮ್ಮ ಭಾಷಣದಲ್ಲಿ ಸರಸ್ವತಿಯ ರಾಜ್ಯದಲ್ಲಿ ಜಾತೀಯತೆ, ಮತೀಯತೆಗಳಿಗೆ ಸ್ಥಾನವಿಲ್ಲವೆಂದು ಘೋಷಣೆ ಮಾಡಿದರು.



ಟಿವಿ ಸೈಜಿನ ಮೊಬೈಲ್ ಇದ್ರೆ ಕೊಡಿ...ನಮಗೆ ಸ್ಪಷ್ಟವಾಗಿ ಚಿತ್ರ ಕಾಣಿಸಬೇಕಲ್ರೀ...?!

ಸತ್ಯವನ್ನು ಹೇಳಲು ಗುರುಗಳು ಹಿಂಜರಿದವರೇ ಅಲ್ಲ. ಜಾತೀಯತೆ ಮತೀಯತೆಗಳನ್ನು ಅವರು ಪ್ರಸ್ತಾಪಿಸಲು ಒಂದು ಕಾರಣವಿದೆ. ಬೀದರ್‌ನಲ್ಲಿನ ಸಮ್ಮೇಳನ ನಡೆಯುವದಕ್ಕೆ ಮುಂಚೆ ಬಸವಕಲ್ಯಾಣದಲ್ಲಿ ೪೧ನೆಯ ಸಾಹಿತ್ಯ ಸಮ್ಮೇಳನವನ್ನು ನಡೆಸಬೇಕಾಗಿತ್ತು. ಆದರೆ ಕೆಲವು ವೀರಶೈವರು ಡಿ.ಎಲ್.ಎನ್. ವಿರುದ್ಧ ಪ್ರತಿಭಟಿಸಿದ್ದರಿಂದ ಸಮ್ಮೇಳನ ನಡೆಯುವದು ರದ್ದಾಯಿತು.

ಸೊನ್ನಲಿಗೆ ಸಿದ್ಧರಾಮನ ವಿಷಯವಾಗಿ ಬರೆಯುತ್ತಾ ಡಿ.ಎಲ್.ಎನ್. ಅವರು 'ಸಿದ್ಧರಾಮ ವೀರಶೈವನೆ ?' ಎನ್ನುವ ಬಗೆಗೆ ವಿವರವಾಗಿ ವಿವೇಚಿಸಿದರು. ನನ್ನ ಗುರುಗಳ ಪ್ರಕಾರ ಸಿದ್ಧರಾಮನಿಗೆ ವೀರಶೈವ ದೀಕ್ಷೆ ಆಗಿರಲಿಲ್ಲ ಎನ್ನುವದನ್ನು ದೃಷ್ಟಾಂತಗಳ ಸಮೇತ ವಿವರಿಸಿದರು. ಗುರುಗಳು ಹೀಗೆ ಹೇಳಿದ್ದು ಕೆಲವು ವೀರಶೈವರಿಗೆ ಕೋಪ ತರಿಸಿತು. ಅವರು ಅನೇಕ ಕಡೆ ಪ್ರತಿಭಟನೆಯನ್ನು ನಡೆಸಿದರು. ಬಸವಕಲ್ಯಾಣದಲ್ಲಿ ನಡೆಯಬೇಕಾಗಿದ್ದ ಸಾಹಿತ್ಯ ಸಮ್ಮೇಳನಕ್ಕೆ ಗುರುಗಳು ಅಧ್ಯಕ್ಷರಾಗುವದು ಈ ಜಾತಿಯ ಮುಖಂಡರಿಗೆ ಸಹ್ಯವಾಗಲಿಲ್ಲ.

ಆಗ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ಬಿ. ಶಿವಮೂರ್ತಿ ಶಾಸ್ತ್ರಿಗಳು ಸಾಹಿತ್ಯ ಸಮ್ಮೇಳನವಾಗುವಾಗ ಗಲಾಟೆಯಾಗುವದನ್ನು ತಪ್ಪಿಸಲು ಬಸವನಬಾಗೇವಾಡಿಯಲ್ಲಿ ಸಾಹಿತ್ಯ ಸಮ್ಮೇಳನ ನಡೆಯುವದನ್ನು ರದ್ದುಗೊಳಿಸಿದರು. ಅನಂತರ ಬೀದರ್‌ನಲ್ಲಿ ಸಮ್ಮೇಳನ ನಡೆಯುವದೆಂದು ಶಿವಮೂರ್ತಿ ಶಾಸ್ತ್ರಿಗಳೇ ಘೋಷಿಸಿದರು.

ಹೆಚ್ಚೂ ಕಡಿಮೆ ಅದೇ ಸಂದರ್ಭದಲ್ಲಿ ಮೈಸೂರಿನಲ್ಲಿ ಗುರುಗಳಿಗೆ 'ಉಪಾಯನ' ಅಭಿನಂದನ ಗ್ರಂಥವನ್ನು ಎಸ್. ಬಸವಾರಾಧ್ಯ ಮತ್ತಿತರರು ಸಮರ್ಪಿಸುವ ಸಮಾರಂಭವನ್ನು ವ್ಯವಸ್ಥೆ ಮಾಡಿದ್ದರು. ಆ ಕಾರ್ಯಕ್ರಮದಲ್ಲಿ ಭಾಗವಹಿಸಲು ಮೈಸೂರಿಗೆ ಬಂದಿದ್ದ ಶಿವಮೂರ್ತಿ ಶಾಸ್ತ್ರಿಗಳು ನನ್ನ ಜೊತೆ ಮಾತನಾಡುತ್ತ ಬೀದರ್‌ನಲ್ಲಿ ನಡೆಯುವ ಸಮ್ಮೇಳನಕ್ಕೆ ಡಿ.ಎಲ್.ಎನ್. ಅವರೇ ಅಧ್ಯಕ್ಷರು, ಇದನ್ನು ತಪ್ಪಿಸಲು ಯಾರಿಂದಲೂ ಸಾಧ್ಯವಿಲ್ಲ ಎಂದು ತಿಳಿಸಿದರು. ಶಿವಮೂರ್ತಿ ಶಾಸ್ತ್ರಿಗಳೂ ವೀರಶೈವರೇ. ಆದರೆ ಅವರು ಅಂಧಾಭಿಮಾನಿಗಳಲ್ಲ. ಸಾಲದ್ದಕ್ಕೆ ಡಿ.ಎಲ್.ಎನ್. ಅವರ ಮೇಲೆ ತುಂಬಾ ಗೌರವ ಮತ್ತು ವಿಶ್ವಾಸಗಳಿದ್ದವು.

ಬೀದರ್ ಸಮ್ಮೇಳನ ನಡೆಯುವದಕ್ಕೆ ಕೆಲವೇ ದಿನಗಳ ಮುಂಚೆ ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಒಂದು ಅಭಿನಂದನಾ ಸಮಾರಂಭವನ್ನು ವ್ಯವಸ್ಥೆ ಮಾಡಿದ್ದೆವು. ಮಹಾರಾಜ ಕಾಲೇಜಿನ ಪ್ರಿನ್ಸಿಪಾಲ್ ಪ್ರೊ|| ಸಿ.ಡಿ.ಎನ್. ಅವರು ಅಭಿನಂದನಾ ಸಮಿತಿಗೆ ಅಧ್ಯಕ್ಷರು. ನಾನೇ ಕಾರ್ಯದರ್ಶಿ. ಸಮಾರಂಭದ ದಿನ ಇಡೀ ಕಾಲೇಜನ್ನು ತಳಿರು ತೋರಣಗಳಿಂದ ಶೃಂಗರಿಸಿದ್ದೆವು. ಸಮಾರಂಭ ಪ್ರಾರಂಭವಾಗುವ ವೇಳೆಗೆ ಮಹಾರಾಜ ಕಾಲೇಜಿನ ಒಳಾಂಗಣವಲ್ಲದೆ, ಎಲ್ಲ ಕಡೆ ಜನರು ಅಪಾರ ಸಂಖ್ಯೆಯಲ್ಲಿ ಸೇರಿದ್ದರು. ಇತರ ಕಾಲೇಜುಗಳಿಂದಲೂ ವಿದ್ಯಾರ್ಥಿಗಳು ಬಂದಿದ್ದರು.

ಗುರುಗಳಿಗೆ ಹಾರ ಹಾಕಬೇಕೆಂದು ನಾವು ಯಾರಿಗೂ ವಿನಂತಿಸಿಕೊಂಡಿರಲಿಲ್ಲ. ಆದರೆ ಎಲ್ಲ ಅಧ್ಯಾಪಕರು, ವಿದ್ಯಾರ್ಥಿಗಳ ಗುಂಪುಗಳು ತಾವಾಗಿಯೇ ಹಾರ ತಂದು ಗುರುಗಳಿಗೆ ಸಮರ್ಪಿಸಿದರು. ಇದರಿಂದಾಗಿ ಗುರುಗಳು ಹಾರಗಳಲ್ಲಿ ಮುಳುಗಿ ಹೋದರು. ಈ ಲೇಖನದ ಜೊತೆಗೆ ಪ್ರಕಟವಾಗಿರುವ ಎರಡು ಚಿತ್ರಗಳನ್ನು ಗಮನಿಸಿ. ಹಾರಗಳನ್ನು ತೆಗೆದು ಮೇಜಿನ ಮೇಲೆ ರಾಶಿ ಹಾಕಿದಾಗ ಕಾರ್ಯಕ್ರಮದ ಅತಿಥಿಗಳ ಮುಖ ಕಾಣದಂತಾಯಿತು. ಕೊನೆಗೆ ಗುರುಗಳ ಕೊರಳಲ್ಲಿ ಉಳಿದದ್ದು ಒಂದು ಮಲ್ಲಿಗೆಯ ಹಾರ ಮಾತ್ರ (ಅದನ್ನು ನಾನೇ ತಂದದ್ದು). ಈಗಲೂ ಆ ಚಿತ್ರವನ್ನು ನೋಡುತ್ತಿದ್ದರೆ ಮಲ್ಲಿಗೆಯ ಸುವಾಸನೆ ನನ್ನ ಮೂಗಿಗೆ ಹೊಡೆಯುತ್ತದೆ.

ಬೀದರ್‌ಗೆ ಹೊರಡುವ ದಿನ ಕೆಲವು ಗೆಳೆಯರ ಜೊತೆ ರೈಲು ನಿಲ್ದಾಣಕ್ಕೆ ಹೋಗಿ ಗುರುಗಳನ್ನು ಬೋಗಿಯಲ್ಲಿ ಕೂರಿಸಿದೆವು. ರೈಲು ಹೊರಟ ಮೇಲೆ ನಾವು ಹಿಂದಕ್ಕೆ ಬಂದದ್ದು. ಈ ಸಂದರ್ಭದಲ್ಲಿ ಒಂದು ಘಟನೆ ನಡೆಯಿತು.

ಆಂಧ್ರದ ಪ್ರಸಿದ್ಧ ರಾಜಕಾರಣಿ ಎನ್. ಜಿ. ರಂಗಾ ಅವರು ಇನ್ನೊಂದು ಬೋಗಿಯಲ್ಲಿ ಕುಳಿತಿದ್ದರು. ಅವರ ಫೋಟೋಗಳು ಪತ್ರಿಕೆಯಲ್ಲಿ ಪ್ರಕಟವಾಗುತ್ತಿದ್ದನ್ನು ಗಮನಿಸಿದ್ದ ನಾನು ಅವರಿಗೆ ನನ್ನ ಗುರುತು ಹೇಳಿದೆ. ನನ್ನ ಹೆಸರು ಹೇಳಿದ ತಕ್ಷಣ 'ನೀನು ತೆಲಗಿನವನಲ್ಲವೇನಯ್ಯ ? ಇಲ್ಲೇಕಿದ್ದೀಯಾ ಆಂಧ್ರಕ್ಕೆ ಬಂದುಬಿಡು' ಎಂದು ತಮಾಷೆ ಮಾಡಿದರು. 'ನಾನು ಆಂಧ್ರಕ್ಕೆ ಬರುವದಿಲ್ಲ. ಈಗ ನೀವು ರೈಲಿನಿಂದ ಇಳಿದು ಬಂದು ನನ್ನ ಗುರುಗಳನ್ನು ಮಾತನಾಡಿಸಬೇಕು' ಎಂದೆ. ರಂಗಾ ಅವರು ಒಂದು ಕ್ಷಣವೂ ತಡಮಾಡದೆ ಬಂದು ಗುರುಗಳನ್ನು ಮಾತನಾಡಿಸಿದರು.

ಬೀದರ್‌ನಿಂದ ಹಿಂತಿರುಗಿದ ಮೇಲೆ ಗುರುಗಳ ಮನೆಗೆ ಹೋಗಿ ಅವರನ್ನು ಮಾತನಾಡಿಸಿದೆ. 'ಸಮ್ಮೇಳನ ಹೇಗಿತ್ತು ಸರ್ ?' ಎಂದು ನಾನು ಕೇಳಿದಾಗ, 'ಸಮ್ಮೇಳನ ವಿರಲಿ, ಒಂದು ವಾರ ಪೂರ್ತಿ ವ್ಯರ್ಥವಾಯಿತಲ್ಲಯ್ಯ' ಎಂದು ಬೇಸರಪಟ್ಟುಕೊಂಡರು. ಇನ್ನೊಬ್ಬರಿಂದ ಇಂತಹ ಮಾತುಗಳನ್ನು ಕೇಳಲು ಸಾಧ್ಯವಿತ್ತೆ? ಗುರುಗಳು ಒಂದು ನಿಮಿಷವೂ ವ್ಯರ್ಥ ಮಾಡಿದವರಲ್ಲ. ಯಾವುದೋ ಸಂಶೋಧನೆಯ ಸಮಸ್ಯೆಯನ್ನು ಬಿಡಿಸಬಹುದಾಗಿತ್ತಲ್ಲ ಎನ್ನುವುದು ಅವರ ಕೊರಗು.

ಟಿ. ಎಸ್. ವೆಂಕಣ್ಣಯ್ಯನವರು ಮತ್ತು ಎ. ಆರ್. ಕೃಷ್ಣಶಾಸ್ತ್ರಿಗಳು ಬೆನ್ನುತಟ್ಟಿ ಪ್ರೋತ್ಸಾಹಿಸದಿದ್ದರೆ ಕುವೆಂಪು ಅವರ ಪ್ರಜ್ವಲ ಪ್ರತಿಭೆ ಈ ಪ್ರಮಾಣದಲ್ಲಿ ಬೆಳೆಯುತ್ತಿತ್ತೊ ಇಲ್ಲವೊ. ಆದರೆ ಎಲ್ಲರೂ ಈ ರೀತಿ ಜಾತಿಯಿಂದ ಮುಕ್ತರಾಗಿರಲಿಲ್ಲ. ನಾನು ವಿದ್ಯಾರ್ಥಿಯಾಗಿದ್ದಾಗ ಬಹುತೇಕ ಬ್ರಾಹ್ಮಣ ಅಧ್ಯಾಪಕರು ತಮ್ಮ ಜಾತಿಯವರನ್ನೇ ಪ್ರೋತ್ಸಾಹಿಸುತ್ತಿದ್ದರು. ನಮ್ಮ ಎಂ.ಎ. ತಂಡದಲ್ಲಿ ಪ್ರಥಮ ರ್‍ಯಾಂಕ್ ಗಳಿಸಿದ ವಿದ್ಯಾರ್ಥಿ ಹೊಯ್ಸಳ ಕರ್ನಾಟಕದವನು. ಅಂದಹಾಗೆ ತೀ.ನಂ.ಶ್ರೀ. ಅವರು ಹೊಯ್ಸಳ ಕರ್ನಾಟಕದವರಾಗಿದ್ದು 'ಆಕಸ್ಮಿಕವೆ ?'

ಡಿ.ಎಲ್.ಎನ್. ಅವರು ನನ್ನನ್ನು ತೀರಾ ಹತ್ತಿರ ಸೆಳೆದುಕೊಂಡರು. ನಾನು ಬ್ರಾಹ್ಮಣನಲ್ಲ ಎಂದು ತಿಳಿದಿದ್ದರೂ ನನ್ನ ಮೇಲೆ ಪ್ರೀತಿಯ ಹೊಳೆಯನ್ನೇ ಹರಿಸಿದರು. ಯಾವಾಗಲಾದರೊಮ್ಮೆ ನೂರು ರೂಪಾಯಿಯ ನೋಟನ್ನು ನನ್ನ ಜೇಬಿಗೆ ತುರುಕುತ್ತಿದ್ದರು. ನಾನು ಬೇಡ ಬೇಡ ಎಂದರೂ ಅವರು ಕೇಳುತ್ತಿರಲಿಲ್ಲ.

ತುಮಕೂರಿನ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ ನಾನು ಅಧ್ಯಾಪಕನಾಗಿ ನೇಮಕಗೊಂಡಾಗ ಗುರುಗಳಿಗೆ ಈ ವಿಷಯ ತಿಳಿಸಲು ಓಡಿಹೋದೆ. ಅವರು ನೂರು ರೂಪಾಯಿ ಕೊಟ್ಟು 'ಚಾರ್ಜಿಗೆ ಇಟ್ಟುಕೊ' ಎಂದು ಹೇಳಿ ಹರಸಿ ಕಳಿಸಿದರು. ಮಾರನೇ ದಿನ ನಾನು ಕಾಲೇಜಿಗೆ ಹೋಗಿ ರಿಪೋರ್ಟ್ ಮಾಡಿಕೊಂಡು ಬರುವ ವೇಳೆಗೆ ನನಗಾಗಿ ಒಂದು ಪತ್ರ ಕಾದಿತ್ತು. ನೋಡಿದರೆ ಪತ್ರ ಬರೆದಿರುವದು ನನ್ನ ಗುರುಗಳು.

'ನೀನು ತರಗತಿಗೆ ಹೋಗುವ ಮುಂಚೆ ಚೆನ್ನಾಗಿ ಸಿದ್ಧತೆ ಮಾಡಿಕೊಂಡು ಹೋಗು, ವಿದ್ಯಾರ್ಥಿಗಳು ಯಾವದಾದರೂ ಪ್ರಶ್ನೆ ಕೇಳಿದರೆ ನಿನಗೆ ತಿಳಿದಿದ್ದರೆ ಹೇಳು, ಇಲ್ಲದಿದ್ದರೆ 'ನೋಡಿಕೊಂಡು ಬರುತ್ತೇನೆ' ಅಂತ ಹೇಳು. ವಿಷಯವನ್ನು ತಿಳಿದುಕೊಂಡ ಮೇಲೆ ಅವಕಾಶ ಸಿಕ್ಕಾಗ ಆ ತರಗತಿಯಲ್ಲಿ ಹೇಳು' ಎಂದು ಬರೆದಿದ್ದರು.

'ನಿಮಗೆ ಯಾವುದಾದರೂ ಶಬ್ದದ ಅರ್ಥ ತಿಳಿಯದಿದ್ದರೆ ಲಭ್ಯವಿರುವ ಎಲ್ಲ ನಿಘಂಟುಗಳನ್ನು ನೋಡಿ, ಯಾವುದೇ ನಿಘಂಟಿನಲ್ಲಿ ಅರ್ಥ ಇಲ್ಲದಿದ್ದರೆ, ನೀವು ಹೋಗಿ ಡಿ.ಎಲ್.ಎನ್. ಅವರನ್ನು ಕೇಳಿ, ಅವರೂ 'ಗೊತ್ತಿಲ್ಲ' ಎಂದರೆ ಆ ಶಬ್ದದ ಅರ್ಥ ಯಾರಿಗೂ ತಿಳಿಯದು ಎಂದರ್ಥ' ಎಂದು ತೀ.ನಂ.ಶ್ರೀಕಂಠಯ್ಯನವರು ಬರೆದಿದ್ದರು. ಆದರೂ ನನಗೆ ನಮ್ಮ ಗುರುಗಳ ವಿದ್ವತ್ ಸಂಪತ್ತನ್ನು ಸರಿಯಾಗಿ ಅರ್ಥಮಾಡಿಕೊಂಡಿಲ್ಲ ಅನಿಸುತ್ತದೆ. ಅವರನ್ನು ಅರ್ಥಮಾಡಿಕೊಳ್ಳಲು ಸಹಾಯವಾಗುವಂತಹ ಒಂದು ಘಟನೆ :

ಎಂ.ಎ. ಪರೀಕ್ಷೆಗೆ ಸಾಕಷ್ಟು ಸಮಯವಿತ್ತು. ಆಗ ಗುರುಗಳ ಬಿಡಿ ಬರಹಗಳನ್ನು ಸೇರಿಸಿ ಒಂದು ಸಂಪುಟವನ್ನೇಕೆ ಮಾಡಬಾರದು ಎನಿಸಿತು. ಅವರ ಲೇಖನಗಳು ಅನೇಕ

ಸಾಹಿತ್ಯ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದರಿಂದ ಹುಡುಕುವದು ಪ್ರಯಾಸವಾದರೂ ಈ ಕೆಲಸ ಮಾಡಬೇಕೆಂದು ನಿರ್ಧರಿಸಿದೆ. ಗುರುಗಳನ್ನು ಕೇಳಿದಾಗ ಸಂತೋಷದಿಂದ ಒಪ್ಪಿಕೊಂಡರು.

ಆ ಕಾಲಕ್ಕೆ ಜೆರಾಕ್ಸ್ ಇರಲಿಲ್ಲ. ಕೈಯಿಂದ ಬರೆಯಬೇಕಾಗಿತ್ತು. ಕೆಲವು ಕಾವ್ಯಗಳಿಗೆ ಅವರು ಬರೆದಿರುವ ಮುನ್ನುಡಿಗಳನ್ನು ಪ್ರತಿ ಮಾಡಿದೆವು. ಪ್ರಬುದ್ಧ ಕರ್ನಾಟಕ, ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದ ಲೇಖನಗಳನ್ನು ಪ್ರತಿ ಮಾಡಿದೆ. ಒಮ್ಮೊಮ್ಮೆ ಪ್ರತಿ ಮಾಡಲು ಮೂಲ ಲೇಖನ ದೊರೆಯುತ್ತಿರಲಿಲ್ಲ. ಆಗ ಹೋಗಿ ಗುರುಗಳನ್ನು ಕೇಳುತ್ತಿದ್ದೆ. ಅವರೂ ಹುಡುಕುತ್ತಿದ್ದರು. ಒಂದು ಹಂತದಲ್ಲಿ ಅವರಿಗೂ ಸಿಕ್ಕದಿದ್ದಾಗ 'ನಿನ್ನನ್ನು ವಶಪಡಿಸಿಕೊಂಡಿರುವದು ದೆವ್ವವನ್ನು ವಶಪಡಿಸಿಕೊಂಡಂತೆ ಆಗಿದೆ, ಯಾರಿಗೂ (ಇತರ ಅಧ್ಯಾಪಕರಿಗೆ) ಬಗ್ಗದ ನೀನು ನನಗೆ ಬಗ್ಗಿದೆ. ಈಗ ನಿನಗೆ ಕೆಲಸ ಕೊಡಲು ಸಾಧ್ಯವಾಗುತ್ತಿಲ್ಲ. ಆದರೆ ದೆವ್ವಕ್ಕೆ ಕೆಲಸ ಕೊಡಲೇ ಬೇಕು. ದೆವ್ವವನ್ನು ವಶಪಡಿಸಿಕೊಂಡಾದ ಮೇಲೆ ಯಾವುದೇ ಕೆಲಸವಿಲ್ಲದಿದ್ದಾಗ ಮರ ಸುತ್ತು ಎಂದು ಹೇಳಿದಂತೆ ಆಗಿದೆ ನನ್ನ ಪರಿಸ್ಥಿತಿ' ಎಂದು ನಕ್ಕರು. 'ಪೀಠಿಕೆಗಳು ಲೇಖನಗಳು' ಗ್ರಂಥ ಪ್ರಕಟವಾದದ್ದು ಈ ರೀತಿ.

ಒಂದು ಲೇಖನವನ್ನು ಪ್ರತಿ ಮಾಡಬೇಕೆಂದರೆ, ಅದನ್ನು ಓದಲೇಬೇಕಲ್ಲ. ಒಂದೊಂದು ಲೇಖನಗಳನ್ನು ಓದುವಾಗಲೂ ನನ್ನ ಗುರುಗಳ ವಿದ್ವತ್ ಪ್ರಪಂಚದ ಅರಿವಾಗುತ್ತಿತ್ತು.

ಒಬ್ಬ ಕವಿಯ ಕಾಲನಿರ್ಣಯವನ್ನು ಗೊತ್ತುಮಾಡುವದು ಹೇಗೆ ಎಂದು ಗುರುಗಳು ಸೂಚಿಸಿರುವದು ಎಲ್ಲರಿಗೂ ಮಾರ್ಗದರ್ಶನ. (೧) ಕಾವ್ಯದ ಯಾವದೇ ಭಾಗದಲ್ಲಿ ಕವಿ ತನ್ನ ವಿಷಯವನ್ನು, ಅದರಲ್ಲಿಯೂ ತಾನು ಜೀವಿಸಿದ ಕಾಲದ ಬಗೆಗೆ ಬರೆದಿದ್ದಾನೆಯೇ ಎಂದು ನೋಡಬೇಕು. (೨) ಸಾಮಾನ್ಯವಾಗಿ ಕವಿಗಳು ತಮ್ಮ ಮುಂಚಿನ ಕವಿಗಳನ್ನು ಸ್ಮರಿಸುತ್ತಾರೆ. ಹೀಗೆ ಕವಿ ಸ್ಮರಿಸಿರುವ ಕವಿಗಳಲ್ಲಿ ಕೆಲವರ ಕಾಲವಾದರೂ ತಿಳಿದಿರುತ್ತದೆ. ಅಂದರೆ ಅವರ ನಂತರದ ಕವಿ ಇವನು ಎನ್ನುವದು ಸ್ಪಷ್ಟವಾಗುತ್ತದೆ. (೩) ಈ ಕವಿಯ ನಂತರ ಕಾವ್ಯಗಳನ್ನು ಬರೆದವರು ಕೆಲವರಾದರೂ ಈ ಕವಿಯನ್ನು ಸ್ಮರಿಸಿರುತ್ತಾರೆ. ಅವರಲ್ಲಿ ಯಾರಾದರೂ ಯಾವ ಕಾಲದಲ್ಲಿದ್ದರು ಎನ್ನುವದು ನಿರ್ಧಾರವಾಗಿದ್ದರೆ, ಅವರಿಗಿಂತ ಮುಂಚಿನ ಕವಿ ಎನ್ನುವದು ಅರ್ಥವಾಗುತ್ತದೆ.

ಗುರುಗಳು ಬೇರೆಯವರಿಗೆ ಹೇಳಿದ್ದಲ್ಲ. ತಾವೇ ಖಚಿತವಾಗಿ ತಿಳಿದುಕೊಂಡಿರುವ ರೀತಿಯಲ್ಲಿ ಹಲವು ಕೃತಿಗಳನ್ನು ಸಂಪಾದಿಸಿದ್ದಾರೆ. 'ವಡ್ಡಾರಾಧನೆ', ಕೇಶಿರಾಜನ 'ಶಬ್ದಮಣಿ ದರ್ಪಣ', 'ಗೋವಿನ ಹಾಡು' ಮುಂತಾದ ಕೃತಿಗಳು ಅವರ ಪ್ರತಿಭೆಗೆ 'ಸಂಶೋಧನಾ ಸಾಮರ್ಥ್ಯಕ್ಕೆ' ಸವಾಲಾಗಿನಿಂತಿವೆ. ಹಳೆಯ ಕಾವ್ಯವನ್ನು ಸಂಪಾದಿಸುವದು ಹೇಗೆ ಎಂದು ತಿಳಿದುಕೊಳ್ಳಲು ಬಯಸಿದವರಿಗೆ ಗುರುಗಳ 'ಗ್ರಂಥ ಸಂಪಾದನೆ' ತಿಳುವಳಿಕೆಯನ್ನು ಕೊಡುತ್ತದೆ.

ಸಾಮಾನ್ಯವಾಗಿ ಒಂದು ಕೃತಿಯ ಅನೇಕ ಪ್ರತಿಗಳು ಇರುವದುಂಟು. ಕುಮಾರವ್ಯಾಸ ಭಾರತದ ನೂರಾರು ಪ್ರತಿಗಳು ಇರುವದುಂಟು. ಕುಮಾರವ್ಯಾಸನ 'ವಾಚನ ಮತ್ತು ಪಾರಾಯಣ' ಎಲ್ಲ ಹಳ್ಳಿಗಳಲ್ಲಿಯೂ ನಡೆಯುತ್ತಿತ್ತು. ಆದ್ದರಿಂದ ಒಂದು ಶುದ್ಧ ಪ್ರತಿಯನ್ನು ಸಿದ್ಧಪಡಿಸುವದಕ್ಕೆ ಹೆಚ್ಚು ಕಷ್ಟವಾಗುತ್ತಿರಲಿಲ್ಲ. ಆದರೂ ಈ ಕಾವ್ಯದಲ್ಲಿ ಅನೇಕ ಕಡೆ ಕೆಲವು ಶಬ್ದಗಳು ಬದಲಾಗುತ್ತಿರುತ್ತವೆ. ಇವುಗಳಲ್ಲಿ ಯಾವ ಶಬ್ದಗಳನ್ನು ಉಳಿಸಿಕೊಳ್ಳಬೇಕೆಂಬುದನ್ನು ನಿರ್ಧರಿಸುವದು ಸಂಶೋಧಕರಿಗೆ ಸವಾಲಾಗುತ್ತದೆ.

ಕೆಲವು ಕಾವ್ಯಗಳ ಪ್ರತಿಗಳು ಹೆಚ್ಚಾಗಿರುವದಿಲ್ಲ. ಪಂಪ ಭಾರತದ ಪ್ರತಿಗಳು ದೊರಕಿರುವದು ಕೇವಲ ಒಂದೂವರೆ ಮಾತ್ರ. ಇದರ ಆಧಾರದ ಮೇಲೆ ಕನ್ನಡ ಸಾಹಿತ್ಯ ಪರಿಷತ್ತು ಪಂಪ ಭಾರತವನ್ನು ಪ್ರಕಟಿಸಿತು.



ಕನ್ನಡ ಸಾಹಿತ್ಯ ಪ್ರಪಂಚಕ್ಕೆ ನನ್ನ ಗುರುಗಳು ನೀಡಿರುವ ಅಮೂಲ್ಯ ಕಾಣಿಕೆಯೆಂದರೆ 'ಪಂಪ ಭಾರತ ದೀಪಿಕೆ'. ಇದನ್ನು ಪಕ್ಕದಲ್ಲಿ ಇಟ್ಟು ನೋಡಿಕೊಂಡರೆ ಸಾಕು, ಪಂಪ ಭಾರತದ ಎಲ್ಲ ಜಟಿಲ ಸಮಸ್ಯೆಗಳೂ ಬಗೆಹರಿಯುತ್ತವೆ.

ನನ್ನ ಗೆಳೆಯನೊಬ್ಬ ಗುರುಗಳ ಮೆಚ್ಚುಗೆ ಗಳಿಸುವದಕ್ಕಾಗಿ 'ಪಂಪ ಭಾರತ'ದ ಪ್ರತಿ ಒಂದು ಕಡೆ ಇದೆ ಸರ್, ಏನಾದರೂ ಮಾಡಿ ನಿಮಗೆ ತಂದುಕೊಡುತ್ತೇನೆ' ಎಂದು ಹೇಳಿದ್ದ. ಅವನು ಹೇಳುತ್ತಿರುವದು ನಿಜ ಎಂದು ಗುರುಗಳು ನಂಬಿಕೊಂಡಿದ್ದರು. ಅವನು ಸಿಕ್ಕಿದಾಗಲೆಲ್ಲ 'ಏನಾಯಿತಯ್ಯ ?' ಎಂದು ಕೇಳುತ್ತಿದ್ದರು. ಅವನು ಬೊಗಳೆ ಬಿಡುತ್ತಿದ್ದಾನೆಂದು ನನಗೆ ಗೊತ್ತಿತ್ತು. ಒಂದು ದಿನ ಗುರುಗಳಿಗೆ ಸತ್ಯಾಂಶವನ್ನು ತಿಳಿಸಿದೆ. ಅವರಿಗಾದ ನಿರಾಶೆಯನ್ನು ಊಹಿಸಲೂ ಸಾಧ್ಯವಿಲ್ಲ.

ಒಂದು ಕಾವ್ಯದ ಹಲವು ಪ್ರತಿಗಳು ಲಭ್ಯವಾಗುವಂತಿದ್ದರೆ (ತಾಳೆ ಗರಿಯ ಪ್ರತಿಗಳು) ಅವುಗಳನ್ನು ಮುಂದಿಟ್ಟುಕೊಂಡು ಶುದ್ಧ ಪ್ರತಿಯನ್ನು ತಯಾರಿಸಿ ಪ್ರಕಟಿಸುವ ವಿದ್ವಾಂಸರು ಅನೇಕರಿದ್ದಾರೆ. ಹೀಗಾಗಿಯೇ ಅನೇಕ ಕಾವ್ಯಗಳು, ಲಕ್ಷಣ ಗ್ರಂಥಗಳು, ವ್ಯಾಕರಣಗಳು ಪ್ರಕಟವಾಗಿವೆ. ಆದರೆ ನನ್ನ ಗುರುಗಳು ಮಾಡಿದ ಒಂದು ಕೆಲಸವನ್ನು ಬೇರೆ ಯಾರೂ ಮಾಡಿಲ್ಲ.

ಎರಡು ಪದ್ಯಗಳನ್ನು ಸೇರಿಸಿ ಒಂದು ಪದ್ಯವನ್ನು ಮಾಡಿರುವದು ಗುರುಗಳ ನಿಷ್ಠೆ. ಸೇರಿಸುವದೆಂದರೆ ಒಂದನ್ನೊಂದು ಸೇರಿಸಿ ಹೊಲೆಯುವದಲ್ಲ. ಒಂದು ಪದ್ಯದ ದ್ವಿತೀಯ ಅರ್ಧವನ್ನು ತೆಗೆದುಹಾಕಿ ಎರಡನೆಯ ಪದ್ಯದ ಮೊದಲರ್ಧವನ್ನು ತೆಗೆದುಹಾಕಿ ನಂತರ ಅವೆರಡನ್ನು ಜೋಡಿಸುವದು. ಎಂದರೆ ಮೊದಲ ಪದ್ಯದ ಅರ್ಧ ಮತ್ತು ಎರಡನೇ ಪದ್ಯದ ಅರ್ಧ ಜೋಡಿಸುವದು. ಹೀಗೆ ಮಾಡಬೇಕಾದರೆ ಛಂದಸ್ಸಿನಲ್ಲಿ ನ್ಯೂನತೆ ಆಗಬಾರದು. ಆದಿಪ್ರಾಸ ಮತ್ತು ಅಂತ್ಯಪ್ರಾಸಗಳಿದ್ದರೆ ಯಾವದಕ್ಕೂ ತೊಂದರೆಯಾಗ ಬಾರದು. ಅರ್ಥಕ್ಕಂತೂ ಧಕ್ಕೆ ಬರಬಾರದು. ಈ ರೀತಿ ಜೋಡಿಸಿ ಎರಡು ಪದ್ಯಗಳನ್ನು ಒಂದನ್ನಾಗಿ ಮಾಡಿದ ಶೋಧ ಬೇರೆ ಎಲ್ಲಿ ಕಂಡುಬರುತ್ತದೆ! ನನ್ನ ಗುರುಗಳ ಸಂಶೋಧನಾ ಸಾಮರ್ಥ್ಯಕ್ಕೆ ಇದೊಂದು ಸಾಕ್ಷಿ.

ಶಿವಕೋಟ್ಯಾಚಾರ್ಯರ 'ವಡ್ಡಾರಾಧನೆ' ಕನ್ನಡದ ಮೊದಲ ಗದ್ಯ ಗ್ರಂಥ. 'ಇದು ಮೊದಲ ಕನ್ನಡದ ಗದ್ಯಗ್ರಂಥ'ವೆಂದು ನಿರೂಪಿಸಿ ವಡ್ಡಾರಾಧನೆಯ ಕತೆಗಳನ್ನು ವಿಶ್ಲೇಷಣೆ ಮಾಡಿರುವ ಗುರುಗಳು ಸೊಗಸಾದ ಮುನ್ನುಡಿ ಬರೆದಿದ್ದಾರೆ.

ತಾವು ತಪ್ಪು ಮಾಡಿಯೇ ಇಲ್ಲ ಎಂದು ಎಂದೂ ಬೀಗಿದವರಲ್ಲ ನನ್ನ ಗುರುಗಳು. ಕೇಶಿರಾಜನ 'ಶಬ್ದಮಣಿದರ್ಪಣ'ವನ್ನು ಅವರು ಸಂಪಾದಿಸಿದರಷ್ಟೆ. ಈ ಕೃತಿ ಪ್ರಕಟವಾದ ನಂತರ ಡಿ.ಎಲ್.ಎನ್. ಅವರು ಮಾಡಿರುವ ಒಂದು ತಪ್ಪನ್ನು ಎಂ. ಎಂ. ಕಲಬುರ್ಗಿಯವರು ಎತ್ತಿ ತೋರಿಸಿದರು. ನಾನು ಮೈಸೂರಿನಲ್ಲಿ ಎಂ.ಎ. ಓದುತ್ತಿದ್ದಾಗ ಕಲಬುರ್ಗಿಯವರು ಧಾರವಾಡದಲ್ಲಿ ಎಂ.ಎ. ಓದುತ್ತಿದ್ದರು. ನನ್ನಂತೆಯೇ ವಿದ್ಯಾರ್ಥಿಯಾಗಿರುವ ಒಬ್ಬ ಹುಡುಗ ನನ್ನ ಗುರುಗಳನ್ನು ಟೀಕಿಸುವದೇ ಎಂದು ನನಗೆ ಕೋಪ ಬಂದಿತ್ತು. ಈ ವಿಷಯವಾಗಿ ಮಾತನಾಡುತ್ತ ಗುರುಗಳ ಹತ್ತಿರ 'ಸರ್, ಕಲಬುರ್ಗಿಯನ್ನು ಟೀಕಿಸಿ ಒಂದು ಪತ್ರವನ್ನು ಬರೆದು ಎಲ್ಲ ಪತ್ರಿಕೆಗಳಿಗೂ ಕಳುಹಿಸುತ್ತೇನೆ' ಎಂದು ಹೇಳಿದೆ. ತಕ್ಷಣ ಗುರುಗಳು 'ಸದ್ಯ ಹಾಗೆ ಮಾಡಬೇಡ, ಆ ಹುಡುಗ ಹೇಳುವದರಲ್ಲಿ ಒಂದು ಅಂಶ ನಿಜವಾಗಿದೆ. ನನ್ನ ತಪ್ಪನ್ನು ಯಾರು ತೋರಿಸಿದರೇನು ? ಒಪ್ಪಿಕೊಳ್ಳಲೇಬೇಕು ?' ಎಂದರು.

ಎಂ. ಎಂ. ಕಲಬುರ್ಗಿಯವರು ಈಗ ಸರ್ವಮಾನ್ಯ ವಿದ್ವಾಂಸರು, ಹಂಪಿ ಕನ್ನಡ ವಿಶ್ವವಿದ್ಯಾನಿಲಯದ ಕುಲಪತಿಗಳಾಗಿ ನಿವೃತ್ತಿ ಹೊಂದಿದ್ದಾರೆ. ಅನೇಕ ಕೃತಿಗಳನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಕಲಬುರ್ಗಿಯವರು 'ಶಬ್ದಮಣಿದರ್ಪಣ'ದ ಪ್ರಸಂಗ ನಡೆದ ಕೆಲವು ದಿನಗಳ ನಂತರ ಮೈಸೂರಿಗೆ ಬಂದಿದ್ದರಂತೆ. ಅವರು ತಮ್ಮ ಗೆಳೆಯರ ಹತ್ತಿರ 'ಡಿ.ಎಲ್.ಎನ್.' ಅವರನ್ನು ನೋಡಿಬರ್ತೀನಿ' ಎಂದರಂತೆ. ಅದಕ್ಕೆ ಆ ಗೆಳೆಯರು 'ಬೇಡ ಬೇಡ, ನಿನ್ನ ಮುಖ ನೋಡಿದ ತಕ್ಷಣ ಅವರು ಸಿಕ್ಕಾಪಟ್ಟೆ ರೇಗುತಾರೆ' ಎನ್ನುತ್ತಾ ಕಲಬುರ್ಗಿಯವರನ್ನು ಡಿ.ಎಲ್.ಎನ್. ಅವರ ಮನೆಗೆ ಹೋಗುವದನ್ನು ತಡೆದರಂತೆ.

ಆದರೆ ಕಲಬುರ್ಗಿ ಯಾರ ಮಾತನ್ನೂ ಕೇಳದೆ ಡಿ.ಎಲ್.ಎನ್. ಅವರನ್ನು ನೋಡಲು ಹೋದರು.

ಕಲಬುರ್ಗಿ ಬಂದಿದ್ದಾರೆಂದು ತಿಳಿದ ತಕ್ಷಣ ಡಿ.ಎಲ್.ಎನ್. ಅವರು ತಮ್ಮ ಕೋಣೆಯಿಂದ ಹೊರಬಂದು 'ಬನ್ನಿ, ಬನ್ನಿ, ನಾನು ಕಲಬುರ್ಗಿಗೆ ಎಷ್ಟು ವಯಸ್ಸಾಗಿದೆಯೋ ಏನೋ ಎಂದುಕೊಂಡಿದ್ದೆ. ಆದರೆ ಇನ್ನೂ ಹುಡುಗ' ಎಂದು ಸಂತೋಷಪಟ್ಟುಕೊಂಡರಂತೆ, ಗುರುಗಳು.

ಇತ್ತೀಚೆಗೆ ನಾನು ಧಾರವಾಡದಲ್ಲಿರುವ ಕಲಬುರ್ಗಿಯವರ ಮನೆಗೆ ಫೋನ್ ಮಾಡಿದಾಗ ಅವರು ನನ್ನ ಗುರುಗಳ ದೊಡ್ಡ ಗುಣವನ್ನು ಜ್ಞಾಪಿಸಿಕೊಂಡರು. ಈ ಘಟನೆ ನೆನ್ನೆ ಮೊನ್ನೆ ನಡೆಯಿತೇನೋ ಎನ್ನುವಂತೆ ಅವರ ಧ್ವನಿ ಇತ್ತು. ನನ್ನ ಗುರುಗಳ ಸ್ವಭಾವ ಇದು.

ಸೊನ್ನಲಿಗೆ ಸಿದ್ದರಾಮ ವೀರಶೈವನೇ ಎನ್ನುವ ಬಗೆಗೆ ಅನಂತರ ನನ್ನ ಗುರುಗಳು ಬರೆಯುತ್ತಾ 'ಸಿದ್ದರಾಮ ಸಮಾಧಿಯಿಂದ ಬಂದರೆ ಆತನ ಪಾದಗಳಿಗೆ ಹಣೆ ಇಡುವ ಮೊದಲ ಸರದಿ ನನ್ನದಾಗಿರಲಿ' ಎಂದಿದ್ದಾರೆ.

ಸಾಹಿತ್ಯ ಬೇರೆ, ಸಂಶೋಧನೆ ಬೇರೆ ಎಂದು ನನ್ನ ಗುರುಗಳು ಎಂದೂ ಭಾವಿಸಿದವರಲ್ಲ. ಸಾಹಿತ್ಯಕ್ಕೆ ಸಂಬಂಧಿಸಿದ ಸಂಶೋಧನೆಯಲ್ಲವೆ, ಅವರದು ? ಆದರೆ ಒಬ್ಬ ವಿದ್ವಾಂಸ 'ನಾನೇನಿದ್ರು ಸಂಶೋಧಕ, ಸಾಹಿತ್ಯದ ಸಂಬಂಧವಿಲ್ಲ' ಎಂದು ಆಗಾಗ ಹೇಳುತ್ತಿದ್ದರು. ಒಂದು ಕಾರ್ಯಕ್ರಮದಲ್ಲಿ ಭಾಗವಹಿಸಲು ಅವರ ಜೊತೆ ಚಿತ್ರದುರ್ಗಕ್ಕೆ ಹೋಗುತ್ತಿದ್ದಾಗ 'ಸರ್, ನೀವು ಸಾಹಿತ್ಯಕ್ಕೂ ನನಗೂ ಸಂಬಂಧವಿಲ್ಲ, ನಾನೇನಿದ್ರೂ ಸಂಶೋಧಕ ಎಂದು ಆಗಾಗ ಹೇಳುತ್ತಿರುತ್ತೀರಿ. ಹೀಗೆ ಹೇಳುವದು ತಪ್ಪು. ನಿಮ್ಮ ಸಂಶೋಧನೆ ಸಾಹಿತ್ಯಕ್ಕೆ ಸಂಬಂಧಿಸಿದ್ದು. ಆದ್ದರಿಂದ ಇನ್ನು ಮೇಲೆ ಈ ರೀತಿ ಹೇಳಬೇಡಿ' ಎಂದೆ. ನನ್ನ ಮಾತು ಅವರಿಗೆ ಒಪ್ಪಿಗೆಯಾಯಿತು. ಅನಂತರ ಅವರು ಎಂದೂ ಆ ರೀತಿ ಮಾತನಾಡಲಿಲ್ಲ.

'ಹಂಪಿಯ ವಿಗ್ರಹಗಳನ್ನು ನಾಶಪಡಿಸಿದವರು ಯಾರು ?' ಎನ್ನುವ ವಿಷಯವಾಗಿ ಪತ್ರಿಕೆಯಲ್ಲಿ ಒಂದು ಲೇಖನವನ್ನು ಬರೆದರು. ಇದನ್ನು ಓದಿ ವ್ಯಗ್ರರಾದ ಚಿದಾನಂದ ಮೂರ್ತಿಯವರು ನನ್ನನ್ನು ಕಟುವಾಗಿ ಟೀಕಿಸಿದರು. ಮುಸ್ಲಿಮರೇ ಈ ವಿಗ್ರಹಗಳನ್ನು ನಾಶಪಡಿಸಿದರೆಂಬುದು ಅವರ ಖಚಿತ ಸಿದ್ಧಾಂತ. ಅದಕ್ಕೆ ನಾನು 'ಮುಸ್ಲಿಮರೇ ಆಗಿದ್ದರೆ ಅವರೇಕೆ ವಿರೂಪಾಕ್ಷ ದೇವಾಲಯವನ್ನು ಹಾಗೇ ಉಳಿಸಿದರು ? ವಿರೂಪಾಕ್ಷ ದೇವಾಲಯ ಹಂಪಿಯಲ್ಲಿ ಎದ್ದುಕಾಣುತ್ತಿತ್ತು. ಆದ್ದರಿಂದ ಎಲ್ಲ ದೌರ್ಜನ್ಯಗಳನ್ನು ಮುಸ್ಲಿಮರ ಕೊರಳಿಗೆ ಕಟ್ಟಬೇಕಾಗಿಲ್ಲ. ಕೃಷ್ಣದೇವರಾಯನ ಕಾಲದಲ್ಲಿ ಹಂಪಿಯಲ್ಲಿ ವಿಷ್ಣುವಿಗೆ ಸಂಬಂಧಿಸಿದ ಅನೇಕ ದೇವಾಲಯಗಳು ವಿಗ್ರಹಗಳು ನಿರ್ಮಾಣವಾದವು. ರಾಜರು ವೈಷ್ಣವ ಧರ್ಮಕ್ಕೆ ನೀಡಿದ ಪ್ರೋತ್ಸಾಹವನ್ನು ಕಂಡ ಶೈವರು ವ್ಯಗ್ರರಾದರು. ಅವಕಾಶ ಸಿಕ್ಕಾಗ ವಿಷ್ಣುವಿಗೆ ಸಂಬಂಧಿಸಿದ ವಿಗ್ರಹಗಳನ್ನು (ಉದಾಹರಣೆಗೆ, ಲಕ್ಷ್ಮೀ ನರಸಿಂಹ ವಿಗ್ರಹ) ನಾಶ ಮಾಡಿದರು. ಇದೆಲ್ಲ ಒಂದು ರಾತ್ರಿ ನಡೆದಿರಬೇಕು. ಹಗಲಿನಲ್ಲಿ ನಡೆದರೆ ವೈಷ್ಣವರು ಸುಮ್ಮನೆ ಬಿಡುತ್ತಿರಲಿಲ್ಲ' ಎಂದು ಬರೆದರೂ ಚಿದಾನಂದ ಮೂರ್ತಿಯವರಿಗೆ ಒಪ್ಪಿಗೆಯಾಗಲಿಲ್ಲ. ಸರಿಯಾದ ಮಾಹಿತಿ ಇಲ್ಲದೆ ನಾನು ಬರೆಯುತ್ತೇನೆಯೇ ? ಎನ್ನುವುದು ಅವರ ವಾದ. ಚಿದಾನಂದ ಮೂರ್ತಿಯವರ ವಾದವನ್ನು ಒಪ್ಪುವದೇ ಆದರೆ ಮುಗಿಲೆತ್ತರಕ್ಕೆ ಕಾಣುವ ವಿರೂಪಾಕ್ಷ ದೇವಾಲಯ ಉಳಿಯುತ್ತಿರಲಿಲ್ಲ. ತಮ್ಮ ತಪ್ಪನ್ನು ಒಪ್ಪಿಕೊಳ್ಳದ ಚಿದಾನಂದ ಮೂರ್ತಿಯವರ ತಲೆಯಲ್ಲಿ ಬಿ.ಜೆ.ಪಿ. ಹುಳ ಹೊಕ್ಕಿರುವದು ಸ್ಪಷ್ಟ.

ಇದಾದ ಕೆಲ ದಿನಗಳ ನಂತರ ಚಿದಾನಂದ ಮೂರ್ತಿಯವರು ಫೋನ್ ಮಾಡಿದಾಗ 'ಸರ್ ಆಂಧ್ರದಲ್ಲಿ ಅನೇಕ ನರಸಿಂಹ ಮೂರ್ತಿಗಳು ಯಥಾವತ್ತಾಗಿ ಉಳಿದಿವೆ. ಇದಕ್ಕೆ ಕಾರಣ ರಾಮಾನುಜಾಚಾರ್ಯರ ಪ್ರಭಾವ. ಧರ್ಮಗಳ ಇತಿಹಾಸ, ರಾಜಕೀಯ ಇತಿಹಾಸ, ಸಾಮಾಜಿಕ ಇತಿಹಾಸ ಒಟ್ಟಾರೆ ಗಮನಿಸಿ ನಾವು ಯಾವದೇ ತೀರ್ಮಾನಕ್ಕೆ ಬರಬೇಕು. ಸಮಗ್ರ ದೃಷ್ಟಿಯಿಂದ ನೋಡದೆ ಒಂದು ಸಣ್ಣ ದೃಷ್ಟಾಂತವನ್ನು ಹಿಡಿದುಕೊಂಡು ಬರೆಯುತ್ತಾ ಹೋದರೆ ತಪ್ಪಾಗುತ್ತದೆ' ಎಂದು ವಿವರಿಸಿದೆ. ಅದು ಎಷ್ಟರಮಟ್ಟಿಗೆ ಅರ್ಥವಾಯಿತೋ ತಿಳಿಯಲಿಲ್ಲ. 'ನಾನು ಸಂಶೋಧಕ' ಎನ್ನುವ ಹಣೆಪಟ್ಟಿಯನ್ನು ಕಟ್ಟಿಕೊಂಡು ನಾನು ಕೆಲಸ ಮಾಡುತ್ತಿಲ್ಲ. ಚಿದಾನಂದ ಮೂರ್ತಿಯವರು ದೊಡ್ಡ ಅಕ್ಷರಗಳಲ್ಲಿ ತಾನು ಸಂಶೋಧಕ ಎನ್ನುವ ಹಣೆಪಟ್ಟಿಯನ್ನು ಕಟ್ಟಿಕೊಂಡಿದ್ದಾರಲ್ಲ!

ನನ್ನ ಗುರುಗಳ ವಿಶಾಲ ದೃಷ್ಟಿ ಚಿದಾನಂದ ಮೂರ್ತಿಯವರಿಗೆ ಇದ್ದಿದ್ದರೆ !

ಒಮ್ಮೆ ಗುರುಗಳಿಗೆ 'ಸರ್, ಕನ್ನಡ ಸಾಹಿತ್ಯ ಚರಿತ್ರೆಯನ್ನು ನೀವು ಬರೆದರೆ ವಿದ್ಯಾರ್ಥಿ

---

# ಗ್ರಹಣ

ಯುಗ ಯುಗಾಂತರದ ಲಗೋರಿಯಿದು
ಜೀರ್ಣವಾಗಿಹೋಗಿದೆ ಇಡಿಯ ಪಂಚಾಂಗ
ಅಚಲ ನಂಬಿಕೆಯ ಗೋಂದಿನ ಬಲದಲ್ಲಿ
ಅದು ಹೇಗೋ ನಿಂತುಕೊಂಡಿವೆ ಬೆರಗಾಗುವಂತೆ
ಬಿಲ್ಲೆಗಳು

ಇನ್ನೇನು ಕುಸಿದೇ ಬಿಡುವಂತಿದ್ದರೂ
ಯಾವತ್ತೂ ಕುಸಿಯಬಾರದು ಸಿದ್ಧಾಂತ;
ಕುಸಿದುಬಿಟ್ಟಲ್ಲಿ
ಹಲವು ಮಂದಿ ಅಪ್ಪಚ್ಚಿ ಖಂಡಿತ
ಅದರ ಅಡಿಯಲ್ಲಿ

ಆಶ್ಚರ್ಯ !
ಬೆಳಕು ಇಲ್ಲಿ ಓಡಿಸಲಿಲ್ಲ ಕತ್ತಲೆಯನ್ನು ;
ತಪ್ಪಿ ಎಲ್ಲಾದರೂ ತೂರದಿರಲಿ ಎಂದು
ಬಿಗಿದು
ರೆಪ್ಪೆ ಮುಚ್ಚಿ ಕೂರುವ ಕ್ಷುದ್ರತೆಗೆ
ಕಿರಣಗಳೇ ನಾಚುತ್ತಿವೆ.

ಆಕಾಶದ ನಿತ್ಯ ನೆರಳಿನಾಟಗಳಿಗೆಲ್ಲ
ದಿಕ್ಕೆಟ್ಟು ವ್ರತಹಿಡಿದವರು;
ನಂಬಿಕೆಯ ಗೂಟಕ್ಕೆ ಬಡಿಸಿಕೊಂಡು
ಕಕ್ಕಾಬಿಕ್ಕಿಯಾದವರು;
ಇವರನ್ನೆಲ್ಲ ಕಂಡು
ಚಂದ್ರನ ಮೊಗದಲ್ಲಿ ಒಂದು ತಣ್ಣನೆಯ ನಗು
ಸೂರ್ಯನದ್ದು ಗಾಢ ವಿಷಾದ

ಹಣೆಯಬರಹ ಬರೆಯುವಲ್ಲಿ ವ್ಯಸ್ತ
ಅನಂತಾಕಾಶ ಕಾಯಗಳು
ಸಂಬಂಧಗಳಿಗೆಲ್ಲ ಗಂಟುಬೀಳುವ
ನಕ್ಷತ್ರಮೂಲಗಳು
ಬದುಕೆಲ್ಲ ಗೋಜಲೋ ಗೋಜಲು !

ಕಾಡಬೇಕು, ಕಾಡಲೇಬೇಕಯ್ಯಾ
ಅಗೋಚರ ಲೋಕದ ನಿರ್ಜೀವ ಗ್ರಹತಾರೆಗಳು
ಹುಲುಮಾನವರನ್ನು
ಭೂತಗಳಾಗಿ ಭವಿಷ್ಯಗಳಾಗಿ
ಸಾಗಬೇಕು, ಸಾಗಲೇಬೇಕಯ್ಯಾ
ಸುಳ್ಳುಬಿತ್ತಿ ಸತ್ಯಬೆಳೆವ ಮಂದಿಯ ಬದುಕು
ಸಾಂಗವಾಗಿ, ಸರಾಗವಾಗಿ

ಅಜ್ಜ ನೆಟ್ಟಾಲದ ಮರ
ಎಂದೋ ಬಿದ್ದುಹೋಗಿದೆ
ಆದರೆ
ಅದರ ಕರಿನೆರಳು ಮಾತ್ರ
ಅಲ್ಲಿಯೇ ಉಳಿದುಬಿಟ್ಟಿದೆ !



ಶ್ರೀನಿವಾಸ ಕಾರ್ಕಳ
'ನೆಲೆ', ನೋಡು, ಭಜನಾಮಂದಿರ ರಸ್ತೆ, ಬಿಜೈ,
ಮಂಗಳೂರು - ೫೭೫ ೦೦೪

ಗಳಿಗೆ ಅನುಕೂಲವಾಗುತ್ತದೆ' ಎಂದು ಹೇಳಿದೆ. ಪ್ರಾಸಂಗಿಕವಾಗಿ ಮಾತನಾಡುತ್ತಿದ್ದಾಗ ನನ್ನ ಸಲಹೆಯನ್ನು ಅವರು ಒಪ್ಪಿಕೊಳ್ಳಲಿಲ್ಲ. 'ಒಬ್ಬರೆ ಸಾಹಿತ್ಯ ಚರಿತ್ರೆಯನ್ನು ಬರೆದರೆ ಅದು ಸಮಗ್ರವಾಗುವದಿಲ್ಲ. ಅನೇಕರು ಸೇರಿ ಬರೆಯಬೇಕು. ಯಾರು ಯಾವ ಕವಿಗಳ ಬಗ್ಗೆ ಚೆನ್ನಾಗಿ ಅಧ್ಯಯನ ಮಾಡಿದ್ದಾರೆ ಎಂಬುದನ್ನು ತಿಳಿದು ಅವರಿಂದ ಆ ಕವಿಗಳ ಬಗೆಗೆ ಬರೆಯಿಸಬೇಕು. ಹೀಗೆ ಅನೇಕರಿಂದ ಬರೆಯಿಸಿದರೆ ಅದು ಸಮಗ್ರ ಸಾಹಿತ್ಯ ಆಗುತ್ತದೆ' ಎಂದರು. ನಮ್ಮ ಮಾತುಕತೆ ಮುಗಿದ ಎಷ್ಟೋ ವರ್ಷಗಳ ನಂತರ ಮೈಸೂರು ಮತ್ತು ಬೆಂಗಳೂರು ವಿಶ್ವವಿದ್ಯಾನಿಲಯಗಳು ಕನ್ನಡ ಸಾಹಿತ್ಯ ಚರಿತ್ರೆಯನ್ನು ಅನೇಕರಿಂದ ಬರೆಯಿಸಿ ಪ್ರಕಟಿಸಿವೆ. ಅವುಗಳನ್ನು ಪರಿಷ್ಕರಿಸಬೇಕಾಗಿದೆ. ಅಂದರೂ ಕೆಲವರು ಸ್ವತಂತ್ರವಾಗಿ ಸಾಹಿತ್ಯ ಚರಿತ್ರೆಯನ್ನು ಬರೆಯುವ ಸಂಪ್ರದಾಯ ಮುಂದುವರಿಸಿದ್ದಾರೆ.

**ಮುಖಾಮುಖಿ**

ಜಗದ ಜತೆ ಜಗಳಕ್ಕೆ ಕೂತೆ
ಸತ್ಯ ಜಗಮುಗಿಸಿತು
ಜಗಕೆ ಬೆನ್ನು ತೋರಿಸಿ ನಿಂತೆ
ಸುಳ್ಳು ಹಲ್ಲು ಕಿರಿಯಿತು

**ಡಿ. ವಿ. ಬಡಿಗೇರ್**
ವಿರೂಪಾಕ್ಷ ನಿಲಯ, ತುಗ್ಗಿನಪೇಟೆ,
ಗದಗ, ಬೆಟಗೇರಿ - ೫೮೨ ೧೦೨

ಬಿ. ಎಂ. ಶ್ರೀಕಂಠಯ್ಯನವರನ್ನು ಕಂಡರೆ ನನ್ನ ಗುರುಗಳಿಗೆ ವಿಪರೀತ ಭಕ್ತಿ. ಶ್ರೀ ಅವರ ಹೆಸರು ಹೇಳಿದರೆ ಮೈಮರೆಯುತ್ತಿದ್ದರು. ಪ್ರತಿದಿನ ನನ್ನ ರೂಮಿಗೆ ಬಂದು ಜೊತೆಯಲ್ಲಿ ಕರೆದುಕೊಂಡು ಅವರ ಮನೆಗೆ ಹೋಗುವಾಗ ದಾರಿಯಲ್ಲಿ ಒಮ್ಮೆ ನಿಂತು ಪಕ್ಕದ ಮನೆಯ ಕಡೆ ಬೆರಳು ಮಾಡಿ, 'ಈ ಮನೆಯಲ್ಲಿ ಯಾರಿದ್ದರು ಗೊತ್ತೇನಯ್ಯ?' ಎಂದು ಕೇಳಿದರು. 'ಹಿಂದೆ ಯಾರಿದ್ದರು ಗೊತ್ತಿಲ್ಲ, ಆದರೆ ಈಗ ತ್ರಿವೇಣಿಯವರಿದ್ದಾರೆ' ಎಂದೆ. (೧೯೬೦ರಲ್ಲಿ ಆ ಮನೆಯಲ್ಲಿ ತ್ರಿವೇಣಿ ಮತ್ತು ಅವರ ಪತಿ ಶಂಕರ ಇದ್ದರು.) 'ಈಗ ಯಾರು ಇದಾರೆ ಎನ್ನುವುದು ಮುಖ್ಯ ಅಲ್ಲಯ್ಯ, ಇಲ್ಲಿ ನನ್ನ ಗುರುಗಳು ಇದ್ದದ್ದು. ಅರ್ಥವಾಯಿತೇನಯ್ಯ, ಇಲ್ಲಿ ಇದ್ದದ್ದು ಬಿ.ಎಂ.ಶ್ರೀ.' ಎಂದರು. 'ಸರ್, ಯಾವಾಗಲೂ ಬಿ.ಎಂ.ಶ್ರೀ. ಅವರ ವಿಷಯವನ್ನೇ ಹೇಳ್ತಾ ಇರ್ತೀರಿ, ಬೇರೆಯವರ ಬಗ್ಗೆ ಒಂದು ಮಾತೂ ಹೇಳಲಿಲ್ಲವಲ್ಲ?' ಎಂದು ನಾನು ಹೇಳುತ್ತಿದ್ದಂತೆ ಅವರ ಮುಖ ಗಂಭೀರವಾಯಿತು. ಆ ಮನೆಯ ಕಡೆ ತದೇಕ ದೃಷ್ಟಿಯಿಂದ ನೋಡುತ್ತ, 'ಅವರೊಬ್ಬರೇ ನನ್ನ ಗುರುಗಳು, ಉಳಿದವರೆಲ್ಲ ಮೇಷ್ಟ್ರು' ಎಂದು ಸುಮ್ಮನಾದರು. ಗುರುಗಳು ಮತ್ತು ಮೇಷ್ಟ್ರು ನಡುವಣ ವ್ಯತ್ಯಾಸವನ್ನು ಅವರು ಮತ್ತೆ ಬಿಡಿಸಿ ಹೇಳಬೇಕಾಗಲಿಲ್ಲ. ಇವುಗಳ ನಡುವಣ ವ್ಯತ್ಯಾಸ ಅವರ ಮಾತಿನಲ್ಲಿಯೇ ಸ್ಪಷ್ಟವಾಗಿ ಕಾಣಿಸುತ್ತದೆ.

ಇದಾದ ನಂತರ ನನ್ನ ಗುರುಗಳು ಯಾರು ಎನ್ನುವದು ನನಗೆ ಮನದಟ್ಟಾಯಿತು.

ಡಾ|| ಎಂ. ಎಂ. ಕಲಬುರ್ಗಿಯವರು ಹಂಪಿ ಕನ್ನಡ ವಿಶ್ವವಿದ್ಯಾನಿಲಯದ ಕುಲಪತಿಯಾಗಿದ್ದ ಸಮಯ. ಮಂಡ್ಯದಲ್ಲಿ ಜಯಪ್ರಕಾಶ ಗೌಡರ ೫೦ನೆಯ ಹುಟ್ಟುಹಬ್ಬದ ಸಮಾರಂಭದ ಸಂದರ್ಭದಲ್ಲಿ ಅಲ್ಲಿಯ ಗೆಳೆಯರು ಒಂದು ಸಮಾರಂಭವನ್ನು ಏರ್ಪಡಿಸಿದ್ದರು. ದೇಜಗೌ, ಕಲಬುರ್ಗಿ ಮತ್ತು ನಾನು ಆ ಸಮಾರಂಭದಲ್ಲಿ ಭಾಗವಹಿಸಲು ಹೋಗಿದ್ದೆವು.

ಹರಿಪ್ರಿಯ ಹೋಟೆಲಿನಲ್ಲಿ ನಾವು ಮೂವರು ಕುಳಿತು ಹರಟೆ ಹೊಡೆಯುತ್ತಿದ್ದಾಗ ಪ್ರಾಸಂಗಿಕವಾಗಿ ಡಿ.ಎಲ್.ಎನ್. ಅವರ ಹೆಸರು ಪ್ರಸ್ತಾಪವಾಯಿತು. ತಕ್ಷಣ ದೇಜಗೌ ಅವರು 'ವೈಕುಂಠರಾಜು ಡಿ.ಎಲ್.ಎನ್. ಶಿಷ್ಯರು' ಎಂದರು. ದೇಜಗೌ ಅವರ ಧ್ವನಿಯಲ್ಲಿ 'ನಾನು ಏನೋ ತಪ್ಪು ಮಾಡಿದ್ದೇನೆ?' ಎನ್ನುವ ಭಾವವಿತ್ತು. ನಾನು ತಕ್ಷಣ 'ಡಿ.ಎಲ್.ಎನ್. ಅವರ ಶಿಷ್ಯ ಎಂದು ಹೇಳಿಕೊಳ್ಳಲು ಹೆಮ್ಮೆಯಾಗುತ್ತದೆ' ಎಂದೆ. ಅನಂತರ ದೇಜಗೌ ಅವರು ಮಾತನ್ನು ಮುಂದುವರಿಸಲಿಲ್ಲ.

ಡಿ.ಎಲ್.ಎನ್. ಅವರನ್ನು ಕಂಡರೆ ದೇಜಗೌ ಅವರಿಗೆ ಅಷ್ಟಕ್ಕಷ್ಟೆ. ದೇಜಗೌ ಅವರೇ ಸನ್ಮಾನವನ್ನೇರ್ಪಡಿಸಿದ ಸಂದರ್ಭದಲ್ಲಿ ಡಿ.ಎಲ್.ಎನ್. ಅವರು ಮಾತನಾಡುತ್ತ 'ಜವರೇಗೌಡರು ನನ್ನ ಶಿಷ್ಯರಂತೆ, ಒಂದು ತರಗತಿಯಲ್ಲಿ ಒಬ್ಬ ಹುಡುಗ ತುಂಬಾ ತುಂಟನಾಗಿದ್ದರೆ ಅಥವಾ ತುಂಬಾ ಅಭ್ಯಾಸನಿರತನಾಗಿದ್ದರೆ ನನಗೆ ಜ್ಞಾಪಕವಿರುತ್ತದೆ, ಜವರೇಗೌಡರು ಎರಡೂ ಗುಂಪಿಗೆ ಸೇರಿದವರಲ್ಲ. ಆದ್ದರಿಂದ ಅವರ ಹೆಸರು ನನಗೆ ಜ್ಞಾಪಕವಿರಲಿಲ್ಲ' ಎನ್ನುವ ಮಾತುಗಳನ್ನಾಡಿದುದರಿಂದ ತೀರ ಸಹಜವಾಗಿ, ಯಾವ ಉದ್ದೇಶವೂ ಇಲ್ಲದೆ ಆಡಿದ್ದುದಕ್ಕೆ ದೇಜಗೌ ಅವರು ವಿಪರೀತ ಅರ್ಥ ಕಲ್ಪಿಸಿದರು. ಅನಂತರ ದೇಜಗೌ ಮತ್ತು ಡಿ.ಎಲ್.ಎನ್. ಅವರ ನಡುವೆ ದೀರ್ಘ ಪತ್ರ ವ್ಯವಹಾರವೇ ನಡೆಯಿತಂತೆ. ಅಂತೂ ಯಾವ ಕಾರಣಕ್ಕಾಗಿಯೋ ಏನೋ ದೇಜಗೌ ಅವರು ಡಿ.ಎಲ್.ಎನ್. ಅವರನ್ನು ಇಷ್ಟಪಡುತ್ತಿರಲಿಲ್ಲ. ಯಾರ ಯಾರ ನಡುವೆ ಎಂತಹ ಸಂಬಂಧವಿದೆ ಎಂದು ನನಗೆ ಮುಖ್ಯವಾಗಲು ಸಾಧ್ಯವಿರಲಿಲ್ಲ. ನಾನು ಗುರುಗಳ ಜೊತೆ ನಿಕಟ ಸಂಬಂಧ ಹೊಂದಿದ್ದೆ. ಅವರಿಗೆ ಎಷ್ಟೇ ಹತ್ತಿರವಾದರೂ ಅವರಲ್ಲಿ ಒಂದು ಕಪ್ಪು ಚುಕ್ಕೆ ಕಾಣುತ್ತಿರಲಿಲ್ಲ. ನನ್ನ ಕಣ್ಣಿಗೆ ಗುರುಗಳು ಹಿಮಾಲಯದಷ್ಟು ಶುಭ್ರ, ಶ್ವೇತ.

ದೇಜಗೌ ಅವರು ತೀ.ನಂ.ಶ್ರೀ.ಯವರ ಖಾಸಾ ಶಿಷ್ಯರು. ಆದರೂ ಗುರುಗಳಿಗೆ ಒಂದು ಅಭಿನಂದನಾ ಗ್ರಂಥವನ್ನು ಹೊರತರಲಿಲ್ಲ. ತೀ.ನಂ.ಶ್ರೀ.ಯವರ ಮಗ ನಾಗಭೂಷಣ ಅವರೇ ತೀ.ನಂ.ಶ್ರೀ. ನಿಧನರಾದ ಮೇಲೆ ತಮ್ಮ ತಂದೆಯ ಸ್ಮರಣಾರ್ಥ ಎರಡು ಗ್ರಂಥಗಳನ್ನು ಪ್ರಕಟಿಸಿದರು. ದೇಜಗೌ ಅವರಿಗೆ ಅವರ ಶಿಷ್ಯರು ಐದಾರು ಅಭಿನಂದನ ಗ್ರಂಥಗಳನ್ನು ಸಮರ್ಪಿಸಿದರು. ಆದರೆ ದೇಜಗೌ ಅವರಿಗೆ ತಮ್ಮ ಗುರುಗಳಾದ ತೀ.ನಂ.ಶ್ರೀ.ಯವರಿಗೆ ಒಂದು ಸ್ಮರಣ ಗ್ರಂಥವನ್ನು ಪ್ರಕಟಿಸಬೇಕೆಂದು ಯಾಕೆ ಹೊಳೆಯ ಲಿಲ್ಲವೋ ತಿಳಿಯಲಿಲ್ಲ. ನಾನು ಎಂ.ಎ. ಓದುತ್ತಿದ್ದಾಗ ವಾರಕ್ಕೊಮ್ಮೆ ವಿದ್ಯಾರ್ಥಿಗಳ ಸೆಮಿನಾರ್ ನಡೆಯುವ ಪರಿಪಾಠವಿತ್ತು. ಒಬ್ಬ ವಿದ್ಯಾರ್ಥಿ ಒಂದು ಪೇಪರ್ ಓದಬೇಕು, ಇತರ ವಿದ್ಯಾರ್ಥಿಗಳು ಮತ್ತು ಅಧ್ಯಾಪಕರು ಪ್ರಶ್ನೆ ಕೇಳಲು ಅವಕಾಶವಿತ್ತು. ಸಾಮಾನ್ಯವಾಗಿ ಎಲ್ಲ ಅಧ್ಯಾಪಕರು, ಪ್ರಾಧ್ಯಾಪಕರು ಈ ಸೆಮಿನಾರ್‌ನಲ್ಲಿ ಹಾಜರಿರುತ್ತಿದ್ದರು.

ಈ ಸೆಮಿನಾರ್‌ದಲ್ಲಿ ನಾನು ಕೆ. ಎಸ್. ನರಸಿಂಹಸ್ವಾಮಿಯವರ ಕಾವ್ಯದ ಬಗೆಗೆ ಒಂದು ಪೇಪರ್ ಓದಿದೆ. ನಾನು ಕೆ. ಎಸ್. ನರಸಿಂಹಸ್ವಾಮಿಯವರ 'ಮೈಸೂರು ಮಲ್ಲಿಗೆ' ಕನ್ನಡದ ಒಂದು ಕರಗದ ಕಾಮನಬಿಲ್ಲು ಎಂದು ಹೇಳಿದೆ. ಆದರೆ ಅವರ 'ಶಿಲಾಲತೆ' ನಾನು ಮೆಚ್ಚಿಕೊಳ್ಳಲಿಲ್ಲ. 'ಇದು ಶಿಲೆಯ ಲತೆಯೇ?' ಎಂದು ಟೀಕಿಸಿದೆ.

ಸೆಮಿನಾರ್ ಮುಗಿದ ಮೇಲೆ ಎಲ್ಲ ಅಧ್ಯಾಪಕರು ನನ್ನನ್ನು ಅಭಿನಂದಿಸಿದರು. ಎಸ್. ವಿ. ಪರಮೇಶ್ವರ ಭಟ್ಟರಂತಹವರು 'ನೀವು ಇಷ್ಟು ಸಿರಿಯಸ್ ಆಗಿ ಯೋಚಿಸುತ್ತೀರಿ ಎಂದು ಅಂದುಕೊಂಡಿರಲಿಲ್ಲ' ಎಂದು ಮೆಚ್ಚುಗೆ ವ್ಯಕ್ತಪಡಿಸಿದರು.

'ಶಿಲಾಲತೆ'ಗೆ ನನ್ನ ಗುರುಗಳು ಮುನ್ನುಡಿ ಬರೆದಿದ್ದರು. ಆ ಮುನ್ನುಡಿಯಲ್ಲಿ ಒಂದೇ ಒಂದು ಟೀಕೆ ಇರಲಿಲ್ಲ. ಸೆಮಿನಾರ್ ಮುಗಿಸಿಕೊಂಡು ನಾನು ಹೋಗುತ್ತಿದ್ದಾಗ 'ಸರ್ ನೀವು ತುಂಬಾ ಹೊಗಳಿದ್ದೀರಿ. ಒಂದೇ ಒಂದು ಟೀಕೆ ಇಲ್ಲ' ಎಂದು ಗುರುಗಳಿಗೆ ಹೇಳಿದೆ. ಅದಕ್ಕೆ ಅವರು 'ಮನೆಗೆ ಹೋಗೋಣ. ಐದು ನಿಮಿಷ ಸುಮ್ಮನಿರು' ಎಂದರು.

ಗುರುಗಳು ಮನೆಗೆ ಹೋದಾಗ ಅವರ ಪುಸ್ತಕ ರಾಶಿಯನ್ನು ಕೆದುಕಿ ಒಂದು ಲೇಖನವನ್ನು ಆಯ್ದು ನನಗೆ ಕೊಡುತ್ತಾ 'ಇದನ್ನು ಓದು' ಎಂದರು. ನಾನು ನಿಧಾನವಾಗಿ ಆ ಲೇಖನವನ್ನು ಓದಿದೆ.

ನಾನು ಸೆಮಿನಾರ್ ಪೇಪರ್‌ನಲ್ಲಿ 'ಶಿಲಾಲತೆ'ಯ ಬಗ್ಗೆ ಎಂತಹ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದೆನೋ ಅದಕ್ಕಿಂತ ತೀಕ್ಷ್ಣವಾದ ಅಭಿಪ್ರಾಯವನ್ನು ನನ್ನ ಗುರುಗಳು ವ್ಯಕ್ತಪಡಿಸಿದ್ದರು. 'ಸರ್, ಪ್ರಿಂಟ್ ಆಗಿರುವ ಪ್ರತಿಯಲ್ಲಿ ಇದು ನಾಪತ್ತೆಯಾಗಿದೆ' ಎಂದೆ. ಅದಕ್ಕೆ ಅವರು 'ಇದು ಮುದ್ರಣವಾದರೆ ನನ್ನ ಕಾವ್ಯದ ಬಗೆಗೆ ಜನರಲ್ಲಿ ಒಳ್ಳೆಯ ಅಭಿಪ್ರಾಯ ಬರುವದಿಲ್ಲ, ದಯವಿಟ್ಟು ಈ ಭಾಗವನ್ನು ತೆಗೆಯಿರಿ' ಎಂದು ನರಸಿಂಹ ಸ್ವಾಮಿಯವರು ಕೇಳಿಕೊಂಡರು. ನಾನು ಅವರ ಮಾತಿಗೆ ಒಪ್ಪಿಕೊಂಡೆ ಹಾಗೂ ಇಲ್ಲಿ ಇದು ಹಾಗೆ ಇರಬೇಕು ಎಂದು ಖಡಾಖಂಡಿತವಾಗಿ ಹೇಳಲು ಸಾಧ್ಯವಾಗಲಿಲ್ಲ' ಎಂದರು.

ಹೊಸಗನ್ನಡ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಗುರುಗಳು ಹೆಚ್ಚಿಗೆ ಬರೆದಿಲ್ಲ ಎನ್ನುವ ಆಕ್ಷೇಪದ ಮಾತುಗಳನ್ನು ಕೆಲವರು ಹೇಳುತ್ತಿದ್ದುದು ನನ್ನ ಕಿವಿಗೂ ಬಿತ್ತು. ಗುರುಗಳು ಏಕೆ ಬರೆಯಲಿಲ್ಲ ಎನ್ನುವದು ನನಗೆ ಈಗ ಅರ್ಥವಾಯಿತು. ತಮಗೆ ಅನಿಸಿದ್ದನ್ನು ಪ್ರಾಮಾಣಿಕವಾಗಿ ಮುಕ್ತವಾಗಿ ಬರೆಯಲು ಅವಕಾಶವಿಲ್ಲದ ಕಾರಣ ನನ್ನ ಗುರುಗಳು ಹಿಂದಿನ ಕವಿಗಳು ಮತ್ತು ಕಾವ್ಯಗಳ ಬಗೆಗೆ ತಮ್ಮ ಬರವಣಿಗೆಯನ್ನು ಸೀಮಿತಗೊಳಿಸಿಕೊಂಡರು.

ನನ್ನ ಗುರುಗಳು ಈ ಲೋಕದಿಂದ ದೂರವಾದ ದಿನವನ್ನು ನಾನು ನನ್ನ ಜೀವನ ಪರ್ಯಂತ ಮರೆಯಲು ಸಾಧ್ಯವಿಲ್ಲ. ಅಂದು ಮಧ್ಯರಾತ್ರಿ ತೀರಿಕೊಂಡಾಗ ಅವರ ಮನೆಯವರಿಗೆ ನನ್ನನ್ನು ಸಂಪರ್ಕಿಸುವದು ಹೇಗೆಂದು ತಿಳಿಯದಾದಾಗ ಪ್ರಜಾವಾಣಿ ಕಛೇರಿಗೆ ಫೋನ್ ಮಾಡಿದರಂತೆ. ನಾನು ಅಂದು ರಾತ್ರಿ ಪಾಳೆಯದಲ್ಲಿ ಇರಲಿಲ್ಲ. ಮನೆಗಳಿಗೆ ಫೋನ್ ಹಾಕಿಸುವಷ್ಟು ಆರ್ಥಿಕ ಸೌಲಭ್ಯ ಇದ್ದಿರಲಿಲ್ಲ. ಗುರುಗಳ ಮನೆಯವರು ಯೋಚಿಸಿ ಯೋಚಿಸಿ ಮತ್ತೆ ಪ್ರಜಾವಾಣಿಗೆ ಫೋನ್ ಮಾಡಿ, 'ಹೇಗಾದರೂ ಮಾಡಿ ವೈಕುಂಠರಾಜು ಅವರಿಗೆ ಈ ವಿಷಯ ತಿಳಿಸಿ' ಎಂದರಂತೆ. ಪ್ರಜಾವಾಣಿ ಕಛೇರಿಯವರು ಜಿ. ವೆಂಕಟ ಸುಬ್ಬಯ್ಯನವರಿಗೆ ಫೋನ್ ಮಾಡಿ 'ಹೇಗಾದರೂ ಮಾಡಿ ವೈಕುಂಠರಾಜು ಅವರಿಗೆ ಈ ವಿಷಯ ತಿಳಿಸಲು ಸಾಧ್ಯವೇ' ಎಂದು ಕೇಳಿದರಂತೆ. ವೆಂಕಟಸುಬ್ಬಯ್ಯನವರಿಗೆ ಹೊಳೆದದ್ದು

ಎನ್. ಬಸವಾರಾಧ್ಯರು. ನಾನು ಮತ್ತು ಬಸವಾರಾಧ್ಯರು ಆತ್ಮೀಯ ಗೆಳೆಯರೆಂದು ವೆಂಕಟ ಸುಬ್ಬಯ್ಯನವರಿಗೆ ತಿಳಿದಿತ್ತು. ಆದ್ದರಿಂದ ಅವರು ಬಸವಾರಾಧ್ಯರಿಗೆ ಫೋನ್ ಮಾಡಿದರು.

ಬಸವಾರಾಧ್ಯರು ಹಂಪನಾ ಅವರಿಗೆ ವಿಷಯ ತಿಳಿಸಿ, ಮೈಸೂರಿಗೆ ವಿಷಯ ತಿಳಿಸಿದಾಗ ಹಂಪನಾ ತಮ್ಮ ಕಾರನ್ನು ತೆಗೆದುಕೊಂಡುಬಂದರು.

ನಮ್ಮ ಮನೆಗೆ ಬಸವಾರಾಧ್ಯರು ಬಂದಾಗ ವಿಷಯ ತಿಳಿದು ಗಟ್ಟಿಯಾಗಿ ಅಳಲು ಶುರು ಮಾಡಿದೆ. ಆಗ ನನ್ನ ಹೆಂಡತಿ ಬಾಣಂತಿ. ಅವಳಿಗೂ ವಿಷಯ ತಿಳಿಸದೇ ಹೋಗಿ ಕಾರಿನಲ್ಲಿ ಕುಳಿತೆ.

ಮೈಸೂರು ತಲುಪಿ ಗುರುಗಳ ಮನೆಗೆ ಹೋದಾಗ ಅವರ ಪಾರ್ಥಿವ ಶರೀರವನ್ನು ಅಂತ್ಯಕ್ರಿಯೆಗೆ ಕೊಂಡೊಯ್ದ ವಿಷಯ ತಿಳಿದು ಅಲ್ಲಿಂದ ಚಾಮುಂಡಿ ಬೆಟ್ಟದಲ್ಲಿರುವ ರುದ್ರಭೂಮಿಗೆ ಹೋದೆವು.



ರೀ ! ಲೇಖಕರ ತಲೆಗೆ ಅಷ್ಟೊಂದು 'ಬೆಲೆ' ಇರುತ್ತೇನ್ರೀ ?

ಬೆಂಗಳೂರಿನಿಂದ ಹೊರಡುವಾಗ ಅಳಲು ಪ್ರಾರಂಭಿಸಿದ್ದನ್ನು ರುದ್ರಭೂಮಿ ತಲುಪಿದರೂ ನಿಲ್ಲಿಸಿರಲಿಲ್ಲ. ಮತ್ತೆ ಮತ್ತೆ ಅಳು ಉಕ್ಕಿ ಬರುತ್ತಿತ್ತು. ಅಲ್ಲಿಗೆ ಬಂದಿದ್ದ ಖ್ಯಾತ ಕವಿ ಪು.ತಿ.ನ. ಅವರು 'ವಿವೇಕ ತಂದುಕೊ ಅಪ್ಪಾ, ಉದ್ವೇಗವನ್ನು ತಡೆದುಕೊ' ಎಂದು ಎಷ್ಟು ಹೇಳಿದರೂ ನಾನು ಅಳುವುದನ್ನು ನಿಲ್ಲಿಸಲಿಲ್ಲ. ಪು.ತಿ.ನ. ಅವರು ನನ್ನ ಅವಸ್ಥೆಯನ್ನು ನೋಡಿ 'ನಿನ್ನ ಸ್ಥಿತಿ ಅರ್ಥವಾಗುತ್ತದೆ, ನಿನಗೆ ಬೇಕಾದ ಗುರುಗಳನ್ನು ಪಡೆದುಕೊಂಡಿದ್ದೆ. ಆದರೆ ನಿನ್ನಂತಹ ಶಿಷ್ಯನನ್ನು ಪಡೆಯಲು ನರಸಿಂಹಾಚಾರ್ ಅದೃಷ್ಟ ಮಾಡಿದ್ದರು' ಎಂದರು. ನಾನು ಎದುರಾದಾಗ ಪು.ತಿ.ನ. ಅವರಿಗೆ ಚಾಮುಂಡಿ ಬೆಟ್ಟದ ರುದ್ರಭೂಮಿಯ ನೆನಪು ಬರುತ್ತದೆಯಂತೆ. ನನಗೂ ಒಮ್ಮೆ ಹೇಳಿದರು : ''ನಿಮ್ಮ ಹೆಸರು ಕೇಳಿದಾಗ, ನಿಮ್ಮ ನೋಡಿದಾಗ ನನ್ನ ಕಣ್ಣ ಮುಂದೆ ಬರುವುದು ಮೈಸೂರಿನ 'ಆ ಚಿತ್ರ'' ಎಂದರು.

ಈಗಲೂ ಗುರುಗಳ ಹೆಸರು ಕೇಳಿದಾಗ ದುಃಖ ಉಕ್ಕಿ ಬರುತ್ತದೆ.

'ಗುರುವಿನ ಗುಲಾಮನಾಗುವತನಕ ದೊರೆಯದಣ್ಣ ಮುಕುತಿ.'

ಎಸ್. ವಿ. ಸಂಪತ್ ಅವರು ಮಹಾರಾಜ ಕಾಲೇಜಿನಲ್ಲಿ ನನ್ನ ಅಧ್ಯಾಪಕರಾಗಿದ್ದರು. ನಿವೃತ್ತಿಯ ನಂತರ ಬೆಂಗಳೂರಿಗೆ ಬಂದು ನೆಲೆಸಿದರು. ಆಗಾಗ ಅವರು ನನ್ನನ್ನು ನೋಡಿ ಮಾತನಾಡಿಸಲು 'ವಾರಪತ್ರಿಕೆ' ಕಛೇರಿಗೆ ಬರುತ್ತಿದ್ದರು. ತಮ್ಮ ಗೆಳೆಯರಿಗೆ ನನ್ನ ಪರಿಚಯ ಮಾಡಿಕೊಡುವಾಗ 'ಡಿ.ಎಲ್.ಎನ್. ಅವರ ದತ್ತುಪುತ್ರ' ಎಂದೇ ಹೇಳುತ್ತಿದ್ದರು. ದತ್ತುಪುತ್ರನಿಗಿಂತ ಹೆಚ್ಚು! ಚಾಮರಾಜ ನಗರದಿಂದ ನನ್ನ ಪ್ರಿಯ ಮಿತ್ರರಾದ ವಿನಯ್ ಮತ್ತು ನಂದೀಶ್ ಅವರು ರೈಲಿನಲ್ಲಿ ನನ್ನ ವಿಷಯ ಮಾತನಾಡುತ್ತ ಬರುತ್ತಿದ್ದರಂತೆ. ಅವರ ಮಾತನ್ನು ಕೇಳಿಸಿಕೊಂಡ ಎದುರಿಗೆ ಕುಳಿತಿದ್ದವರೊಬ್ಬರು 'ವೈಕುಂಠರಾಜು ಅಂದ್ರೆ, ಡಿ.ಎಲ್.ಎನ್. ಅವರ ಶಿಷ್ಯರೇ' ಎಂದು ಕೇಳಿದರಂತೆ. ವಿನಯ್ ಮತ್ತು ನಂದೀಶ್ ನನಗೆ ಈ ವಿಷಯವನ್ನು ತಿಳಿಸಿದಾಗ ವಿಪರೀತ ಸಂತೋಷವಾಯಿತು. ನನಗೆ 'ಡಿ.ಎಲ್.ಎನ್. ಶಿಷ್ಯ' ಎಂದರೆ ಪ್ರಧಾನಮಂತ್ರಿ ಸ್ಥಾನಕ್ಕಿಂತ ದೊಡ್ಡದು.

ಸಾಂಸ್ಕೃತಿಕ ಕ್ಷೇತ್ರದ ಒಬ್ಬ ಮಹತ್ವದ ವ್ಯಕ್ತಿ ಲೋಕದಿಂದ ಕಣ್ಮರೆಯಾದ ಕಾಲು ಶತಮಾನದ ನಂತರ ಆತನನ್ನು ಅನೇಕರು ಮರೆತುಬಿಡುತ್ತಾರೆ. ಸಾಹಿತ್ಯ ಮತ್ತು ಇತರ ಕ್ಷೇತ್ರಗಳಲ್ಲಿ ಮಡಿದ ಅನೇಕರನ್ನು 'ಜನ ಇಷ್ಟು ಬೇಗ ಇವರನ್ನು ಮರೆತಿದ್ದಾರೆಯೇ ?' ಎನ್ನುವ ಪ್ರಶ್ನೆಗಳು ಅನೇಕರ ಬಾಯಿಂದ ಕೇಳುವದನ್ನು ನಾವು ನೋಡಿದ್ದೇವೆ. ಅಂತಹ ಪ್ರಶ್ನೆ ಎದುರಾದಾಗ ಒಂದೆರಡು ಕಡೆ ವಿಚಾರ ಸಂಕಿರಣಗಳು ನಡೆಯುವದುಂಟು. ಆದರೆ ಡಿ.ಎಲ್.ಎನ್. ವಿಷಯದಲ್ಲಿ ಹಾಗಾಗಲಿಲ್ಲ ಎನ್ನುವದು ಗಮನಾರ್ಹ.

ಡಿ.ಎಲ್.ಎನ್. ಅವರು ಸಂಪಾದಿಸಿದ ಕೃತಿಗಳಲ್ಲಿ ಅವರೇ ಬರೆದ 'ಗ್ರಂಥ ಸಂಪಾದನೆ' ಯನ್ನು ವಿದ್ವಾಂಸರು ಒಂದಲ್ಲ ಒಂದು ಸಂದರ್ಭಗಳಲ್ಲಿ ಉಪಯೋಗಿಸುತ್ತಿದ್ದಾರೆ. ಸಂಪಾದಿಸಿದ ಕೃತಿಗಳನ್ನು ಪರಿಷ್ಕರಿಸುವಾಗ 'ಗ್ರಂಥ ಸಂಪಾದನೆ'ಯ ಅಗತ್ಯ ಬಿದ್ದೇಬೀಳುತ್ತದೆ. ಹಂಪಿ ಕನ್ನಡ ವಿಶ್ವವಿದ್ಯಾನಿಲಯದ ಒಬ್ಬ ವಿದ್ವಾಂಸರು ಗ್ರಂಥ ಸಂಪಾದನೆಯಲ್ಲಿ ಅನುಸರಿಸ ಬೇಕಾದ ಮಾರ್ಗವನ್ನು 'ಡಿ.ಎಲ್.ಎನ್. ಮಾರ್ಗ' ಎಂದೇ ಹೆಸರಿಸಿದ್ದಾರೆ. ಗ್ರಂಥ ಸಂಪಾದನೆಗೆ ಸಂಬಂಧಿಸಿದಂತೆ ಡಿ.ಎಲ್.ಎನ್. ಅವರನ್ನು ಮಾತ್ರ ಹೆಸರಿಸುವದು ಗಮನಾರ್ಹ.

ನಾಲ್ಕು ಶತಮಾನ ಕಳೆದರೂ ಡಿ.ಎಲ್.ಎನ್. ಜೀವಂತವಾಗಿರುತ್ತಾರೆ.

ಡಾ|| ಬಿ. ವಿ. ವೈಕುಂಠರಾಜು
೮೨೩, ೩ನೇ ಕ್ರಾಸ್, ಶ್ರೀರಾಮಪುರ, ಬೆಂಗಳೂರು - ೫೬೦ ೦೨೧

---

೧೦ನೇ ಪುಟದಿಂದ (ಸುವರ್ಣ ಭಾರತದ ನಡುರಾತ್ರಿಯ ಚಿಂತನೆಗಳು)

ಭಯೋತ್ಪಾದಕನಾಗುವುದು ಲೇಸು. ನೀವಲ್ಲ ಸಾಯಬೇಕಾದವರು, ತಿರುಗಿಬೀಳಿ ನಿಮಗೆ ಹಾಗೆ ಹೇಳಿದವರು ಅಡಗಿರುವ, ಅವರು ಪೋಷಿಸುವ ವ್ಯವಸ್ಥೆಯ ವಿರುದ್ಧ. ೧೫೦ ವರ್ಷಗಳ ಸ್ವಾತಂತ್ರ್ಯ ಹೋರಾಟದ ಇತಿಹಾಸ ತೋರಿಸುವ ಮಾರ್ಗವೇ ಇದು. ಗಾಂಧೀಜಿ ಹಿಡಿದ ಮಾರ್ಗ ಅದು. ರೈತನ ಆತ್ಮಹತ್ಯೆ ಹೊರಗೆಡಹುವ ಸಮಸ್ಯೆ ವೈಯಕ್ತಿಕ ರೈತನ ಬಿಡಿಬಿಡಿ ಸಮಸ್ಯೆಯಲ್ಲ. ಅದು ಇಡೀ ಗ್ರಾಮೀಣ ವ್ಯವಸ್ಥೆಗೆ ಬಡಿದಿರುವ ಸೋಂಕು ರೋಗದ ಚಿಹ್ನೆ. ಒಬ್ಬೊಬ್ಬರ ಆತ್ಮಹತ್ಯೆಯಿಂದ ಅದು ಬಗೆಹರಿಯದು.

ಆದರೆ ಅದೃಷ್ಟವಶಾತ್ ನಮ್ಮ ಪ್ರಜಾಪ್ರಭುತ್ವದ ವ್ಯವಸ್ಥೆಯಲ್ಲಿ ಭಯೋತ್ಪಾದಕ ಪಟ್ಟಿ ಕಟ್ಟಿಸಿಕೊಳ್ಳದೆಯೇ ಕ್ರಾಂತಿಕಾರೀ ಹೋರಾಟಗಳನ್ನು ನಡೆಸಲು ಇನ್ನೂ ಬೇಕಾದಷ್ಟು ಅವಕಾಶವಿದೆ. ಇಂದಿನ ಪ್ರಜಾಪ್ರಭುತ್ವ ಹಲವಾರು ಮಿತಿಯೊಳಗಿನದು. ವರ್ಗಪ್ರಭುತ್ವದ ಮಿತಿಯೇ ಅದು. ಅದು ನೀಡುವ ಸಂಘಟನೆಯ ಹೋರಾಟದ ಅವಕಾಶಗಳನ್ನು ಸಂಪೂರ್ಣವಾಗಿ ಬಳಸುವ ಪ್ರಕ್ರಿಯೆಯೇ ನಮ್ಮ ಪ್ರಗತಿಪರರಿಂದ ಇನ್ನೂ ಆಗಿಲ್ಲ. ಜನತೆ ಈ ವ್ಯವಸ್ಥೆಯ ಬಗ್ಗೆ ಇನ್ನೂ ಭರವಸೆ ಇಟ್ಟುಕೊಂಡಿದ್ದಾರೆ. ಹೀಗಾಗಿ ಈ ವ್ಯವಸ್ಥೆಯೊಳಗಿನ ಅವಕಾಶಗಳನ್ನು ಸಂಪೂರ್ಣವಾಗಿ ದುಡಿಸಿಕೊಂಡಲ್ಲದೆ, ಅದರ ಬಗ್ಗೆ ಹತಾಶೆಯನ್ನು ಪ್ರಕಟಿಸುವಂತಿಲ್ಲ. ಎಂದೇ ನಮ್ಮ ಎಲ್ಲ ಹೋರಾಟಗಳನ್ನು ಪ್ರಜಾತಂತ್ರದ ವಿಕಾಸದ ಹೋರಾಟವೆಂದೇ ಪರಿಗಣಿಸಿ ನಡೆಸುವುದು ಅನಿವಾರ್ಯವಾಗಿದೆ. ಈ ವಾಸ್ತವವನ್ನು ಗ್ರಹಿಸದೆ ಕ್ರಾಂತಿಯ ಹೆಸರಿನಲ್ಲಿ ಹಿಂಸೆಯ ಹಾದಿ ಹಿಡಿಯುವುದು, ಸದ್ಯದ ಪರಿಸ್ಥಿತಿಯಲ್ಲಿ ಪ್ರತಿಗಾಮಿಗಳಿಗೆ ಪ್ರಗತಿಪರರ ವಿರುದ್ಧ ಆಯುಧ ನೀಡಿದಂತಾಗುತ್ತದೆ.

೬೦ ವರ್ಷಗಳ ಹಲವು ರಾಜಕೀಯ ಹೋರಾಟಗಳಲ್ಲಿ ನಗರ, ಕೈಗಾರಿಕೆ, ಬಂಡವಾಳದ ಬೆಳವಣಿಗೆಯೇ ಕೇಂದ್ರವಸ್ತುವಾಗಿವೆ. ರೈತ, ಗ್ರಾಮೀಣ ಕ್ಷೇತ್ರ, ಸಣ್ಣ ಉದ್ಯಮ ಇವೆಲ್ಲ ಎರಡನೆಯ ಆದ್ಯತೆಯನ್ನು ಗಳಿಸಿವೆ ಅಥವಾ ನಗಣ್ಯವೆಂಬಂತೆ ನಡೆಸಿಕೊಳ್ಳಲಾಗಿದೆ. ರಾಷ್ಟ್ರೀಯ ಆರ್ಥಿಕ ಅಭಿವೃದ್ಧಿಯ ಸೂಚಕಗಳೆಲ್ಲಾ ನಗರ ಪ್ರದೇಶಗಳಲ್ಲಿ ದಾಖಲಾದುವು. ಅದೆಂದೋ ಆಹಾರ ಸ್ವಾವಲಂಬನೆ ಎಂದು ಹಸಿರು ಕ್ರಾಂತಿಗಾಗಿ ಪ್ರಯತ್ನಿಸಿದಾಗಲೂ, ಪಟ್ಟಣಪ್ರದೇಶಗಳ ಆಹಾರದ ಅವಶ್ಯಕತೆ, ಅದನ್ನು ಆಮದಿನಿಂದ ನಿರ್ವಹಿಸಲಾಗದ ವಿದೇಶೀ ವಿನಿಮಯದ ಮುಗ್ಗಟ್ಟು, ಈ ಹಿನ್ನೆಲೆಯಲ್ಲಿ ತಾತ್ಕಾಲಿಕವಾಗಿ ಅನುಸರಿಸಿದ ನೀತಿಗಳು. ಬಡವರಿಗೆ ಪಡಿತರ ಪದ್ಧತಿಯನ್ನು ರಾಜಕೀಯ ಸಂಕ್ಷೋಭೆಗಳನ್ನು ನಿವಾರಿಸಿಕೊಳ್ಳಲು ಅರೆಮನಸ್ಸಿನಿಂದ ಅನುಸರಿಸಿದ್ದು. ಹಾಗೆಂದೇ ಒಮ್ಮೆ ನಗರದ ಬೃಹತ್ ಉದ್ಯಮಗಳ ಬೆಳವಣಿಗೆ ಅಪಾರವಾಗಿ ಸಾಧಿತವಾದ ಮೇಲೆ, ಸುಮಾರು ೧೫ ವರ್ಷಗಳಿಂದ ಗ್ರಾಮೀಣ ಮತ್ತು ಕೃಷಿಕ್ಷೇತ್ರವನ್ನು ನಿರ್ಲಕ್ಷಿಸಲಾಗಿದೆ. ಈ ಕ್ಷೇತ್ರದಲ್ಲಿ, ಸಣ್ಣ ಉದ್ದಿಮೆಗಳಲ್ಲೂ ಬಂಡವಾಳ ಹೂಡಿಕೆಯೇ ಆಗಿಲ್ಲ. ಕಾರ್ಮಿಕ ಹೋರಾಟವೂ ಕೇವಲ ಏಕಮುಖವೂ, ಸ್ವಾರ್ಥದ್ದೂ ಆಗಿ, ನಗರ ಕೇಂದ್ರಿತವಾಗಿ, ಕೃಷಿಕಾರ್ಮಿಕರು, ಅಸಂಘಟಿತ ಕಾರ್ಮಿಕರ ಕಡೆ ಗಮನ ನೀಡಲೇ ಇಲ್ಲ. ಇಂಥ ಅಭಿವೃದ್ಧಿ ಉಂಟುಮಾಡಿಸದ, ಸಂಪತ್ತಿನ ಅಸಮಾನತೆ, ರೈತರ ಆತ್ಮಹತ್ಯೆ, ಪಡಿತರ ವ್ಯವಸ್ಥೆಯ ಚೌಕಾಸಿ ಇವೆಲ್ಲಾ ಈ ಪ್ರಕ್ರಿಯೆಯ ಸೂಚಕಗಳು. ಅಂತೆಯೇ ಮುಂಬರುವ ಪ್ರಗತಿಪರ ಪ್ರಜಾಪ್ರಭುತ್ವಾತ್ಮಕ ಹೋರಾಟಗಳು ಈ ಸಮಸ್ಯೆಗಳನ್ನು ಎತ್ತಿಕೊಂಡು, ವಿಶಾಲ ತಳಹದಿಯ ಮೇಲೆ ನಡೆಯುವುದು ಅನಿವಾರ್ಯ. ಪ್ರಗತಿಪರ ರಾಜಕೀಯ ಪಕ್ಷಗಳಿಗೆ ಇದೊಂದು ಸವಾಲು. ಈ ಅರ್ಥದಲ್ಲಿ ೬೦ ವರ್ಷದ ಸ್ವತಂತ್ರ ಭಾರತದ ವ್ಯವಸ್ಥೆ ಕವಲು ಹಾದಿಯಲ್ಲಿದೆ. ಹೊಸ ಸಾಧ್ಯತೆಗಳು ತೆರೆದುಕೊಂಡಿವೆ.

ಕೆ. ಎಸ್. ಪಾರ್ಥಸಾರಥಿ
ಸಿ-೨, 'ಐಕ್ಯತಾ', ೬೦/೨, ೧೭ನೇ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು - ೫೬೦ ೦೫೫



# ಅಮೆರಿಕಾದೊಂದಿಗೆ ಸಹಕಾರದಲ್ಲಿ ಬಾಧಕವೇನೂ ಇಲ್ಲ

- ಡಾ॥ ಎಂ. ಆರ್. ಶ್ರೀನಿವಾಸನ್

ತನ್ನ ಜನವರಿ ೨೦೦೭ರ ವಿಶೇಷ ಸಂಚಿಕೆಗಾಗಿ 'ಹೊಸತು' ಡಾ॥ ಎಂ. ಆರ್. ಶ್ರೀನಿವಾಸನ್ ಅವರನ್ನು ಸಂದರ್ಶಿಸಿದ್ದಿತು. ಸಂದರ್ಶನ ಲೇಖನವು ಸಾಕಷ್ಟು ದೀರ್ಘವಾಗಿಯೇ ಪ್ರಕಟವಾಗಿದ್ದಿತು. ಅವರು ನಮ್ಮ ದೇಶದ ಖ್ಯಾತ ವಿಜ್ಞಾನಿ, ಭಾರತದ ಪರಮಾಣು ಶಕ್ತಿ ಆಯೋಗದ ಅಧ್ಯಕ್ಷರಾಗಿದ್ದವರು. ಈಗಲೂ ಅವರು ರಾಷ್ಟ್ರೀಯ ಭದ್ರತೆಯ ಬಗ್ಗೆ ಸಲಹೆ ನೀಡುವ ಸಮಿತಿಯ ಸದಸ್ಯರಾಗಿದ್ದಾರೆ. ಭಾರತ-ಅಮೆರಿಕಾ ಪರಮಾಣು ಶಕ್ತಿ ಒಪ್ಪಂದದ ಬಗ್ಗೆ ದೇಶದ ಅನೇಕ ವಿಜ್ಞಾನಿಗಳು ಸಂದೇಹಗಳನ್ನು ಪ್ರಕಟಿಸಿದ್ದಾರೆ. ಆ ಪೈಕಿ ಡಾ॥ ಶ್ರೀನಿವಾಸನ್ ಸಹ ಒಬ್ಬರು. ಈಚಿನ ಕೆಲವು ಬೆಳವಣಿಗೆಗಳ ಬಗ್ಗೆ ಪರಿಣತರ ಅಭಿಪ್ರಾಯಗಳನ್ನು ಪಡೆಯುವ ಉದ್ದೇಶದಿಂದ 'ಹೊಸತು' ಪರವಾಗಿ ಡಾ॥ ಜಿ. ರಾಮಕೃಷ್ಣ, ಕೆ. ಎಸ್. ಪಾರ್ಥಸಾರಥಿ ಮತ್ತು ಎಸ್. ಸುರೇಂದ್ರ ಅವರು ಡಾ॥ ಎಂ. ಆರ್. ಶ್ರೀನಿವಾಸನ್ ಅವರನ್ನು ಇದೇ ಜುಲೈ ೨ರಂದು ಭೇಟಿಯಾಗಿ ವಿಚಾರ ವಿನಿಮಯ ಮಾಡಿಕೊಂಡರು. ಅದನ್ನು ಭಾಗಶಃ ಇಲ್ಲಿ ಪ್ರಸ್ತುತಪಡಿಸಲಾಗಿದೆ.

**ಹೊಸತು :** ಪರಮಾಣು ಶಕ್ತಿ ಒಪ್ಪಂದದ ಬಗ್ಗೆ ಅಮೆರಿಕಾದೊಡನೆ ಜರುಗುತ್ತಿರುವ ಮಾತುಕತೆಗಳು ಸಮಾಧಾನಕರವಾಗಿಲ್ಲವೆಂದು ತೋರಿಬರುತ್ತಿದೆ. ಇತ್ತೀಚೆಗಷ್ಟೇ ಒಂದು ಘಾತುಕ ಹೇಳಿಕೆಯು ಬಂದಿದ್ದಿತು. ಅದನ್ನು ನೀಡಿದ್ದವರು ಶ್ರೀ. ಶ್ರೀಧರ ರಾವ್. ಶ್ರೀಯುತರು ರಾಷ್ಟ್ರೀಯ ಭದ್ರತೆಯ ಸಲಹಾ ಮಂಡಲಿಯ ಸದಸ್ಯರು. ಆದ್ದರಿಂದ ಅವರ ಹೇಳಿಕೆಯನ್ನು ನಾವು ಗಂಭೀರವಾಗಿ ಪರಿಗಣಿಸುತ್ತೇವೆ. ಅವರು ಹೇಳಿದ್ದಿದು : ಒಪ್ಪಂದದ ಕೆಲವು ಅಂಶಗಳ ಬಗ್ಗೆ ನಾವೇನೂ ಅಷ್ಟು ಚಿಂತಿತರಾಗಬೇಕಾಗಿಲ್ಲ. ಉದಾಹರಣೆಗೆ, ಮುಂದೊಮ್ಮೆ ಅಣ್ವಸ್ತ್ರ ಪರೀಕ್ಷೆಯನ್ನು ಮಾಡುವಂತಿರುವುದಿಲ್ಲ, ಎಂಬ ವಿಷಯ. ನಮ್ಮ ದೇಶಕ್ಕೆ ಅದು ಅಗತ್ಯವೆಂದು ಮನದಟ್ಟಾದರೆ ಅಮೆರಿಕಾದ ಅಧ್ಯಕ್ಷರು ತಮ್ಮ ಅಧಿಕಾರ ಚಲಾಯಿಸಿ ಅದಕ್ಕೆ ಸಂಬಂಧಿಸಿದ ನಿಬಂಧದಂತೆ ನಮಗೆ ಪರೀಕ್ಷೆ ನಡೆಸಲು ಸಹಾಯ ಮಾಡುತ್ತಾರೆ. ಅಲ್ಲದೆ, ಅಂತಹ ಪರೀಕ್ಷೆಯ ಅಗತ್ಯವೂ ಇಲ್ಲ. ಈಗ ಕಂಪ್ಯೂಟರ್‌ಗಳಲ್ಲಿ ಪರೀಕ್ಷೆಯ ಪ್ರತಿಚಿತ್ರವನ್ನು ಮೂಡಿಸಿ ಅಗತ್ಯವಾದ ಸಂಶೋಧನೆ ಮುಂದುವರಿಸಲು ಸಾಧ್ಯವಿದೆ.

ಈ ಹಿನ್ನೆಲೆಯಲ್ಲಿ, ನಮ್ಮ ದೇಶಕ್ಕೆ ಪ್ರತಿಕೂಲವಾದ ಒಪ್ಪಂದವಾಗಿದ್ದರೂ ಅದಕ್ಕೆ ಸಹಿ ಹಾಕಲು ಸರ್ಕಾರ ಸಿದ್ಧವಾಗುತ್ತಿದೆಯೆಂಬ ಭಾವನೆ ಬರುತ್ತಿದೆ. ಹಾಗೇನಾದರೂ ಆಗುವ ಸಂಭವವಿದೆಯೆ ?

**ಡಾ॥ ಎಂ. ಆರ್. ಶ್ರೀನಿವಾಸನ್ :** ಮಾನ್ಯ ಶ್ರೀಧರರಾವ್ ಅವರು ಏನು ಹೇಳಿದ್ದಾರೋ ಅದರ ಬಗ್ಗೆ ಹೇಳುವಂಥದೇನೂ ಇಲ್ಲ. ನೀವು ಅವರನ್ನೇ ಕೇಳಿ ತಿಳಿದುಕೊಳ್ಳಬಹುದು. ಒಂದು ಅಂಶ ಮಾತ್ರ ಸ್ಪಷ್ಟವಿದೆ : ಒಪ್ಪಂದವು ಔಪಚಾರಿಕವಾಗಿ ಸಮಗ್ರವಾಗಿರಬೇಕೆಂಬುದು ನಮ್ಮೆಲ್ಲರ ಅಭಿಪ್ರಾಯ. ಅಂತರರಾಷ್ಟ್ರೀಯ ಒಪ್ಪಂದಗಳಲ್ಲಿ ಅನೌಪಚಾರಿಕತೆಯು ಸಮರ್ಥನೀಯವಲ್ಲ. ಯಾರೋ ಅಧ್ಯಕ್ಷರು ನಮಗೆ ಪರವಾನಗಿ ನೀಡುತ್ತಾರೆಂದು ಇಂದಿನ ಒಪ್ಪಂದವನ್ನು ನಮಗೆ ಪ್ರತಿಕೂಲವಾಗಿರುವಂತೆ ಅಂಗೀಕರಿಸಲು ಸಾಧ್ಯವಿಲ್ಲ. ಇದರಲ್ಲಿ ಅನುಮಾನಗಳಿಗೆ ಎಡೆಯಿಲ್ಲ.

**ಹೊ :** ನೀವು, ಡಾ॥ ಪಿ. ಕೆ. ಅಯ್ಯಂಗಾರ್ ಅವರು, ಹಾಗೆಯೇ ಇನ್ನೂ ಕೆಲವು ವಿಜ್ಞಾನಿಗಳು ಈ ಒಪ್ಪಂದದ ಬಗ್ಗೆ ಬಹಿರಂಗವಾಗಿ ತಕರಾರುಗಳನ್ನು ಎತ್ತಿದ್ದೀರಿ. ಕೇಂದ್ರ ಸರ್ಕಾರವು ಈಗಲೂ ನಿಮ್ಮೊಡನೆ ಚರ್ಚೆ ನಡೆಸುತ್ತಿದೆಯೆ? ಅಥವಾ ಮುನಿಸಿಕೊಂಡು ನಿಮ್ಮನ್ನೆಲ್ಲಾ ದೂರವಿಡುತ್ತದೆಯೆ ?

**ಶ್ರೀ :** ಅಂತಹ ಪ್ರಮಾದವೇನೂ ಇಲ್ಲ. ಮುಕ್ತವಾದ ಚರ್ಚೆ ಬೇಕೆನ್ನುವುದೇ ಸರ್ಕಾರದ ಆಶಯ ಕೂಡ. ಕಳೆದ ವಾರವಷ್ಟೇ ನಾನು ಪ್ರಧಾನ ಮಂತ್ರಿಯವರೊಡನೆ ಒಂದೂವರೆ ಗಂಟೆಗಳ ಕಾಲ ಈ ವಿಷಯ ಚರ್ಚೆ ಮಾಡಿ ಬಂದಿದ್ದೇನೆ. ನಾವೆಲ್ಲಾ ಇದರಲ್ಲಿ ಸಮಾನಮನಸ್ಕರು.

**ಹೊ :** ಈ ಒಪ್ಪಂದವನ್ನು ೧೨೩ ಒಪ್ಪಂದವೆಂದು ಕರೆಯುವುದೇಕೆ ?

**ಶ್ರೀ :** ಅಮೆರಿಕಾದಲ್ಲಿ ಪರಮಾಣು ಇಂಧನದ ಬಗೆಗಿನ ಒಂದು ಶಾಸನವಿದೆ. ಹೊರ ರಾಷ್ಟ್ರಗಳೊಡನೆ ಮಾಡಿಕೊಳ್ಳಬಹುದಾದ ಕರಾರುಗಳನ್ನು ಕುರಿತಂತೆ ಆ ಶಾಸನದ ೧೨೩ನೆಯ ನಿಬಂಧದಲ್ಲಿ ಹಲವು ಸೂಚನೆಗಳಿವೆ. ಆದ್ದರಿಂದ ಅದಕ್ಕೆ ಆ ಹೆಸರು ಬಂದಿದೆ, ಅಷ್ಟೆ.

**ಹೊ :** ಇಂತಹ ಒಪ್ಪಂದವಿಲ್ಲದೆಯೂ ನಮ್ಮ ದೇಶವು ಪರಮಾಣು ಇಂಧನದ ಬಳಕೆಯನ್ನು ಹೆಚ್ಚಿಸಿಕೊಳ್ಳಲು, ಸಂಶೋಧನೆಗಳನ್ನು ಮುಂದುವರಿಸಲು ಸಾಧ್ಯವಿದೆಯೆ ?

**ಶ್ರೀ :** ಅದು ಯಾವ ಪ್ರಮಾಣದಲ್ಲಿರಬೇಕು ಎಂಬುದನ್ನು ಆಧರಿಸಿ ಮಾತ್ರವೇ ಇದಕ್ಕೆ ಉತ್ತರ ನೀಡಬಹುದು. ಇಂದಿನ ಪ್ರಮಾಣದಲ್ಲಿ ಎಂದಾದರೆ, ಬಹುಶಃ ಸಾಧ್ಯ. ಆದರೆ ಹೆಚ್ಚಿನ ಪ್ರಮಾಣದಲ್ಲಿರಬೇಕಾದರೆ ಇಂತಹ ಒಪ್ಪಂದಗಳು ಬೇಕು. ಏಕೆಂದರೆ ಅಣುಸ್ಥಾವರಗಳನ್ನು ಸ್ಥಾಪಿಸಲು ಹೆಚ್ಚಿನ ಇಂಧನ ಬೇಕು. ವಿದ್ಯುಚ್ಛಕ್ತಿಯ ಬೇಡಿಕೆ ಹೆಚ್ಚಿದಂತೆ ಸ್ಥಾವರಗಳೂ ಹೆಚ್ಚಬೇಕಲ್ಲ! ಅದಕ್ಕೆ ಬೇಕಾಗುವಷ್ಟು ಇಂಧನ ನಮ್ಮಲ್ಲಿಲ್ಲ. ಅದನ್ನು ಹೊರಗಿನಿಂದ ಪಡೆಯಬೇಕಾದರೆ ಇಂತಹ ಒಪ್ಪಂದಗಳು ಅವಶ್ಯಕ. ಯುರೇನಿಯಂ ಹೇರಳವಾಗಿ ಇದ್ದಿದ್ದರೆ ಒಪ್ಪಂದ ಬೇಕಿಲ್ಲವೆಂದು ಹೇಳಬಹುದಾಗಿದ್ದಿತೋ ಏನೋ! ಆದರೆ ಅದು ಅಪ್ರಾಸಂಗಿಕ. ಹೆಚ್ಚಳ ಬೇಕಾದರೆ ಇತರರ ಸಹಕಾರ ಪಡೆಯಬೇಕು. ವಿದ್ಯುಚ್ಛಕ್ತಿಯ ಕೊರತೆ ಉಂಟಾಗದಿರಬೇಕಾದರೆ ಹೆಚ್ಚಳ ಬೇಕು, ಅಷ್ಟೆ.

**ಹೊ :** ಹಾಗಾದರೆ ಪ್ರತಿಕೂಲವಾದ ಒಪ್ಪಂದವು ಅನಿವಾರ್ಯವೆ ?

**ಶ್ರೀ :** ಖಂಡಿತ ಇಲ್ಲ. ಹೈಡ್ ಕಾನೂನು ಒಪ್ಪಂದದ ಸ್ವರೂಪವನ್ನು ನಿರ್ಧರಿಸ

ಬೇಕೆಂದು ಅಮೆರಿಕಾದ ಆಶಯ. ಅದರಲ್ಲಿ ತಿದ್ದುಪಡಿಗಳು ಅವಶ್ಯಕವೆಂದು ನಮ್ಮ ನಿರ್ಧಾರ. ಚರ್ಚೆಗಳು ಸಾಗುತ್ತಿರುವುದು ಇದೇ ನಿಟ್ಟಿನಲ್ಲಿ. ನಾವು ಯಾರ ಮರ್ಜಿಯನ್ನೂ ಬಯಸುವುದಿಲ್ಲ.

**ಹೊ** : ಸಹಕಾರದ ಹೆಸರಿನಲ್ಲಿ ಪರಮಾಣು ಅಸ್ತ್ರಗಳಿಂದ ಸಜ್ಜಿತವಾದ ನಿಮಿಟ್ಸ್ ಯುದ್ಧನೌಕೆಯು ಚೆನ್ನೈ ಬಂದರಿಗೆ ಬರಬೇಕೆ ?

**ಶ್ರೀ** : ಅದರಲ್ಲಿ ತಪ್ಪೇನಿದೆ ? ಇಂತಹ ನೌಕೆಗಳು ಹಿಂದೆಯೂ ಬಂದಿವೆ. ಫ್ರಾನ್ಸ್, ಇಂಡೋನೇಷ್ಯಾ ಮೊದಲಾದ ದೇಶಗಳ ಯುದ್ಧನೌಕೆಗಳು ಕಳೆದ ವರ್ಷವೂ ಬಂದಿದ್ದವು. ಇವೆಲ್ಲಾ ಪರಸ್ಪರ ವಿನಿಮಯದ ವಿಷಯಗಳು. ಅದನ್ನು ಹಿಗ್ಗಿಸಿಕೊಳ್ಳುವ ಪ್ರಯತ್ನ ನಡೆಯುತ್ತಿರುತ್ತದೆ. ಹಾಗೆಂದು ನಮ್ಮ ದೇಶದ ಸಾರ್ವಭೌಮತ್ವವನ್ನು ಬಿಟ್ಟುಕೊಡಬೇಕೆಂದಲ್ಲ. ನಿಮಿಟ್ಸ್ ಬಗ್ಗೆ ಏನೇನೋ ತಪ್ಪು ಕಲ್ಪನೆಗಳಿವೆ. ಆ ಯುದ್ಧನೌಕೆಯಿಂದ ವಿಕಿರಣದ ಆತಂಕವಿದೆಯೆಂದು ಕೆಲವರು ಹೇಳಿದ್ದಾರೆ. ಅದರಲ್ಲಿ ಹುರುಳಿಲ್ಲ. ಸ್ವತಃ ನಾನೇ ಅಣ್ವಸ್ತ್ರಗಳಿರುವ ಯುದ್ಧನೌಕೆಗಳನ್ನು ಕೆಲಬಾರಿ ಹೊಕ್ಕುಬಂದಿದ್ದೇನೆ. ನೌಕೆಯಲ್ಲಿ ಯಾವ ದೋಷವೂ ಇಲ್ಲದಿದ್ದರೆ ಅದರಿಂದ ಅಪಾಯವೇನೂ ಉಂಟಾಗುವುದಿಲ್ಲ. ನಮ್ಮ ದೇಶವು ಇತರ ದೇಶಗಳೊಡನೆ ಸಂಪರ್ಕ ಕಳೆದುಕೊಳ್ಳುವುದು ಸಾಧ್ಯವೆ ?

**ಹೊ** : ಅಮೆರಿಕಾವು ಸರಬರಾಜು ಮಾಡಬಹುದಾದ ಯುರೇನಿಯಂಅನ್ನು ಪುನಸ್ಸಂಸ್ಕರಣ ಮಾಡಿಕೊಳ್ಳಬಹುದೆ ?

**ಶ್ರೀ** : ಅದು ನಾವು ಮಾಡಿಕೊಳ್ಳುವ ಒಪ್ಪಂದವನ್ನು ಆಶ್ರಯಿಸಿರುತ್ತದೆ. ಸಂಸ್ಕರಣಕ್ಕೆ ನಮ್ಮಲ್ಲಿ ಈಗಾಗಲೇ ಮೂರು ಸ್ಥಾವರಗಳಿವೆ. ಆದರೆ ಅವನ್ನು ಪ್ರಯೋಗಿಸಲು ಇಂಧನವನ್ನು ಸರಬರಾಜು ಮಾಡುವ ಅಮೆರಿಕಾದ ಒಪ್ಪಿಗೆ ಇರಬೇಕು. ಅದನ್ನು ಒಪ್ಪಂದದಲ್ಲಿ ಸೇರಿಸಬೇಕೆಂಬುದು ನಮ್ಮ ಆಗ್ರಹ.



ಡಾ॥ ಎಂ. ಆರ್. ಶ್ರೀನಿವಾಸನ್‌ರೊಂದಿಗೆ ಸಂಪಾದಕರು

ಈ ಎಲ್ಲ ವಿಷಯಗಳ ಬಗ್ಗೆ ಈಚಿನ ದಿನಗಳಲ್ಲಿ ನಾನು 'ದಿ ಹಿಂದು' ಪತ್ರಿಕೆಯಲ್ಲಿ ಮೂರು ಲೇಖನಗಳನ್ನು ಬರೆದಿದ್ದೇನೆ. ಆ ಪೈಕಿ ವಿಶೇಷವಾಗಿ ನೀವು ಜೂನ್ ೧೬ರ ಸಂಚಿಕೆಯಲ್ಲಿ ಪ್ರಕಟವಾಗಿರುವ ಲೇಖನವನ್ನು ಗಮನಿಸಿ.

**ಹೊ** : ಪತ್ರಿಕೆಗೆ ನೀವು ನೀಡುತ್ತಿರುವ ಸಹಕಾರಕ್ಕಾಗಿ ನಾವು ಕೃತಜ್ಞರಾಗಿದ್ದೇವೆ.

## ಸಾದರ ಸ್ವೀಕಾರ

**ಕ್ರಿಯಾತ್ಮಕ ಪರಿಸರ ಅಧ್ಯಯನ – ಮಾದರಿ ಚಟುವಟಿಕೆಗಳು**
*ಜನಾರ್ಧನ ಗುಂಗುರುಮಳೆ*
**ಪುಟ : ೩೬** **ಬೆಲೆ : ರೂ. ೪೦**

**ಪಶುಪಾಲನೆ** *ಡಾ॥ ಬಿ. ಪಿ. ಮಂಜುನಾಥ*
**ಪುಟ : ೮೮** **ಬೆಲೆ : ರೂ. ೫೦**
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

**ಗಂಡ-ಹೆಂಡಿರ ನಡುವೆ** (ಆರೋಗ್ಯ ಕುರಿತ ಲೇಖನಗಳು)
*ಡಾ॥ ಪ್ರಸನ್ನ ನರಹರಿ*
**ಪುಟ : ೧೧೨** **ಬೆಲೆ : ರೂ. ೭೦**
**ಅಂಕಿತ ಪುಸ್ತಕ**, ೫೩, ಶ್ಯಾಮ್‌ಸಿಂಗ್ ಕಾಂಪ್ಲೆಕ್ಸ್, ಗಾಂಧಿ ಬಜಾರ್ ಮುಖ್ಯರಸ್ತೆ, ಬಸವನಗುಡಿ, ಬೆಂಗಳೂರು - ೪

**ಸಾಹಿತ್ಯ ಸಲ್ಲಾಪ** (ವಿಮರ್ಶಾ ಲೇಖನಗಳು)
*ಡಾ॥ ದಸ್ತಗೀರಸಾಬ್ ದಿನ್ನಿ*
**ಪುಟ : ೯೮** **ಬೆಲೆ : ರೂ. ೪೦**
**ಕನಸು ಪ್ರಕಾಶನ**, ೪-೪-೫೭೮/೧, ಮುರಿಗೆಮ್ಮಗುಡಿ ಹತ್ತಿರ, ಜಹೀರಾಬಾದ್, ರಾಯಚೂರು - ೫೮೪ ೧೦೧

**ಕರುನಾಡ ಸಿರಿ** (ಹನಿಗವನ ಸಂಕಲನ)
*ಸಂ. : ಕೋ. ಲ. ರಂಗನಾಥ ರಾವ್*
**ಪುಟ : ೧೨೮** **ಬೆಲೆ : ರೂ. ೫೦**
**ಗುರುರಾಜ ಪ್ರಕಾಶನ**, 'ಹರಿಕೃಪ', ೨೩೬, ೧೧ನೇ ಮುಖ್ಯರಸ್ತೆ, ಏಜೀಸ್ ಲೇಔಟ್, ಅರೆಹಳ್ಳಿ ಸುಬ್ರಹ್ಮಣ್ಯಪುರ ಅಂಚೆ, ಬೆಂಗಳೂರು - ೫೬೦ ೦೬೧

**ಶಾಂತವನದಲ್ಲಿ ಬುದ್ಧ** (ಕವನ ಸಂಕಲನ) *ಪ್ರಾಚೀ*
**ಪುಟ : ೮೭** **ಬೆಲೆ : ರೂ. ೫೦**
**ಸಂಧ್ಯಾದೀಪ ಪ್ರಕಾಶನ**, ಸಂತ ಅಲೋಶಿಯಸ್ ಸಂಧ್ಯಾ ಕಾಲೇಜಿನ ಪ್ರಕಟಣಾಂಗ, ಮಂಗಳೂರು - ೩

**ಹಿಂದೂ ಧರ್ಮ ಮತ್ತು ಎಸ್. ಎಲ್. ಭೈರಪ್ಪ**
*ಪ್ರೊ॥ ಎ. ಸಿ. ಹಿರೇಒಡೆಯರ್*
**ಪುಟ : ೩೨** **ಬೆಲೆ : ರೂ. ೧೮**
**ಅಭಿರುಚಿ ಪ್ರಕಾಶನ**, ನಂ. ೩೮೬, ೧೪ನೇ ಮುಖ್ಯರಸ್ತೆ, ೩ನೇ ಅಡ್ಡರಸ್ತೆ, ಸರಸ್ವತೀಪುರ, ಮೈಸೂರು - ೯

**ಅಘನಾಶಿನಿ** (ಕವನ ಸಂಕಲನ) *ಬಿ. ಟಿ. ಗೌಡ*
**ಪುಟ : ೭೬** **ಬೆಲೆ : ರೂ. ೫೦**

**ಕಣಗಿಲ** (ಕಿರು ಕಾದಂಬರಿ) *ಜಿ. ಎಸ್. ಅವಧಾನಿ*
**ಪುಟ : ೮೮** **ಬೆಲೆ : ರೂ. ೬೦**
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ರಾಘವೇಂದ್ರ ಪ್ರಕಾಶನ**, ಅಂಬಾರಕೊಡ್ಲ, ಅಂಕೋಲಾ - ೫೮೧ ೩೧೪

**ಹಕ್ಕಿಗೂಡು** (ಕವಿತೆಗಳು) *ಪೃಥ್ವಿ*
**ಪುಟ : ೪೮** **ಬೆಲೆ : ರೂ. ೨೦**
**ಲಡಾಯಿ ಪ್ರಕಾಶನ**, ೪೨, ಪ್ರಸಾದ ಲಾಜ್, ಗದಗ

**ಅಧ್ಯಾಪಿಕೆಯ ಅಧ್ವಾನಗಳು** (ಲೇಖನಗಳು)
*ರೋಹಿಣಿ ಬಿ. ಎಮ್.*
**ಪುಟ : ೭೦** **ಬೆಲೆ : ರೂ. ೩೦**
**ಶಿಕ್ಷಕ ಸಂಗಾತಿ ಬಳಗ**, ಸುಂದರಿ ಬಾಗ್, ಉಳ್ಳಾಲ, ಮಂಗಳೂರು - ೫೭೫ ೦೨೦

**ಸೌಹಾರ್ದ** (ಎಂ. ಡಿ. ಗೋಗೇರಿಯವರ ಅಭಿನಂದನಾ ಗ್ರಂಥ)
*ಸಂ. : ಎ. ಎಸ್. ಮಕಾನದಾರ*
**ಪುಟ : ೨೧೦** **ಬೆಲೆ : ರೂ. ೧೨೦**
**ಸಾಹಿತ್ಯ ಸೌಧ ಪ್ರಕಾಶನ**, ನವ ಅಯೋಧ್ಯಾ ನಗರ, ಹುಬ್ಬಳ್ಳಿ - ೨೪

**ಪ್ರಾಚ್ಯ ಮೌಲ್ಯ** (ಶ್ರೀ ಜಿ. ಎಂ. ಮುಲ್ಲಾ ಅಭಿನಂದನ ಗ್ರಂಥ)
*ಸಂ. : ಎ. ಎಸ್. ಮಕಾನದಾರ*
**ಪುಟ : ೧೮೪** **ಬೆಲೆ : ರೂ. ೧೦೦**
**ನಿರಂತರ ಪ್ರಕಾಶನ**, ಮಾಸೂಮ್-ಮಂಜಿಲ್, ಟೆಕ್ಕೇದ ಓಣಿ, ಗಜೇಂದ್ರಗಡ - ೫೮೨ ೧೧೪, ಗದಗ

**ಕಾವೇರಿ ಕೂಗು** (ಕವನ ಸಂಕಲನ) *ಸಂ. : ಡಿ. ವಿ. ಬಡಿಗೇರ*
**ಪುಟ : ೧೦೬** **ಬೆಲೆ : ರೂ. ೮೦**
**ಜಿಲ್ಲಾ ಚುಟುಕು ಸಾಹಿತ್ಯ ಪರಿಷತ್ತು**, ವಿರೂಪಾಕ್ಷ ನಿಲಯ, ತೆಗ್ಗಿನ ಪೇಟೆ, ಗದಗ-ಬೆಟಗೇರಿ - ೫೮೨ ೧೦೨

**ನಾಟಕ ನೋಡು ಬಾ ಪ್ರೇಕ್ಷಕ** (ಲೇಖನಗಳು)
*ಪಾರ್ವತಿ ಜಿ. ಐತಾಳ್*
**ಪುಟ : ೧೨೪** **ಬೆಲೆ : ರೂ. ೯೦**
**ಎನ್.ಆರ್.ಎ.ಎಂ.ಎಚ್. ಪ್ರಕಾಶನ**, ಕೋಟೇಶ್ವರ - ೫೭೬ ೨೨೨

**ಅಧ್ಯಯನ ಕೌಶಲ** (ಕೈಪಿಡಿ) *ಡಾ॥ ಎಂ. ಟಿ. ಸತ್ಯನಾರಾಯಣ*
**ಪುಟ : ೨೮** **ಬೆಲೆ : ರೂ. ೩೦**
**ಸ್ವರ್ಣಶ್ರೀ ಪ್ರಕಾಶನ**, ೨ನೇ ಕ್ರಾಸ್, ಅಶೋಕನಗರ, ತುಮಕೂರು - ೫೭೨ ೧೦೩

**ನಿಮಗೆ ನೀವೇ ಸಹಾಯಮಾಡಿಕೊಳ್ಳುವ ಮನೋತಂತ್ರಗಳು**
*ಎನ್. ವಿಶ್ವರೂಪಾಚಾರ್*
**ಪುಟ : ೬೪** **ಬೆಲೆ : ರೂ. ೧೫**
**ತುಷಾರ ಪ್ರಕಾಶನ**, ನಂ. ೧೧೧, ೪ನೇ ಅಡ್ಡರಸ್ತೆ, ಕೆ. ಹೆಚ್. ರಂಗನಾಥ ಲೇಔಟ್, ಬಿಹೆಚ್‌ಇಎಲ್ ಎದುರು, ಮೈಸೂರು ರಸ್ತೆ, ಬೆಂಗಳೂರು - ೫೬೦ ೦೨೬

**ನಾನೂರುವ ಹೆಜ್ಜೆಗಳು** (ಕವನ ಸಂಕಲನ)
*ಮಾರುತಿ ದಾಸಣ್ಣವರ*
**ಪುಟ : ೬೯** **ಬೆಲೆ : ರೂ. ೪೦**
**ಸ್ನೇಹ ಸಂಕುಲ ಪ್ರಕಾಶನ**, ಮೂಡಲಗಿ, ಗೋಕಾಕ ತಾಲೂಕು, ಬೆಳಗಾವಿ ಜಿಲ್ಲೆ

# ಕವಿಯ ಸಾವು



**ಕ**ರಾಳ ರಾತ್ರಿ. ಹೆಪ್ಪುಗಟ್ಟಿದ ಕತ್ತಲೆ. ಕತ್ತಲೆಯ ಕಪ್ಪು ರೆಕ್ಕೆಗಳು ಪಟ್ಟಣವನ್ನು ಬಿಗಿದಪ್ಪಿದ್ದವು. ಪಟ್ಟಣದ ನೆತ್ತಿಯ ಮೇಲೆ ಪ್ರಕೃತಿ ಪರಿಶುಭ್ರ ಹಿಮದ ಹೊದಿಕೆಯನ್ನು ಉದ್ದಕ್ಕೂ ಹರಡಿತ್ತು. ಕೊರೆವ ಚಳಿಗೆ ಕಂಗೆಟ್ಟ ಜನ ಬೀದಿಯಿಂದ ಕಾಲ್ಕಿತ್ತು ಬೆಚ್ಚನೆಯ ಹಿತಕ್ಕಾಗಿ ಹಂಬಲಿಸಿ ತಮ್ಮ ಮನೆಗಳಲ್ಲಿ ಮುದ್ದೆಗೊಂಡಿದ್ದರು. ಹಾಳುಬಿದ್ದ ಹಸಿರುತೋಟಗಳ ಅನಾಹುತದ ಮೂಲ ನೆಲೆಯನ್ನು ಶೋಧಿಸುತ್ತ ಉತ್ತರದ ಗಾಳಿ ಎಲ್ಲೆಡೆಯೂ ಏಕಪ್ರಕಾರ ಬೀಸತೊಡಗಿತ್ತು. ಪಟ್ಟಣದ ಪುಟ್ಟ ಓಣಿಯಲ್ಲೊಂದು ಮುರುಕು ಗುಡಿಸಲು. ಸುರಿವ ಹಿಮದ ಭಾರದಿಂದ ಕುಸಿವ ಹವಣಿಕೆಯಲ್ಲಿದ್ದ ಆ ಮುರುಕು ಗುಡಿಸಲು ಪೂರ್ಣ ಜೀರ್ಣಾವಸ್ಥೆ ಸ್ಥಿತಿಗೊಂದು ಸಮರ್ಥ ಸಾಕ್ಷಿಚಿತ್ರ. ಮುರುಕು ಗುಡಿಸಲಿನ ಮೂಲೆಯಲ್ಲೊಂದು ಹರಕು ಚಾಪೆ. ಹರಕು ಚಾಪೆಯ ಮೇಲೊಂದು ಜೀವಂತ ಎಲುಬಿನ ಹಂದರ. ಸಾವಿನ ಸಿದ್ಧತೆಯಲ್ಲಿದ್ದ ಆ ಯುವಕನ ಕಣ್ಣುಗಳು ಮಗ್ಗಲಿನ ಮಿಣುಕುದೀಪದ ಮಂದಬೆಳಕನ್ನೇ ದಿಟ್ಟಿಸುತ್ತಿವೆ. ತುಸುಗಾಳಿಗೂ ತೀವ್ರವಾಗಿ ಹೊಯ್ದಾಡುವ ಆ ದೀಪದ ಚಡಪಡಿಕೆ ಚಿಂತಾಜನಕವಾಗಿತ್ತು. ಬದುಕಿನ ವಸಂತಕಾಲದ ವಯೋಹಂತದ ಆ ಯುವಕ ಜೀವದ ಬಿಗಿಮುಷ್ಟಿಯಿಂದ ತನ್ನನ್ನು ಬಿಡಿಸಿಕೊಂಡೊಯ್ಯುವ ಶಾಂತ ಸಂಭ್ರಮದ ಅಮೃತಕ್ಷಣದ ತೀವ್ರ ಬರುವಿಕೆಯನ್ನು ತುಂಬು ಆಶೆಗಣ್ಣುಗಳಿಂದ ಕಾತರಿಸಿ ಕಾಯುತ್ತಿದ್ದ. ಸಾವಿನ ಭೆಟ್ಟಿಗಾಗಿ ಎದೆ ತುಂಬ ಕೃತಜ್ಞತೆ ಕಟ್ಟಿಕೊಂಡು ಹಾತೊರೆಯುತ್ತ ಹಾಸಿಗೆಗೆ ಅಂಟಿಕೊಂಡಿದ್ದ. ಬಂದೇ ಬರುವುದೆಂಬ ಭರವಸೆಯ ಭಾವದಿಂದಾಗಿ ಕಳೆಗುಂದಿದ ಆತನ ಮುಖದ ಮೇಲೆ ಕಾಂತಿಯುತ ಆಶಾಕಿರಣಗಳು ಹರಡಿಕೊಂಡವು. ಬಾಡಿದ ತುಟಿಗಳ ಮೇಲೆ ಕೃತಜ್ಞತೆಯ ಮುಗುಳ್ನಗೆಯ ಮೊಗ್ಗು ಹೂಗೊಳ್ಳತೊಡಗಿತು. ಬತ್ತಿದ ಕಣ್ಣುಗಳಲ್ಲಿ ಸಾವಿನ ಭರವಸೆಯ ಶಾಂತಪ್ರಭೆ ಹಣತೆಗೊಳ್ಳತೊಡಗಿತು.

ಭಾರಿ ಶ್ರೀಮಂತರಿಂದ ತುಂಬಿ ತುಳುಕುತ್ತಿದ್ದ ಆ ಪಟ್ಟಣದಲ್ಲಿ ಕಿತ್ತುತಿನ್ನುವ ಹಸಿವನ್ನು ಒಡಲಲ್ಲಿಟ್ಟುಕೊಂಡು ಕೃಶಗೊಂಡು ಹರಕು ಚಾಪೆಯ ಮೇಲೆ ಮೈಚೆಲ್ಲಿ ಮಲಗಿದ್ದ ಆ ಯುವಕ ಒಬ್ಬ ಕವಿ. ತನ್ನ ಸುಂದರ, ಸಮೃದ್ಧ ಹಾಗೂ ಅಗಾಧಜ್ಞಾನದ ಹೇಳಿಕೆಗಳಿಂದ ಮಾನವ ಹೃದಯವನ್ನು ಚೇತೋಹಾರಿಗೊಳಿಸುವ ಸದುದ್ದೇಶದಿಂದ ಆತನನ್ನು ಈ ಕಲ್ಲುಮಣ್ಣಿನ ಲೋಕದಲ್ಲಿ ಇರಿಸಲಾಗಿತ್ತು. ಮಾನವ ಚೇತನವನ್ನು ಸಂತೈಸಲು, ಸಭ್ಯಗೊಳಿಸಲು, ಸತ್ವಶಾಲಿಗೊಳಿಸಲು ಜ್ಞಾನದೇವತೆಯಿಂದ ಕಳಿಸಲ್ಪಟ್ಟ ಆ ಕವಿ ಈ ಮಣ್ಣಿನ ಮೇಲಿನ ಒಂದು ಉದಾತ್ತ ಆತ್ಮ. ಪ್ರೀತಿಸಾಗರವನ್ನೇ ಒಡಲಲ್ಲಿಟ್ಟುಕೊಂಡ ಮಿಡಿವ ಮನದ ಮಹಾತ್ಮ. ಆದರೆ ಪಾಪ! ಈ ಭೂಮಿಯ ವಿಚಿತ್ರ ನಿವಾಸಿಗಳಿಂದ ಒಂದೇ ಒಂದು ಮುಗುಳ್ನಗೆಯ ಪುಟ್ಟ ಉಡುಗೊರೆಯೂ ಆತನಿಗೆ ದೊರೆಯದೆ ತಣ್ಣನೆಯ ಈ ಮಣ್ಣಿಗೆ ಹಾಗೂ ಮಣ್ಣಿನ ಆಕಾರಗಳಿಗೆ ತುಂಬು ಸಂತೋಷದಿಂದ ವಿದಾಯ ಹೇಳುವ ಸಂಭ್ರಮದ ಸಿದ್ಧತೆಯಲ್ಲಿದ್ದ.

ಅವನು ಕೊನೆಯ ಉಸಿರು ಎಳೆಯುತ್ತಲಿದ್ದ. ಆತನ ಏಕೈಕ ಸಂಗಾತಿ ಮಿಣುಕು ದೀಪ ಮತ್ತು ತನ್ನ ಹೃದಯದ ಭಾವನೆಗಳನ್ನೇ ಕೆತ್ತಿರಿಸಿಕೊಂಡ ಒಣಚರ್ಮದಂತಿದ್ದ ಹಲವು ಕಾಗದಗಳನ್ನು ಬಿಟ್ಟರೆ ಆತನ ಹಾಸಿಗೆ ಬಳಿ ಬೇರೆ ಯಾರೊಬ್ಬರೂ ಇಲ್ಲ. ಉಡುಗಿಹೋಗುತ್ತಿದ್ದ ತನ್ನ ಅಳಿದುಳಿದ ಶಕ್ತಿಯನ್ನು ಆಸರೆಯಾಗಿಸಿಕೊಂಡು ಸ್ವರ್ಗದತ್ತ ಮೆಲ್ಲನೆ ಕೈಗಳನ್ನೆತ್ತಿದ. ಮೋಡಗಳ ಮುಸುಕಿನಾಚೆಯ ನಕ್ಷತ್ರಗಳನ್ನು ಕಾಣುವ ಹಂಬಲದಿಂದ ಮುರುಕು ಗುಡಿಸಲಿನ ಛತ್ತಿನತ್ತ ನೆಟ್ಟ ದೃಷ್ಟಿ ತೂರುವಂತೆ ಆಶೆ ಬತ್ತಿದ ಬರಡು ಕಣ್ಣುಗಳನ್ನು ತಿರುಗಿಸಿದ.

ಮತ್ತೆ ಆತ ಹೇಳಿದ, ''ಬಾ, ಓ ಸುಂದರ ಸಾವೇ, ನನ್ನ ಆತ್ಮ ನಿನಗಾಗಿ ಹಂಬಲಿಸುತ್ತಿದೆ. ನನ್ನ ಬಳಿ ಬಾ. ನನ್ನನ್ನು ಬಿಗಿದು ಬಂಧಿಸಿದ ಈ ಜೀವದ ಕಬ್ಬಿಣದ ಸಂಕೋಲೆಗಳಿಂದ ನನ್ನನ್ನು ಬಿಡುಗಡೆಗೊಳಿಸು ಬಾ. ಅವುಗಳನ್ನು ಎಳೆದೆಳೆದು ನಾನು ದಣಿದುಹೋಗಿದ್ದೇನೆ. ಬಾ, ಓ ಮಧುರ ಸಾವೇ, ನನ್ನನ್ನು ಅಪರಿಚಿತನಂತೆ ಕಾಣುತ್ತಿರುವ ನನ್ನ ನೆರೆಹೊರೆಯವರಿಂದ ನನ್ನನ್ನು ಮುಕ್ತಗೊಳಿಸು ಬಾ. ನನ್ನನ್ನು ಪರಕೀಯನಂತೆ ಕಾಣುತ್ತಿರುವ ಅವರ ಮೌನ ಇರಿತದ ನೋವಿನಿಂದ ನನಗೆ ಮುಕ್ತಿ ಕರುಣಿಸು ಬಾ. ದೇವಭಾಷೆಯನ್ನು ಅವರಿಗೆ ಅರ್ಥೈಸಲು ನಾನು ಪಡುತ್ತಿರುವ ಪ್ರಯತ್ನಗಳೆಲ್ಲವೂ ಇಲ್ಲಿ ವ್ಯರ್ಥಗೊಳ್ಳುತ್ತಿವೆ. ದೇವ ಸಂದೇಶವನ್ನು ಅವರಿಗೆ ತಿಳಿಹೇಳಿ ತಲುಪಿಸುವ ನನ್ನ ಕಳಕಳಿಯನ್ನು ತುಂಡುತುಂಡುಗೊಳಿಸಿ ಕೆಂಡದ ಮಡಿಲಿಗೆ ಕೊಡುತ್ತಿದ್ದಾರೆ. ಅವರಿಗಾಗಿ ನನ್ನ ಇರುವಿಕೆಯನ್ನು ಅವರೇ ಅರಿಯದವರಾಗಿದ್ದಾರೆ. ಅವರ ಪಾಲಿಗೆ ನಾನು ಅರ್ಥ ಕಳೆದುಕೊಳ್ಳುತ್ತಿದ್ದೇನೆ. ಅವರಿಗೆ ಅಪರಿಚಿತನಾಗಿ ಅರ್ಥಹೀನನಾಗುತ್ತಿದ್ದೇನೆ. ಅವರು ನನ್ನನ್ನು ಅಪರಿಚಿತನಂತೆ ಕಾಣುತ್ತಿದ್ದಾರೆ. ಅದು ಅವರ ತಪ್ಪಲ್ಲ. ಅವರಿಗಾಗಿ ನಾನು ಅರ್ಥೈಸಲು ಹೆಣಗುತ್ತಿರುವ ದೇವಭಾಷೆ ಅವರಿಗೆ ಅರ್ಥವಾಗುತ್ತಿಲ್ಲ. ಬೇಗ ಬಾ, ಓ ಶಾಂತಮಯ ಸಾವೇ, ಮರೆವಿನ ಈ ಕತ್ತಲೆಯಲ್ಲಿ ನನ್ನನ್ನು ಕೊಳೆ ಹಾಕಿರುವ ಈ ಜನಜಂಗುಳಿಯಿಂದ ನನ್ನನ್ನು ಕರೆದೊಯ್ಯಲು ಬಾ. ಏಕೆಂದರೆ ಅವರಂತೆ ಅಸಹಾಯಕರ ಸುಲಿಗೆ ಹಾಗೂ ದುರ್ಬಲರ ರಕ್ತ ಹೀರುವಿಕೆ ನನ್ನಿಂದ ಆಗದು. ಅದು ನನಗೆ ಒಗ್ಗದು. ಬಂದುಬಿಡು ಓ ಸಭ್ಯ ಸಾವೇ, ನಿನ್ನ ಬಿಳಿ ರೆಕ್ಕೆಗಳಿಂದ ನನ್ನನ್ನು ತಬ್ಬಿಕೋ. ಏಕೆಂದರೆ ನನ್ನ ಸಂಗಾತಿಗಳಿಗೆ ನಾನು ಬೇಕಿಲ್ಲ. ನಾನು ಅವರಿಗೆ ಅವಶ್ಯವೆನಿಸುತ್ತಿಲ್ಲ. ನನ್ನ ಅನವಶ್ಯಕತೆಯನ್ನು ತಿವಿದು ತೋರಿಸುತ್ತಿರುವ ಅವರ ರೀತಿಯಿಂದಾಗಿ ''ಓ ಸಾವೇ, ನೀನೆಂದರೆ ನನಗೆ ಪ್ರೀತಿ.'' ಓ ಸಾವೇ ನನ್ನನ್ನು ಈಗಲಾದರೂ ಅಂತಃಕರಣದಿಂದ ಅಪ್ಪಿಕೋ. ಆಲಂಗಿಸಿಕೊ. ಮಮತೆಯ ಮುದ್ದಿನಿಂದ ನನ್ನನ್ನು ಚುಂಬಿಸಿ ಚಿರಂಜೀವಿಗೊಳಿಸು. ಜೀವ ಕರುಣಿಸಿದ ಅವ್ವನ ತುಟಿಗಳ ಅಮೃತ ಸ್ಪರ್ಶದ ಶ್ರೇಷ್ಠಾನಂದವನ್ನೇ ಸವಿದು ಗೊತ್ತಿಲ್ಲದ ಈ ನನ್ನ ತುಟಿಗಳನ್ನು ನಿನ್ನ ತುಟಿಗಳು ಇಂದು ಸ್ಪರ್ಶಿಸಲಿ. ಅನನ್ಯ ಅಕ್ಕರೆಯ ಅಕ್ಕಂದಿರ ಕೆನ್ನೆಗಳ ಸ್ಪರ್ಶವನ್ನೇ ಅರಿಯದ ಈ ನನ್ನ ತುಟಿಗಳಿಗೆ ನಿನ್ನ ತುಟಿಗಳ ಸ್ಪರ್ಶದ ಭಾಗ್ಯ ದೊರೆಯಲಿ. ಜೇನ್ಗೂಡದ ಹೃದಯದ ಮಧುರ ಪ್ರೀತಿಯ ಹಿತಸ್ಪರ್ಶದ ರೋಮಾಂಚನದ

ಇಂಗ್ಲಿಷ್ ಪಠ್ಯ : ಖಲೀಲ ಗಿಬ್ರಾನ್

ರಮ್ಯತೆಯನ್ನು ಆನಂದಿಸದ ನನ್ನ ತುಟಿಗಳನ್ನು, ಓ ಸಾವೇ ನಿನ್ನ ತುಟಿಗಳು ತೀಡಲಿ. ಬದುಕು ಕರುಣಿಸದ ಭಾಗ್ಯವನ್ನು ನಿನ್ನ ಪ್ರೀತಿ ನೀಡಲಿ. ಬಾ, ನನ್ನನ್ನು ಕರೆದುಕೋ. ನಿನ್ನ ಹೃದಯವನ್ನು ನನಗಾಗಿ ತೆರೆದು ನಿನ್ನಲ್ಲಿ ನನ್ನನ್ನು ಕರಗಿಸಿಕೊ, ಓ ನನ್ನ ಒಲವಿನ ಸಾವೇ.''

ಸಾವಿನಂಗಳಕ್ಕೆ ಧಾವಿಸುತ್ತಿದ್ದ ಕವಿಯ ಹಾಸಿಗೆಯ ಬಳಿ ಕೆನೆಬಣ್ಣದ ದೇವಕನ್ಯೆಯೊಬ್ಬಳು ಕಾಣಿಸಿಕೊಂಡಳು. ಅಲೌಕಿಕ ದಿವ್ಯ ದೈವೀ ಸೌಂದರ್ಯದ ಆ ಸುರಸುಂದರ ಕನ್ಯೆ ಹಿಮಶುಭ್ರತೆಯ ಹೂಗೊಂಚಲನ್ನು ಹಿಡಿದು ನಿಂತಿದ್ದಳು. ಮೋಹಕ ಮಹಿಮೆಯ ಆ ದೇವತೆ ಮರಣಮುಖಿ ಕವಿಯನ್ನು ಅಪ್ಪಿಕೊಂಡಳು. ಕವಿ ತಣ್ಣಗೆ ಕಣ್ಮುಚ್ಚಿದ. ಮುಚ್ಚಿದ ಕಣ್ಣು ಮುಂದೆಂದೂ ಬಿಚ್ಚದ ರೀತಿಯಲ್ಲಿ ಕಣ್ಮುಚ್ಚಿದ. ಕಾಯದ ಕಣ್ಗಳು ಮುಚ್ಚಿದವು. ಆದರೆ ಕಾವ್ಯದ ಕಣ್ಬೆಳಕು ಮಾತ್ರ ಕತ್ತಲುಗೊಳ್ಳಲಿಲ್ಲ. ಕಾಯದ ಕಣ್ಣುಗಳಲ್ಲಿ ಕತ್ತಲೆಯ ಗೂಡು. ಆದರೆ ಕಾವ್ಯದ ಕಣ್ಣುಗಳಲ್ಲಿ ನಿತ್ಯಸತ್ಯದ ನಂದಾದೀಪದ ಬೆಳಕಿನ ಗೋಪುರ. ಮೃತ್ಯುದೇವತೆಯ ಶಾಶ್ವತ ಒಲವಿನ ಚುಂಬನದಿಂದ ಕವಿಯ ಮುಖಮಂಡಲದ ತುಂಬೆಲ್ಲ ಮಂದಹಾಸ ಮಿನುಗಿತು. ಆಗ ಮುರುಕು ಗುಡಿಸಲು ಬರಿದಾಯಿತು. ಬರಡುಗೊಂಡಿತು. ಅತ್ಯಂತ ಕಟು ನಿರರ್ಥಕತೆಯ ಕಹಿ ಭಾವದಿಂದ ಕವಿ ತನ್ನ ಸುತ್ತಲೂ ಎಸೆದ ಬಿತ್ತಿದ ಬರಹಗಳನ್ನು ಹೊತ್ತ ಬಿಳಿ ಹಾಳೆಗಳನ್ನು ಬಿಟ್ಟರೆ ಅಲ್ಲಿ ಬೇರೇನೂ ಇರಲಿಲ್ಲ.

ಅಜ್ಞಾನದ ರೋಗಗ್ರಸ್ತ ಜಡನಿದ್ರೆಯಿಂದ ನೂರಾರು ವರ್ಷಗಳ ನಂತರ ಎಚ್ಚರಗೊಂಡ ಆ ಪಟ್ಟಣದ ಜನರು ಮೊಟ್ಟಮೊದಲ ಬಾರಿಗೆ ಜ್ಞಾನೋದಯದ ಹೊಂಗಿರಣಗಳನ್ನು ಕಂಡರು. ಪಟ್ಟಣದ ಅತ್ಯಂತ ಸುಂದರ ವನದಲ್ಲಿ ಒಂದು ಸ್ಮಾರಕ ಕಟ್ಟಿ ನಿಲ್ಲಿಸಿದರು. ತಮ್ಮನ್ನು ಮುಕ್ತಗೊಳಿಸಿ ಉದ್ಧರಿಸಿದ ಬರಹಗಳ ಆ ಕವಿಯ ಗೌರವಾರ್ಥ ಪ್ರತಿವರ್ಷ ಹಬ್ಬ ಆಚರಿಸಿದರು. ಅಬ್ಬಾ ! ಮಾನವನ ಅಜ್ಞಾನ ಎಷ್ಟೊಂದು ಕ್ರೂರ !!

ಇಂಗ್ಲಿಷ್ ಪಠ್ಯ : **ಖಲೀಲ ಗಿಬ್ರಾನ್**
ಕನ್ನಡಕ್ಕೆ : **ಟಿ. ವಿ. ಮಾಗಳದ**
ಗವಿಮಠ ರಸ್ತೆ, ಅಂಚೆ : ಕೊಪ್ಪಳ - ೫೮೩ ೨೩೧

---

*೧೭ನೇ ಪುಟದಿಂದ :* ***ಬೀದಿಗೆ ಬಂದ ಜಾತಿವಾದ-ಕೋಮುವಾದ***

ಪುರೋಹಿತಶಾಹಿಯಾಗಿರುವ ಅಥವಾ ಮೂಲಭೂತವಾದಿಯಾಗಿರುವ ಮನೋಧರ್ಮದವರು ಮಾತ್ರ ಹೀಗೆ ಹೇಳಲು ಸಾಧ್ಯ, ಅಪ್ಪಟ ಗಾಂಧಿವಾದಿಗಳಲ್ಲ. ಇನ್ನು ಪ್ರೊ|| ಶಾಸ್ತ್ರಿಗಳ ಪಾತ್ರ. ಈ ಪಾತ್ರವು ಲಕ್ಷ್ಮಿಯು ತಳೆಯುತ್ತ ಬಂದ ಮುಸ್ಲಿಂ ವಿರೋಧಿ ವಿಚಾರಗಳಿಗೆ ಎದುರಾಗುವ ಪಾತ್ರ. ಲಕ್ಷ್ಮಿ ಕಂಡುಕೊಂಡದ್ದನ್ನು 'ಸತ್ಯ' ಎಂದು ಕರೆದು ಆ ಪಾತ್ರವನ್ನು ಗಟ್ಟಿಗೊಳಿಸುವ ಕಾದಂಬರಿಕಾರರು ಪ್ರೊ|| ಶಾಸ್ತ್ರಿಗಳ ಪಾತ್ರವನ್ನು 'ಮಾರ್ಕ್ಸ್‌ವಾದಿ' ಎಂದು ಕರೆದು ದುರ್ಬಲಗೊಳಿಸುತ್ತಾರೆ. ಭೈರಪ್ಪನವರಿಗೆ ಗಡ್ಡ ಬಿಟ್ಟವರೆಲ್ಲ ಮಾರ್ಕ್ಸ್‌ವಾದಿಗಳಂತೆ ಕಾಣುತ್ತಾರೇನೋ! 'ಅದು ಮಾರ್ಕ್ಸಿಸ್ಟ್ ಗಡ್ಡವೋ ಆಧುನಿಕ ಮುಸ್ಲಿಂ ಗಡ್ಡವೋ' (ಪುಟ ೨೩೨) ಎಂದು ಅನುಮಾನಿಸುವ ಲಕ್ಷ್ಮಿಯ ದೃಷ್ಟಿಕೋನ ಸ್ವತಃ ಭೈರಪ್ಪನವರದೇ ಎನ್ನಿಸುತ್ತದೆ. ಹೇಗೆ ಅಪ್ಪಟ ಗಾಂಧಿವಾದಿಗಳು ಲಕ್ಷ್ಮಿ ತಂದೆಯ ಪಾತ್ರದಂತೆ ಇರುವುದಿಲ್ಲವೋ ಹಾಗೆಯೇ ಅಪ್ಪಟ ಮಾರ್ಕ್ಸ್‌ವಾದಿಗಳು ಪ್ರೊ|| ಶಾಸ್ತ್ರಿಗಳಂತೆ ಇರುವುದಿಲ್ಲ. (ಡಾ|| ಯು. ಆರ್. ಅನಂತಮೂರ್ತಿಯವರನ್ನು ಗಮನದಲ್ಲಿಟ್ಟುಕೊಂಡು ಈ ಪಾತ್ರವನ್ನು ಸೃಷ್ಟಿಸಲಾಗಿದೆಯೆಂದು ಊಹೆ ಒತ್ತಟ್ಟಿಗಿರಲಿ). ಒಟ್ಟಿನಲ್ಲಿ ಲಕ್ಷ್ಮಿಗೆ ಎದುರಾಗಬಹುದಾದ ಶಾಸ್ತ್ರಿ ಪಾತ್ರವಾಗಲಿ, ಅಮೀರನ ಪಾತ್ರವಾಗಲಿ, ಶಕ್ತಿಯುತವಾಗಿ ಬೆಳೆಯದೆ ಇರುವುದರಿಂದ ಸಮರ್ಥ ವೈಚಾರಿಕ ಮುಖಾಮುಖಿ ಸಾಧ್ಯವಾಗಿಲ್ಲ. ನಾಯಕಿಗೆ ಪ್ರತಿಯಾದ ಪಾತ್ರಗಳನ್ನು ದುರ್ಬಲವಾಗಿ ಚಿತ್ರಿಸುವ ಪೂರ್ವಾಗ್ರಹದಿಂದ ಇಡೀ ಕಾದಂಬರಿಯು ಏಕ'ಪಕ್ಷೀಯ' ಪ್ರತಿಭೆಯನ್ನು ಮೆರೆದಿದೆ. ಹಾಗೆ ನೋಡಿದರೆ ನಮ್ಮ ಪ್ರಾಚೀನ ಮಹಾಕಾವ್ಯಗಳ ಔಚಿತ್ಯ ಉನ್ನತವಾದುದು. ನಾಯಕನಿಗೆ ಸಮರ್ಥ ಎದುರಾಳಿಯಾಗಿ ಪ್ರತಿನಾಯಕನನ್ನು ಸೃಷ್ಟಿಸಬೇಕೆಂಬ ನಿಯಮವನ್ನು ನಿಷ್ಠೆಯಿಂದ ಪಾಲಿಸಿದ ಮಹಾಕಾವ್ಯಗಳು ನಿಜವಾದ 'ಮೌಲ್ಯ ಮುಖಾಮುಖಿ'ಯನ್ನು ನಡೆಸಿವೆ. ಭೈರಪ್ಪನವರ ಕಾದಂಬರಿಗೆ ಇದು ಸಾಧ್ಯವಾಗಿಲ್ಲ. ಸಾಧ್ಯವಾಗಲು ಕಾದಂಬರಿಕಾರರು ಬಿಟ್ಟಿಲ್ಲ.

ತಾನು ಬರೆದ ಐತಿಹಾಸಿಕ ಕಾದಂಬರಿಯನ್ನು ಸರ್ಕಾರ ಮುಟ್ಟುಗೋಲು ಹಾಕಬಹುದೆಂಬ ನಿರೀಕ್ಷೆಯಲ್ಲಿ, ಲಕ್ಷ್ಮಿಯು – ತನ್ನ ಕಾದಂಬರಿಯನ್ನು ಮುಟ್ಟುಗೋಲು ಹಾಕುವುದಾದರೆ ಅದಕ್ಕೆ ಆಧಾರವಾದ ಸಂಶೋಧನಾ ಕೃತಿಗಳನ್ನೂ ಮುಟ್ಟುಗೋಲು ಹಾಕಿಕೊಳ್ಳಬೇಕಾಗುತ್ತದೆಂದು ಒಂದು ಪಟ್ಟಿ ಮಾಡುತ್ತಾಳೆ. ಆ ಬೃಹತ್ ಪಟ್ಟಿಯಿಂದಲೇ ಕಾದಂಬರಿಯು ಮುಕ್ತಾಯವಾಗುತ್ತದೆ. ಆ ಪಟ್ಟಿಯು ಸ್ವತಃ ಭೈರಪ್ಪನವರ ಸಂಶೋಧನಾ ಕೃತಿಗಳ ಪಟ್ಟಿಯೆಂಬುದು ಸ್ಪಷ್ಟ. ಭೈರಪ್ಪನವರು 'ಆವರಣ' ಕಾದಂಬರಿಯನ್ನು ಸರ್ಕಾರ ಮುಟ್ಟುಗೋಲು ಹಾಕಬೇಕೆಂಬ ಒತ್ತಾಯ ಬಂದೀತೆಂದು ನಿರೀಕ್ಷಿಸಿದ್ದರೆಂದು ಕಾಣುತ್ತದೆ. ಅದಕ್ಕಾಗಿ ಈ ದೊಡ್ಡ ಪಟ್ಟಿ ಕೊಟ್ಟಿರಬಹುದು. ಆದರೆ ಕರ್ನಾಟಕದ ಪ್ರಗತಿಪರರು 'ಆವರಣ'ದ ಆಶಯವನ್ನು ಕಟುವಾಗಿ ವಿರೋಧಿಸಿದರೂ ಮುಟ್ಟುಗೋಲಿಗೆ ಒತ್ತಾಯಿಸುವುದಿಲ್ಲವೆಂದು ಅವರಿಗೇ ಈಗ ಸ್ಪಷ್ಟವಾಗಿರಬೇಕು. ಇದೊಂದು ಉದಾಹರಣೆಯಿಂದಲೇ ಅವರು ಪ್ರಗತಿಪರರ ಬಗ್ಗೆ ಪೂರ್ವಾಗ್ರಹದ ಅಭಿಪ್ರಾಯ ಹೊಂದಿದ್ದಾರೆಂದು ಹೇಳಬಹುದು. ಯಾಕೆಂದರೆ ಅವರ ನಿರೀಕ್ಷೆ ಸುಳ್ಳಾಗಿದೆ. ಅದರ ಬದಲು ಅವರ 'ಆವರಣ'ದ ಸಮರ್ಥಕರೇ ಪ್ರಜಾಪ್ರಭುತ್ವ ವಿರೋಧಿ ಗದ್ದಲಕ್ಕೆ ಮುಂದಾಗುತ್ತಿದ್ದಾರೆ. ಸತ್ಯ ಎಲ್ಲಿದೆ ಎಂಬುದು ಈಗ ಸ್ಪಷ್ಟವಾಯಿತಲ್ಲ! ಪ್ರಶ್ನೆ ಇಷ್ಟೇ ಅಲ್ಲ. ಸಂಶೋಧನ ಕೃತಿಗಳ ದೊಡ್ಡ ಪಟ್ಟಿಯಲ್ಲಿ ಮಧ್ಯಕಾಲೀನ ಭಾರತದ ಬಗ್ಗೆ ಅಧಿಕೃತ ಸಂಶೋಧಕರೆಂದು ಹೆಸರಾದ ಡಾ|| ಇರ್ಫಾನ್ ಹಬೀಬ್ ಅವರ ಕೃತಿ ಯಾಕಿಲ್ಲ? ಅಂತರ ರಾಷ್ಟ್ರೀಯ ಖ್ಯಾತಿಯ ಭಾರತದ ಇತಿಹಾಸಕಾರರಾದ ಡಾ|| ರೊಮಿಲಾ ಥಾಪರ್, ಡಾ|| ಬಿಪಿನ್ ಚಂದ್ರ, ಡಾ|| ಎಸ್. ಗೋಪಾಲ್ (ಡಾ|| ಎಸ್. ರಾಧಾಕೃಷ್ಣನ್ ಪುತ್ರ) ಇಂತಹ ಅನೇಕ ಹೆಸರುಗಳು ಯಾಕಿಲ್ಲ? 'ಆವರಣ'ವು ಪ್ರತಿಪಾದಿಸುವ ನಿಲುವುಗಳು ಮುಖಾಮುಖಿಯಾಗಬೇಕಾದ್ದು ಇಂತಹ ಸಮರ್ಥ ಇತಿಹಾಸಕಾರರ ವಿಚಾರಗಳೊಂದಿಗೆ. ಆದರೆ 'ಆವರಣ'ವು ಇಂತಹ ಮುಖಾಮುಖಿಗೆ ಸಿದ್ಧವಾಗುವ ಬದಲು ಎಲ್ಲ ಎಡಪಂಥೀಯರು ಮತ್ತು ಪ್ರಗತಿಪರರನ್ನು ಸಂಘಪರಿವಾರದವರ ಬಹಿರಂಗ ಸಭೆಯ ಭಾಷಣದ ಶೈಲಿಯಲ್ಲಿ ಲೇವಡಿ ಮಾಡುತ್ತದೆ; ಲಘುವಾಗಿ ಕಾಣುತ್ತದೆ. ಪೂರ್ವಾಗ್ರಹದಿಂದ ನಿರಾಕರಿಸುವ ನಿರ್ಧಾರ ತಳೆದು ಮಾತು ಆರಂಭಿಸುತ್ತದೆ. ಹೀಗಾಗಿ, ಭೈರಪ್ಪನವರು ಪ್ರಬುದ್ಧ, ಪ್ರತಿನಾಯಕ(ಕಿ) ಪಾತ್ರಗಳನ್ನೂ ಸೃಷ್ಟಿಸದೆ, ತಾವು ಸಂಶೋಧಿಸಿದ ಕೃತಿಗಳಿಗೆ ಭಿನ್ನವಾದ ಪ್ರಬುದ್ಧ ಇತಿಹಾಸಕಾರರನ್ನೂ ಅನುಲಕ್ಷಿಸದೆ ಏಕಮುಖೀ ಮನೋಧರ್ಮವನ್ನೇ ಸತ್ಯಾನ್ವೇಷಣೆಯ ಹೆಸರಿನಲ್ಲಿ ನಿರೂಪಿಸುತ್ತಾರೆ. ಹೀಗಾಗಿ ಆವರಣ ಕಾದಂಬರಿಯು ಆಶಯ ಮತ್ತು ಅಭಿವ್ಯಕ್ತಿ ವಿಧಾನಗಳಲ್ಲಿ ಅಪ್ರಬುದ್ಧವೂ ಅತಾರ್ಕಿಕವೂ ಆಗುತ್ತದೆ.

ಭೈರಪ್ಪನವರು ಕಾದಂಬರಿಕಾರರೇ ಅಲ್ಲವೆಂದು ಯಾರು ಹೇಳಿದರೂ ನಾನು ಒಪ್ಪುವುದಿಲ್ಲ. ಆದರೆ ಹೀಗೆ ಹೇಳಿದರೆಂದು ಪ್ರಚುರವಾದ ಡಾ|| ಯು. ಆರ್. ಅನಂತಮೂರ್ತಿಯವರು ಹಾಗೆ ಹೇಳಿಲ್ಲವೆಂದು ಸ್ಪಷ್ಟಪಡಿಸುವುದಕ್ಕೂ ಅವಕಾಶವಾಗದಂತೆ ಅಪಪ್ರಚಾರ ನಡೆದದ್ದು ಎಷ್ಟು ಸರಿ ? ಅನಂತಮೂರ್ತಿಯವರ ಎಲ್ಲ ವಿಚಾರಗಳನ್ನೂ ನನ್ನಂಥವರು ಒಪ್ಪುತ್ತೇವೆಂದಲ್ಲ. ಆದರೆ ಅವರ ಭಿನ್ನಾಭಿಪ್ರಾಯವನ್ನು ಕೆಲ ಶಕ್ತಿಗಳು ಎದುರಿಸಿದ ರೀತಿ ಸಾಂಸ್ಕೃತಿಕವಾಗಿರಲಿಲ್ಲ. ಅಂತೆಯೇ ಚಂದ್ರಶೇಖರ ಪಾಟೀಲರು 'ಆವರಣ'ದ ಬಗ್ಗೆ ಸಭೆಯೊಂದರಲ್ಲಿ ಭಿನ್ನಾಭಿಪ್ರಾಯ ವ್ಯಕ್ತಪಡಿಸಿದಾಗ ಎದ್ದು ಗದ್ದಲ ಮಾಡಿ ಮಾತಾಡಲು ಅಡ್ಡಿ ಮಾಡಿದ್ದು ಸರಿಯಲ್ಲ. ಇಂತಹ ಘಟನೆಗಳನ್ನು ಧರ್ಮನಿಷ್ಠ ಸಾಹಿತಿಗಳು ಯಾಕೆ ಖಂಡಿಸುವುದಿಲ್ಲ! ಅಬ್ಬ ! ಈ ಮೌನ ಎಷ್ಟು ಆತಂಕಕಾರಿ !

'ಆವರಣ' ಕಾದಂಬರಿಯ ಕೊನೆಯ ಭಾಗದಲ್ಲಿ ವಿವೇಕಾನಂದರ ಮಾತುಗಳನ್ನು ಉಲ್ಲೇಖಿಸುವ ಲೇಖಕಿ(ಕ) ಅದೇ ವಿವೇಕಾನಂದರ ಈ ಮಾತುಗಳನ್ನು ಗಮನಿಸಬೇಕು : 'ಪ್ರತಿಯೊಬ್ಬರೂ ಒಂದೇ ಧರ್ಮಕ್ಕೆ ಸೇರಿ, ಒಂದೇ ಮಾರ್ಗವನ್ನು ಅನುಸರಿಸುವ ದುರ್ದಿನ ಪ್ರಪಂಚಕ್ಕೆ ಬಾರದಿರಲಿ. ಆಗ ಧರ್ಮ ಮತ್ತು ಆಧ್ಯಾತ್ಮಿಕ ಭಾವನೆ ನಾಶವಾಗುವುದು. ವೈವಿಧ್ಯವೇ ಜೀವನದ ರಹಸ್ಯ... ನಮ್ಮ ಮಾತೃಭೂಮಿಯಲ್ಲಿ ಹಿಂದೂ ಮತ್ತು ಇಸ್ಲಾಂ ಧರ್ಮಗಳೆರಡೂ ಮಿಲನವಾಗಬೇಕು. ವೇದಾಂತದ ಮೆದುಳು, ಇಸ್ಲಾಮಿನ ದೇಹ-ಇದೇ ನಮ್ಮ ಪುರೋಭಿವೃದ್ಧಿಗೆ ಹಾದಿ.' ವಿವೇಕಾನಂದರ ಈ ಮಾತುಗಳು ಧಾರ್ಮಿಕ ಮೂಲಭೂತವಾದಿಗಳಿಗೆ ಅರ್ಥವಾಗುತ್ತವೆಯೇ ? ಅರ್ಥವಾದ ಗಳಿಗೆಯಿಂದ ವಿವೇಕಾನಂದರ ಹೆಸರನ್ನೇ ತಮ್ಮ ಪಟ್ಟಿಯಿಂದ ಹೊಡೆದುಹಾಕಬಹುದು ! ಮುಂದೊಂದು ದಿನ ಬಸವಣ್ಣನವರಿಗೂ ಇದೇ ಗತಿಯಾಗಬಹುದು ! ಒಟ್ಟಿನಲ್ಲಿ 'ಆನು ದೇವಾ ಹೊರಗಣವನು...' ಮತ್ತು 'ಆವರಣ' ಕೃತಿಗಳು ಕ್ರಮವಾಗಿ ವಿರೋಧ ಮತ್ತು ಸಮರ್ಥನೆಗಳ ಮೂಲಕ ಅನೇಕರ ಒಳ ಹುನ್ನಾರಗಳನ್ನು ಬಯಲುಮಾಡಿವೆ. ಇಂದು ಜಾತಿವಾದ ಮತ್ತು ಕೋಮುವಾದ ಬೀದಿಗೆ ಬಂದಿದೆ. ನಮ್ಮ ಸಾಮಾಜಿಕ-ಸಾಂಸ್ಕೃತಿಕ ಸನ್ನಿವೇಶ ಈ ವಿಷಾದದ ಹಂತವನ್ನು ಬೇಗ ಹಾದು ಹೊರಬರಲಿ.

**ಪ್ರೊ|| ಬರಗೂರು ರಾಮಚಂದ್ರಪ್ಪ**
'ಸಂವೇದನೆ', ನಂ. ೨೭೫, ೧೧ನೇ 'ಬಿ' ಅಡ್ಡರಸ್ತೆ, ೧೪ನೇ ಮುಖ್ಯರಸ್ತೆ, ವಿ.ಇ.ಟಿ. ಪಾಲಿಟೆಕ್ನಿಕ್ ಹತ್ತಿರ,
ಜೆ.ಪಿ.ನಗರ ೨ನೇ ಹಂತ, ಬೆಂಗಳೂರು - ೫೬೦ ೦೭೮

# ಶುದ್ಧೀಕರಣ ತಂತ್ರ

ದರ್ಶಿನಿ ಆಂಜನೇಯ, ವಾಚ್‌ಮನ್ ಗಣಪತಿ...

ನಾನು ನಾಸ್ತಿಕ. ನನ್ನ ಮೆಚ್ಚಿನ ದೇವರುಗಳು ಹನುಮಂತ ಮತ್ತು ಗಣಪತಿ.

ಅಸಂಗತ ಅನ್ನಿಸಬಹುದೇನೊ ? ಆದರೆ, ಭಾರತದಲ್ಲಿ, ಹಿಂದೂ ಕುಟುಂಬದಲ್ಲಿ ಹುಟ್ಟಿ ಬೆಳೆದರೆ ಸಾಕು, ಒಂದೆರಡು ದೇವತೆಗಳಾದರೂ ಏಕವಚನದ ಸ್ನೇಹಿತರಾಗಿಬಿಡುತ್ತಾರೆ.

ನಮ್ಮ ಸ್ನೇಹಿತರನ್ನು ಯಾರಾದರೂ ಹೀಗಳೆದರೆ ಅಥವಾ ಅವರೊಡನೆ ತುಚ್ಛವಾಗಿ ನಡೆದುಕೊಂಡರೆ ನಮಗೆ ಕೋಪ ಬರುವುದು ಸಹಜ ತಾನೆ?

ಆ ಸ್ನೇಹಿತರು ಆಪ್ತರಾದರೆ ಕೆಂಡದಂತಹ ಕೋಪ ಬರುವುದೂ ಸಹಜ.

ಇತ್ತೀಚಿಗೆ ನನ್ನ ಸಹೋದ್ಯೋಗಿಗಳ ಜೊತೆ ಭೀಮೇಶ್ವರಿಗೆ ಹೋಗುತ್ತಿದ್ದೆ. ಅವರಲ್ಲೊಬ್ಬ ನನ್ನ ಬಳಿ ಬಂದು ''ಇಲ್ಲೆಲ್ಲೋ ಮುತ್ತತ್ತಿ ಎಂಬ ಊರಿದೆಯಂತೆ, ನಿನಗೆ ಗೊತ್ತೆ?'' ಎಂದು ಕೇಳಿದ. ನನಗೆ ಆಶ್ಚರ್ಯವಾಯಿತು. ಎರಡೋ ಮೂರೋ ವರ್ಷಗಳ ಹಿಂದೆ ಪಕ್ಕದ ರಾಜ್ಯದಿಂದ ಬಂದು ಬೆಂಗಳೂರಿನಲ್ಲಿ ನೆಲೆಸಿದ ಇವನಿಗೆ ಇದ್ಯಾವುದೋ ಸಣ್ಣ ಊರಿನ ಉಸಾಬರಿ ಏಕೆ ? ಅವ ಹೇಳಿದ, ''ಅಲ್ಲಿ ಒಂದು ಆಂಜನೇಯನ ದೇವಸ್ಥಾನವಿದೆಯಂತೆ. ನಾವೇನಾದರೂ ಕೇಳಿದರೆ ಬೇಗ ಕೊಟ್ಟುಬಿಡುತ್ತಾನಂತೆ.''

ನನಗೆ ರೇಗಿತು. ಕೇಳೇ ಬಿಟ್ಟೇ. ''ಓಹೋ, ಅಂದರೆ ದರ್ಶಿನಿ ಆಂಜನೇಯ ಅನ್ನು'' ಕೂಪನ್ ತೊಗೊಂಡು ಕೌಂಟರ್ ಮೇಲೆ ಬಡಿದರಾಯಿತು. ಬೇಕಾದ ತಿಂಡಿ ಹಾಜರ್ ! ಪಾಪ, ಆ ಆಂಜನೇಯನಿಗೆ ಬೇರೆ ಕೆಲಸವೇ ಇಲ್ಲವೇನೊ !

ನಮ್ಮ ಆಂಜನೇಯನಿಗೆ ಹೀಗಾಗಬಾರದಿತ್ತು. ಪಾಪ ! ಸುಸಂಸ್ಕೃತ, ''ಕನ್ನಡ ಕುಲಪುಂಗವ'', ಬಲಶಾಲಿ, ವೀರ, ಶೂರ ಆಂಜನೇಯನಿಗೆ ಹೀಗಾಗಬಾರದಾಗಿತ್ತು.

ಮೂರು ರಸ್ತೆಗಳು ಸೇರುವಲ್ಲಿ, ಅವುಗಳಲ್ಲಿನ ಒಂದು ರಸ್ತೆಯ ಎದುರಿಗಿರುವ ನಿವೇಶನ ಒಳ್ಳೆಯದಲ್ಲವಂತೆ. ಹೀಗೆ ಮೂರು ರಸ್ತೆಗಳು ಸೇರುವಲ್ಲಿ, ಆಗಾಗ್ಗೆ ಒಡೆದ ಕೋಳಿ ಮೊಟ್ಟೆ ಬಿದ್ದಿರುವುದನ್ನು ನೋಡಿದರೆ ಅಂತಹ ಜಾಗಗಳು ಮಂತ್ರ ತಂತ್ರಗಳಿಗೂ ಪ್ರಶಸ್ತ ಸ್ಥಳವಿರಬೇಕು ಎನ್ನಿಸುತ್ತದೆ. ಲಕ್ಷಾಂತರ ಮಕ್ಕಳು ಸರಿಯಾದ ಊಟವಿಲ್ಲದೆ ಸಾಯುತ್ತಿರುವ ಈ ದೇಶದಲ್ಲಿ ಹಾಗೆ ಅದನ್ನು ಹಾಳುಮಾಡುವುದಕ್ಕೆ ಹೇಗೆ ಮನಸ್ಸು ಬರುತ್ತೋ ಗೊತ್ತಿಲ್ಲ! ಅಂತಹ ನಿವೇಶನಗಳಲ್ಲಿ ಮನೆ ಕಟ್ಟಿದರೆ ಆ ಮನೆಯನ್ನೂ ಮನೆ ಕಟ್ಟಿಸಿದವನನ್ನೂ ಕಾಪಾಡುವುದು ಬಹಳ ಸುಲಭ. ಅದರ ಕಾಂಪೌಂಡ್ ಗೋಡೆಯಲ್ಲಿ ಒಂದು ಗಣೇಶನನ್ನು ಕೂಡಿಸಿ, ಕಳ್ಳರು ಅವನನ್ನೇ ಕದಿಯದಿರುವಂತೆ ಅವನಿಗೊಂದು ಕಬ್ಬಿಣದ ಬಾಗಿಲು ಮಾಡಿ ಅವನನ್ನು ಕೈದು ಮಾಡಿದರೆ ಸಾಕು. ಅವನು ಆ ಮನೆಯನ್ನು ಕಾಯುತ್ತಾ ಇರುತ್ತಾನೆ. ಈ ಭದ್ರತೆಗೋಸ್ಕರ ಅಷ್ಟು ಕಾಸನ್ನು ಕೂಡ ಖರ್ಚುಮಾಡಲು ಮನಸ್ಸಿಲ್ಲದಿದ್ದಲ್ಲಿ ಚಿಂತೆಯಿಲ್ಲ. ರಂಗುರಂಗಿನ ಗಣೇಶನನ್ನು ಬಚ್ಚಲುಮನೆಗೆ ಸಾಮಾನ್ಯವಾಗಿ ಉಪಯೋಗಿಸುವಂತಹ ಟೈಲ್‌ನ ಮೇಲೆ ಮೂಡಿಸಿ ಟೈಲ್ ಅಂಗಡಿಗಳಲ್ಲಿ ಮಾರುತ್ತಾರೆ. ಅದನ್ನು ತಂದು ಆ ಗೋಡೆಗೆ ಅಂಟಿಸಿದರೂ ಆಯಿತು. ಅವನು ತೆಪ್ಪಗೆ ಮನೆ ಕಾಯುತ್ತಾನೆ.

ವಿದ್ಯಾಗಣಪತಿ, ಶಕ್ತಿಗಣಪತಿ, ವಿಘ್ನವಿನಾಶಕ, ಇತ್ಯಾದಿಯಾಗಿ ಹೊಗಳಿಸಿಕೊಂಡು,ತನ್ನ ಜ್ಞಾನದ ಆಧಾರದ ಮೇಲೆ ವ್ಯಾಸನ ಸ್ಟೆನೊ ಆಗಿ ಪ್ರಸಿದ್ಧಿ ಪಡೆದ ಆ ಚಿರಂಜೀವಿಗೆ ಈ ಗತಿ ಬರಬಾರದಾಗಿತ್ತು.



ಸೂಪರ್ ಸ್ಪೆಷಲೈಸೇಶನ್‌ನ ಇಂತಹ ಯುಗದಲ್ಲಿ ಅದರ ಹಾವಳಿ ದೇವರುಗಳಿಗೆ ತಗಲದೆ ಇರಲು ಸಾಧ್ಯವೆ ? ಉದಾಹರಣೆಗೆ, ಆಂಧ್ರದಲ್ಲೆಲ್ಲೊ ಒಬ್ಬ ''ವೀಸಾ ವೆಂಕಟೇಶ್ವರ'' ಇದ್ದಾನಂತೆ. ಅಮೆರಿಕೆಯ ವೀಸಾ ದೊರೆತರೆ ಬದುಕು ಸಾರ್ಥಕ ಎಂದುಕೊಳ್ಳುವವರಿಗೆ ಅದು ದೊರೆಯದೆಹೋದರೆ ಎಂತಹ ಆಘಾತ ! ತೊಂದರೆಯಿಲ್ಲ. ಈ ವೀಸಾ ವೆಂಕಟೇಶ್ವರನ ಮೊರೆಹೊಕ್ಕು, ಅವನ ಅರ್ಚಕನ ಕೈ ಬೆಚ್ಚಗೆ ಮಾಡಿದರಾಯಿತು. ನಿಮಗೆ ಅಮೆರಿಕಾದ ವೀಸಾ ಸಿಗುವುದು ಖಚಿತ.

ಪಾಪ, ಏಳು ಗಿರಿಯೊಡನಾದ ಆ ವೆಂಕಟೇಶನಿಗೆ ಈ ಗತಿ ಬರಬಾರದಾಗಿತ್ತು.

ವೀಸಾ ಕೊಡಿಸಲು ವೆಂಕಟೇಶ್ವರ ಒಬ್ಬನೇ ಮುಂದಾಗಿಲ್ಲವೆನ್ನಿ. ಚೆನ್ನೈನ ಒಂದು ಇಗರ್ಜಿಯಲ್ಲೂ ಸಹ ನಿಮ್ಮ ಇಷ್ಟ ನೆರವೇರುತ್ತದೆ. ಅಲ್ಲಿಗೆ ನಿಮ್ಮ ಪಾಸ್‌ಪೋರ್ಟ್ ತೆಗೆದುಕೊಂಡು ಹೋಗಿ. ಅಲ್ಲಿಯ ಪಾದ್ರಿ ಅದರ ಮೇಲೆ ಪವಿತ್ರ ನೀರನ್ನು ಚಿಮುಕಿಸಿ ನಿಮ್ಮನ್ನೋ ಆ ಪಾಸ್‌ಪೋರ್ಟನ್ನೋ ಆಶೀರ್ವದಿಸುತ್ತಾನೆ. ನಿಮಗೆ ಅಮೆರಿಕೆಯ ವೀಸಾ ಖಚಿತ. ಅಮೆರಿಕಾದ ಕಾನ್ಸುಲೇಟ್ ಹತ್ತಿರವಿರುವುದರಿಂದಲೋ ಏನೋ ಇದು ಆಂಧ್ರದ ವೀಸಾ ವೆಂಕಟೇಶ್ವರನಷ್ಟೇ ಪ್ರಭಾವಶಾಲಿಯಂತೆ.

ಇನ್ಯಾವ ವಿಧದಲ್ಲಿ ಇಲ್ಲದಿದ್ದರೂ ಸರಿ, ಎಲ್ಲ ಮತಗಳ ಅನುಚರರೂ ಮೂಢನಂಬಿಕೆಗಳ ವಿಚಾರದಲ್ಲಿ ಸಮಾನರೇ.

ಸ್ವಾರ್ಥಕ್ಕಾಗಿ ಇತರ ಧರ್ಮಗಳ ಮಾರಾಟಗಾರರ ಹಿಂದೆ ಹೋಗಲು ಯಾವ ಅಡ್ಡಿ ಆತಂಕಗಳೂ ಇಲ್ಲವೆನ್ನಿ. ಆ ಬೆನ್ ಹಿನ್ ಬಂದರೆ ಅವನ ಬೆನ್ನ ಹಿಂದೆ ಬಿದ್ದು, ಅವನ ಕೈಯಿಂದ ದೂಕಿಸಿಕೊಂಡು ಹಿಂದೆ ಬಿದ್ದು ಕುಲಗೆಟ್ಟರೂ ಸುಖವಿಲ್ಲ ಎಂಬಂತೆ ಹಿಂದೆ ಬರುತ್ತೇವೆ. ಕೆಲವರು ಅದಕ್ಕೆಲ್ಲ ಆಕ್ಷೇಪಣೆ ಎತ್ತಿದರೂ ''ಅವರ ಮೂಢನಂಬಿಕೆಗಳಿಗಿಂತ ನಮ್ಮ ಮೂಢನಂಬಿಕೆಗಳೇ ಮೇಲು'' ಎಂಬ ಧೋರಣೆಯಿಂದಲೇ ಹೊರತು ಮೂಲಭೂತವಾಗಿ ಮೂಢನಂಬಿಕೆಗಳ ವಿರುದ್ಧದಿಂದಲ್ಲ.

ನಾವು ನಮ್ಮ ದೇವರುಗಳನ್ನು ಎಂತಹ ದುಃಸ್ಥಿತಿಗೆ ಕೊಂಡೊಯ್ದರೂ ಪರವಾಗಿಲ್ಲ; ಇತರರು ನಮ್ಮ ದೇವರುಗಳಿಗೆ ಕಿಂಚಿತ್ ಅನಾದರ ತೋರಿದರೂ ಸಾಕು, ಹಿಂದೂ ಧರ್ಮದ ಸ್ವಯಂಘೋಷಿತ ರಕ್ಷಕರು ಅದೇ ದೇವರುಗಳನ್ನು ರಕ್ಷಿಸಲು ಮುಂದಾಗುತ್ತಾರೆ. ಎಷ್ಟರಮಟ್ಟಿಗೆಂದರೆ, ಸರ್ವಪಾಪನಾಶಿನಿ ಗಂಗೆಯ ಬಳಿ ಮುಶರ್ರಫ್ ಹೋಗಿ ಬಿಟ್ಟರಂತೆ. ಅದರಿಂದ ಆ ಗಂಗೆ ಕಲುಷಿತಳಾದಳಂತೆ. ಆ ಮಹಾತಾಯಿಯ ಶುದ್ಧೀಕರಣ ಮಾಡಿದರು ಈ ಮಂದಿ ! ತೊಗಲು ಹದಮಾಡುವ ಕೈಗಾರಿಕೆ ಮತ್ತು ರಾಸಾಯನಿಕ ಕಾರ್ಖಾನೆಗಳಿಂದ ಪ್ರದೂಷಣಗೊಂಡು,ಅದರಲ್ಲಿ ಸ್ನಾನ ಮಾಡಿದರೇ ಜೀವನ್ಮುಕ್ತಿ ಪಡೆಯುವಂತಾಗಿರುವ ಆ ಮಹಾನ್ ನದಿಯನ್ನು ಕೇಳುವವರಿಲ್ಲ. ಮುಶರ್ರಫ್ ಮಹಾಶಯ ಬಂದ ಎಂದು ಅದಕ್ಕೆ ಶುದ್ಧೀಕರಣ !

ಸಕಲವನ್ನೂ ನುಂಗಿ ಬೂದಿ ಮಾಡಬಲ್ಲ, ಎಲ್ಲ ಸತ್ಕಾರ್ಯಗಳಿಗೂ ಸಾಕ್ಷಿಯಾದ ಆ ಅಗ್ನಿಯನ್ನೂ,ಇದೇ ತರಹ, ನೀರು ಚಿಮುಕಿಸಿ ಶುದ್ಧಿಮಾಡಿ ಅವನನ್ನೂ ಇಂಗಿಸೇಬಿಡುವ ದಿನ ದೂರವಿಲ್ಲವೇನೊ !

**ಜೆ.ಎಲ್. ಅನಿಲ್ ಕುಮಾರ್**
೪೬೯, ೯ನೆಯ ಅಡ್ಡರಸ್ತೆ, ಜಯನಗರ
೧ನೇ ಬ್ಲಾಕ್, ಬೆಂಗಳೂರು - ೫೬೦ ೦೧೧

# ಅಬ್ಬೂ-ರಾಧಾ ಪ್ರಣಯ ಪ್ರಸಂಗ

ವಿ. ಎಸ್. ಎಸ್. ಶಾಸ್ತ್ರಿ

ಅಂದಿನ ಪೇಜ್ ಮೇಕಪ್ ಆಗತಾನೇ ಮುಗಿದಿತ್ತು. ಗಂಟೆ ೪.೩೦ ಆಗಿತ್ತು. ಐದು ಗಂಟೆಗೆ ಆಫೀಸ್ ಬಿಡಬೇಕೆಂದಿದ್ದೆ. ಸಾಪ್ತಾಹಿಕದ ಪ್ರೂಫ್ ಮುಂದಿಟ್ಟ ಅಬ್ಬೂ.ತಲೆತಗ್ಗಿಸಿ ಕೆಲಸಮಾಡುತ್ತಿದ್ದ ನನಗೆ ಅಬ್ಬೂ ಬಂದದ್ದು ತಿಳಿದದ್ದು ನನ್ನ ಮೂಗಿನಿಂದ. ಆ ತೀಕ್ಷ್ಣ ವಾಸನೆ ಕನಿಷ್ಠ ಹತ್ತು ಅಡಿಗಾದರೂ ಹಬ್ಬಿರುತ್ತಿತ್ತು. ನಮ್ಮ ಅಬ್ಬೂ ಪ್ಯಾಕೆಟ್‌ವೀರ. ಅದಿಲ್ಲದೆ ನಿಲ್ಲಲೂ ಆಗುತ್ತಿರಲಿಲ್ಲ.

ಇನ್ನೂ ನಿಂತಿದ್ದ ಗಬ್ಬು ವಾಸನೆಯ ಅಬ್ಬೂವನ್ನು ಸಿಟ್ಟಿನಿಂದ ನೋಡಿದೆ. ''ಸಾರ್ ನಿಮಗೊಂದು ಸ್ಟೋರಿ ಕೊಟ್ಟರೆ ೫೦ ರೂಪಾಯಿ ಕೊಡ್ತೀರಾ.''

''ಖಂಡಿತ ಕೊಡ್ತೀನಿ. ಆದರೆ ನಾಳೆ ಬಾ. ಈಗಾಗಲೇ ಟೈಮಾಯ್ತು'' ಎಂದೆ.

''ಇಲ್ಲ ಸಾರ್ ಈಗಲೇ ಬೇಕಾಗಿತ್ತು.''

''ನಿಂಗೆ ಸಾಲ ಬೇಕೇನೋ ? ಅದಕ್ಯಾಕೆ ಸ್ಟೋರಿ ಕೊಡ್ತೀನಿ ಅಂತ ಪೀಠಿಕೆ ಹಾಕ್ತೀಯಾ ? ತೊಗೋ'' ಎಂದು ೫೦ರ ಒಂದು ನೋಟು ನೀಡಿದೆ.

''ಬೇಡಾ ಸಾರ್, ನೋಟು ಬೇಡ. ಚಿಲ್ಲರೆ ಬೇಕು. ಸಾಲ ಅಲ್ಲ ಸಾರ್. ನಿಮಗೆ ಐಡಿಯಾ ಕೊಡೋದಿಕ್ಕೆ ಫೀಜು ಸಾರ್'' ಅಂದ.

ಎಲಾ ಇವನಾ ! ಯಾವತ್ತೂ ಹೀಗೆ ಕೇಳಿರಲಿಲ್ಲ. ''ಏನು ಸ್ಟೋರಿ ! ಹೇಳು ?'' ಎಂದೆ.

''ಸಾರ್ ನಿಮ್ಮಂತಹವರ ಕೈಗೆ ಇಂತಹ ಸ್ಟೋರಿ ಸಿಕ್ಕರೆ ಅದನ್ನ ಸಿನೆಮಾ ಮಾಡಿಬಿಡ್ತೀರಾ ಸಾರ್. ಇಲ್ಲದಿದ್ರೆ ಧಾರಾವಾಹಿ ಬರೆದುಬಿಡ್ತೀರಾ ಸಾರ್'' ಎಂದ. ಈ ಮಾತಿನಿಂದ ನಾನು ಅಂದುಕೊಂಡಿದ್ದಕ್ಕಿಂತಲೂ ಏನೋ ಹೆಚ್ಚಿನದು ಇದೆ ಅಂತ ಅಬ್ಬೂ ಮನವರಿಕೆ ಮಾಡಿಕೊಟ್ಟ.

ಅನೇಕ ಬಾರಿ ಹೀಗಾಗಿದೆ. ಪತ್ರಿಕೆಯ ಎಲ್ಲಾ ಮೂಲೆಗಳಲ್ಲೂ ಕೈಯಾಡಿಸಬೇಕಾದ ಜವಾಬ್ದಾರಿ ಇರೋದ್ರಿಂದ, ಹೊಸ ಐಡಿಯಾಗಳಿಗೆ, ಕಾರ್ಟೂನುಗಳಿಗೆ, ಬಾಕ್ಸ್ ಐಟಂಗಳಿಗೆ, ಕಡೆಯ ಪುಟದ ಚೆಲುವೆಯರ ಫೋಟೋಗಳಿಗೆ ನಮ್ಮ ಅಬ್ಬೂ ಮತ್ತವನ ಪ್ರಿಂಟಿಂಗ್ ಗ್ಯಾಂಗ್‌ನ ನೆರವು ತೆಗೆದುಕೊಂಡಿದ್ದೇನೆ. ಅನೇಕ ಬಾರಿ ಧಾರಾವಾಹಿಯ ಕಂತು ಟಪಾಲಿನಲ್ಲಿ ಬರದೆ ಅಥವಾ ಲೇಟಾಗಿ ಬಂದರೂ ಬರಹ ಕಾಣದಿರುವುದೂ ಆದಾಗ, ಅರ್ಜೆಂಟಾಗಿ ನಮ್ಮ ಪ್ರಿಂಟ್ ಪಟಾಲಂನನ್ನು ಸೇರಿಸಿಕೊಂಡು, ನನ್ನ ಕಷ್ಟ ಹೇಳಿಕೊಂಡಾಗ – ಒಂದು ಹತ್ತು ನಿಮಿಷದಲ್ಲಿ, ತಮಗೆ ತೋಚಿದಂತೆ ಕಥೆ ಮುಂದುವರೆಸಿ, ಹತ್ತಾರು ತಿರುವುಗಳನ್ನು ಪಟಪಟನೆ ಹೇಳಿಬಿಡುತ್ತಿದ್ದರು. ಅವರು ಮಾತನಾಡುತ್ತಿದ್ದಂತೆಯೇ ಧಾರಾವಾಹಿಯ ಫಿಲ್ಲರ್ ಕಂತನ್ನು ಬರೆದು ಮುಗಿಸಿದ ಸಂದರ್ಭಗಳಿವೆ. ಹಾಗಾಗಿ ನಮ್ಮ ಪೇಪರ್ ಆಫೀಸಿನಲ್ಲಿ ಅಬ್ಬೂ ಮತ್ತವನ ಕಂಪನಿ, ಸ್ಟೋರಿಗಳಿಗೆ ಬಹಳ ನಂಬಿಕೆ ಗಳಿಸಿದೆ.

ಆದ್ದರಿಂದ ''ಅದೇನು ಸ್ಟೋರಿ, ಸ್ಟೋರಿ ಅಂತ ಹೇಳ್ತಾ ಇದ್ದೀಯಾ, ಬೇಗ ಹೇಳು. ನಿನ್ನ ಪ್ಯಾಕೆಟ್ ವಾಸನೆ ಮೂಗಿಗೆ ಬಡೀತಾ ಇದೆ'' ಅಂದೆ.

''ಅದೇನು ಬಯ್ತೀರೋ ಬಯ್ಯಿರಿ ಸಾರ್, ನಾನು ಯಾಕೆ ಕುಡೀತೀನಿ ಅಂತ ನಿಮಗೇ ಗೊತ್ತು. ನಂಜೊತೆ ಬನ್ನಿ ಸಾರ್, ನಿಮಗೆ ನನ್ನ ಸ್ಟೋರಿ ತೋರಿಸ್ತೀನಿ.''

''ನಿಂಜೊತೇ ಬರೋದೇ, ಯಾವುದಾದರೂ ಗಡಂಗ್‌ಗೋ ಹೇಗೆ ? ಸಾಧ್ಯವೇ ಇಲ್ಲ'' ಎಂದೆ.

''ದಯಮಾಡಿ ಬನ್ನಿ ಸಾರ್. ನೀವೊಂದು ಜೀವ ಉಳಿಸ್ತೀರಿ ಸಾರ್'' ಎಂದು ಗೋಗರೆದ.

''ಸರಿ. ಆದರೆ ಅರ್ಧ ಗಂಟೆಯೊಳಗೆ ಕಳಚಿಕೊಳ್ಳಬೇಕು ಆಯ್ತಾ! ನಡಿ ಹಾಗಾದರೆ'' ಎಂದು ಅಬ್ಬೂವಿನ ಜೊತೆ ಕಾಲುಹಾಕಿದೆ.

''ಶಿವಾಜಿನಗರದ ಚರ್ಚ್ ಬಳಿ ಹೋಗಬೇಕು ಸಾರ್'' ಎಂದ ಅಬ್ಬೂ.

''ಸರಿ ಆಟೋ ಹತ್ತು'' ಎಂದು ಅಬ್ಬೂವನ್ನು ಕುಳ್ಳಿರಿಸಿಕೊಂಡೆ.

ಶಿವಾಜಿನಗರದ ಬಸ್‌ಸ್ಟಾಪ್‌ನಲ್ಲಿ ಎಂದಿನ ಗಜಿಬಿಜಿ ಇದ್ದೇ ಇತ್ತು. ''ಇಲ್ಲೇ ಇಳಿದುಬಿಡಿ ಸಾರ್. ಅದು ಒನ್ ವೇ'' ಎಂದ ಆಟೋ ಡ್ರೈವರ್. ನಾನು ದುಡ್ಡು ಕೊಟ್ಟೆ. ಮಿನಿಮಮ್ ಹತ್ತು ರೂಪಾಯಿ ಆಗಿತ್ತು.

ಅಬ್ಬೂ ತಟ್ಟನೆ ಮಾಯವಾಗಿದ್ದ. ಸುತ್ತಮುತ್ತ ಎಲ್ಲೂ ಕಾಣಲಿಲ್ಲ. 'ಎಲ್ಲಿಗೆ ಹೋದ' ಎಂದು ಯೋಚಿಸುತ್ತಾ ಅಲ್ಲೇ ಪಕ್ಕದ ನೆರಳಿಗೆ ಸರಿದು ನಿಂತೆ. ಅಬ್ಬೂವಿನ ಬಗ್ಗೆ ಆಲೋಚನೆಗಳು ಸರಿದುಹೋದವು. ಅಬ್ದುಲ್ ರಷೀದ್, ಅಬ್ಬೂ ಆಗಿದ್ದ. ಅವನು ಐದು ವರ್ಷದ ಹಿಂದೆ ನಮ್ಮ ಪತ್ರಿಕೆಗೆ ಬಂದು ಸೇರಿದ. ನುರಿತ ಪ್ರಿಂಟರ್. ಇಂಗ್ಲಿಷ್, ಕನ್ನಡ, ತೆಲುಗು, ತಮಿಳು ಭಾಷೆಗಳನ್ನು ಸರಾಗವಾಗಿ ಮಾತಾಡುತ್ತಿದ್ದ. ಪ್ರತಿದಿನವೂ ಕೋಲಾರಕ್ಕೆ ಹೋಗಿ ಬರ್ತಾ ಇದ್ದ. ಒಂದು ದಿನ ''ಸಾರ್ ನಾನು ಇಲ್ಲೇ ಮಲಗ್ತೀನಿ ಸರ್'' ಎಂದಾಗ ನನಗೆ ಆಶ್ಚರ್ಯ. ''ಪೊಲೀಸಿನವರ ಕಾಟ ಸಾರ್. ಕೋಲಾರದಲ್ಲಿ ಗಲಾಟೆ, ಕರ್ಫ್ಯೂ. ಬಸ್ ಇಳಿತಾ ಇದ್ದಹಾಗೆ ಹಿಡ್ಕೋತಾರೆ ಸಾರ್'' ಎಂದ.

''ಎಲ್ಲಾ ಕಡೆ ಹಾಗೇನೆ. ಕೋಮು ಗಲಭೆ ಆಯ್ತು ಅಂದ್ರೆ ಮೊದಲು ಒಳಗೆ ಹಾಕೋದು ಬಸ್‌ನಿಂದ ಇಳಿಯುವ ಯುವಕರನ್ನೇ. ನಿನಗೊಂದು ಪೊಲೀಸ್ ಪಾಸ್ ಮಾಡಿಸಿ ಕೊಡಲಾ ?'' ಎಂದದ್ದಕ್ಕೆ ''ಬೇಡಾ ಸಾರ್'' ಅಂದಿದ್ದ.

ಪತ್ರಿಕೆಯ ಮಾಲೀಕರಿಗೂ ಅಬ್ಬೂ ಮಲಗುವುದು ಇಷ್ಟವೇ. ಅಂತೂ ರಾತ್ರಿ ಕಾವಲುಗಾರನ ಸಂಬಳ ಉಳಿಸಿಬಿಟ್ಟ ಅಬ್ಬೂ. ಅಂದಿನಿಂದ ಅಬ್ಬೂವಿನಲ್ಲಿ ಬದಲಾವಣೆಗಳಾಗುತ್ತಾ ಬಂದವು. ಮಹಮ್ಮದ್ ರಫಿಯ ಭಕ್ತನಾದ ಅಬ್ಬೂ ಸುಶ್ರಾವ್ಯವಾಗಿ ಹಾಡುತ್ತಿದ್ದ. ಬರಬರುತ್ತಾ ರಾತ್ರಿ ಪಾಳಿಯ ಹಾಡು ನಿಲ್ಲಿಸಿಬಿಟ್ಟ. ಗಡ್ಡ ಮೀಸೆ ಹುಲುಸಾಗಿ ಬೆಳೆಸಿದ. ವಾರಕ್ಕೊಮ್ಮೆ ಊರಿಗೆ ಹೋಗ್ತಾ ಇದ್ದವನು ಬರಬರುತ್ತಾ ಪ್ರೆಸ್ ಬಿಟ್ಟು ಹೊರಗೆ ಹೋದದ್ದೇ ಇಲ್ಲ. ಕುಡಿಯಲು ಶುರುಮಾಡಿದ್ದೂ ಆಗಲೇ.

''ಎಲ್ಲಿ ಹೋಗಿದ್ದೆಯ್ಯಾ, ನನ್ನ ನಿಲ್ಲಿಸಿಬಿಟ್ಟು, ಹೇಳಿ ಹೋಗೋದಕ್ಕೆ ಆಗೋಲ್ಲವೇ'' ಎಂದು ರೇಗಿದೆ.

''ನೋಡಿ ಸಾರ್ ಈಕೆನಾ, ಇವರ ಹೆಸರು ರಾಧಮ್ಮ ಅಂತ'' ಅಂದ. ಸಣ್ಣ ವಯಸ್ಸಿನ ಹುಡುಗಿ. ಸಲ್ವಾರ್ ಕಮೀಜ್ ಹಾಕಿದ್ದಳು. ಹಣೆಗೆ ಕುಂಕುಮ ಇಟ್ಟಿದ್ದಳು. ದೃಷ್ಟಿ ಕೆಳಕ್ಕೆ ನೆಟ್ಟಿತ್ತು.

''ಯಾರು ಈಕೆ'' ಎಂದೆ.

''ಈಕೆಯನ್ನು ನೀವು ಮಾತನಾಡಿಸಬೇಕೂಂತಲೇ ಕರಕೊಂಡು ಬಂದೇ ಸಾರ್'' ಎಂದ ಅಬ್ಬೂ.

ಎಲಾ ಇವನಾ, ಇವನೇನಾದರೂ ಮದುವೆಯಾಗ ಬೇಕೆಂದು ಹಾರಿಸಿಕೊಂಡು ಬಂದಿದ್ದಾನಾ ಅಂದುಕೊಂಡೆ.

''ಎಲ್ಲಿಂದ ಬಂದಿದ್ದೀಯಮ್ಮಾ'' ಎಂದೆ.

''ಸರ್, ಬೆಳಿಗ್ಗೆ ನಮ್ಮ ಪ್ರೆಸ್ ಮುಂದೆ ಬೀಡಿ ಕುಡೀತಾ ಇದ್ದೆ. ಈಕೆ ಯಾರನ್ನೋ ಹುಡುಕಿಕೊಂಡು ಬಂದರು. ನಾನು ವಿಚಾರಿಸಿದೆ. ಕೋಲಾರದ ಕಡೆ ಹಳ್ಳಿಯವರು ಎಂದು ತಿಳಿಯಿತು. ಬೆಂಗಳೂರು ಬಹಳ ಕೆಟ್ಟ ಊರು ಸರ್. ಅದಕ್ಕೇ ಸುರಕ್ಷಿತವಾಗಿರಲಿ ಅಂತ ಈ ಚರ್ಚಿನ 'ಆಶ್ರಯ ಸದನ'ದಲ್ಲಿ ಮೇಡಂ ಹತ್ರ ತಂದು ಬಿಟ್ಟೆ'' ಎಂದ ಅಬ್ಬೂ.

''ಅದು ಸರಿ. ನಾನು ಏನ್ಮಾಡಬೇಕು ಈಗ'' ಎಂದೆ.

''ತಾಯಿ, ನೀವು ಬೆಂಗಳೂರಿಗೆ ಯಾಕೆ ಬಂದಿ ಅಂತ ನಮ್ಮ ಸಾರ್‌ಗೆ ಹೇಳಿ'' ಎಂದ ಅಬ್ಬೂ.

ಆಕೆ ಅಳತೊಡಗಿದಳು. ಶಿವಾಜಿನಗರದ ಜನಸಂದಣಿಯಲ್ಲಿ ಈ ಹುಡುಗಿಯ ಅಳು ನೋಡಲು ಜನ ಬಂದು ಸೇರಿದರೆ ಏನಪ್ಪಾ ಗತಿ ಎಂದುಕೊಂಡು ಆ ಹೋಟೆಲ್ಲಿನ ಹತ್ತಿರ ಮಾತನಾಡೋಣ ಬನ್ನಿ ಎಂದು ದಾಪುಗಾಲು ಹಾಕಿದೆ.

ದರ್ಶಿನಿ ಹೋಟೆಲ್ ತುಂಬ ಜನ. ಒಳಗೆ ಹೋಗದೆ ಹೊರಗಡೆಯ ಟೇಬಲ್‌ನ ಸುತ್ತ ಕುಳಿತೆವು. ಆಕೆಯು ತನ್ನ ಕಥೆ ಹೇಳಿದಳು. ''ನಾನು ಸಿಕಂದರ್‌ಅನ್ನು ಹುಡುಕಿಕೊಂಡು ಬಂದೆ. ಅವನನ್ನು ಕಂಡು ನಾಲ್ಕು ವರ್ಷವಾಯ್ತು'' ಎಂದಳು.

''ಯಾರಮ್ಮಾ ಅದು ಸಿಕಂದರ್'' ಎಂದೆ.

''ನಮ್ಮೂರಿನ ಹುಡುಗ ನನ್ನನ್ನು ಕೋಲಾರಕ್ಕೆ ಬಸ್‌ನಲ್ಲಿ ಶಾಲೆಗೆ ಕರೆದುಕೊಂಡು ಹೋಗಲು ನಮ್ಮಪ್ಪ ಒಪ್ಪಿಸಿದ್ದ ಹುಡುಗ. ಹತ್ತು ವರ್ಷ ನನ್ನ ಶಾಲೆಗೆ ತಲುಪಿಸಿ, ಮನೆಗೆ ಕರೆದುಕೊಂಡು ಬರುತ್ತಿದ್ದ. ನಾನು ಹೈಸ್ಕೂಲು ಓದುತ್ತಿದ್ದಾಗ ಅವನಿಗೆ ಬೆಂಗಳೂರಿನಲ್ಲಿ ಕೆಲಸ ಸಿಕ್ತು. ಆಗಲೂ ಬೆಳಿಗ್ಗೆ ಮಾತ್ರ ಜೊತೆಗೆ ಬಂದು ಸ್ಕೂಲಿನ ಹತ್ತಿರ ಬಿಟ್ಟು ಹೋಗ್ತಾ ಇದ್ದ'' ಎಂದಳು.

''ಈಗ ಎಲ್ಲಿದ್ದಾನಮ್ಮಾ'' ಎಂದೆ.

''ಬೆಂಗಳೂರಿನಲ್ಲಿ, ನನಗೊಂದು ಸಲ ಅವನು ಕೆಲಸ ಮಾಡೋ ಪ್ರೆಸ್‌ನ ಅಡ್ರೆಸ್ ಕೊಟ್ಟಿದ್ದ. ಅದನ್ನು ಇಟ್ಟುಕೊಂಡು ಬೆಳಿಗ್ಗೆ ಬಸ್ ಹತ್ತಿ ವಿಚಾರಿಸಿಕೊಂಡು ಬಂದೆ'' ಎಂದಳು.

''ಯಾಕಮ್ಮಾ ಬಂದೆ. ಒಂದು ಕಾರ್ಡ್ ಹಾಕಬಹುದಾಗಿತ್ತಲ್ಲಾ'' ಎಂದೆ.

''ಕಾರ್ಡ್ ಹಾಕಿದ್ದೆ, ಉತ್ತರ ಬರ್ಲಿಲ್ಲಾ. ಅದೂ ಅಲ್ದೆ ಉತ್ತರ ಬರದ್ರೆ ನಮ್ಮ ಮನೇಲಿ ಗೊತ್ತಾಗುತ್ತೆ ಅಂತ ಅವನು ಬರೀದೇನೂ ಇದ್ದಿರಬಹುದು.''

''ಓ ನೀವಿಬ್ಬರೂ ...''

''ಹೌದು ಸಾರ್, ಬಹಳ ಪ್ರೀತಿಸ್ತಾ ಇದ್ವಿ. ಮದುವೆಯಾದ್ರೆ ಬೇರೆ ಯಾರನ್ನೂ ಆಗಬಾರ್ದೂ ಅಂತ ಶಪಥ ಮಾಡಿದ್ವಿ'' ಅಂದಳು.

''ಅರ್ಥವಾಯ್ತು. ಸಿಕಂದರ್‌ಅನ್ನು ಮದುವೆಯಾಗೋಕ್ಕೇಂತ ಹುಡುಕಿಕೊಂಡು ಬಂದೆಯಾ ?'' ಎಂದೆ.

''ಹೌದು ಸಾರ್, ನಾನು ಎಸ್.ಎಸ್.ಎಲ್.ಸಿ. ಪಾಸಾಗಿ ಐದು ವರ್ಷ ಆಯ್ತು. ಜೊತೆಗೆ ಯಾರೂ ಇಲ್ಲ ಅಂತ ಕಾಲೇಜಿಗೆ ನಮ್ಮಪ್ಪ ಕಳಿಸಲಿಲ್ಲ. ಈಗ ಬೇರೆ ಹುಡುಗನ ಜೊತೆ ಮದುವೆಗೆ ಗೊತ್ತು ಮಾಡಿದ್ದಾರೆ'' ಎಂದಳು ರಾಧಾ.

''ಅದಕ್ಕೇ ನೀನು ಬೆಂಗಳೂರಿಗೆ ಓಡಿ ಬಂದ್ಯಾ'' ಎಂದೆ.

''ಹೌದು ಸಾರ್. ಈಗಲೂ ಸಿಕಂದರ್ ಸಿಕ್ಕರೆ ಅವನನ್ನೇ ಮದುವೆಯಾಗೋದು'' ಎಂದು ಕಣ್ಣೊರೆಸಿಕೊಂಡಳು.

''ಈಗ ಮದುವೆಗೆ ಗೊತ್ತಾಗಿರೋ ಹುಡುಗ ಏನೂ ಕಮ್ಮಿ ಇಲ್ಲ ಸಾರ್'' ಎಂದ ಅಬ್ಬೂ.

''ಹೌದೇನಮ್ಮಾ'' ಎಂದೆ.

''ಅವರು ನಮ್ಮ ದೂರದ ಬಂಧುಗಳೇ ಆಗ್ಬೇಕು. ಡೈರಿಯಲ್ಲಿ ಆಫೀಸರ್ ಆಗಿದ್ದಾರೆ. ನನ್ನನ್ನು ಇಷ್ಟಪಟ್ಟು ಅವರೇ ನನ್ನ ತಂದೆಯನ್ನು ಕೇಳಿದ್ದಾರೆ'' ಎಂದಳು.

''ಈಗ ಸಿಕಂದರ್‌ನ ಹುಡುಕೋದು ಹೇಗೆ'' ಎಂದೆ.

''ಅದೇ ಗೊತ್ತಾಗ್ತಾ ಇಲ್ಲ'' ಅಂತ ಅಳತೊಡಗಿದಳು ರಾಧಾ.

''ಸಾರ್ ಸಿಕಂದರ್ ಸಿಗದೇ ಇದ್ರೆ ಏನಂತೆ, ಅವನು ಎಲ್ಲಿ ಹೋದನೋ ಏನೋ. ಈಗ ಗೊತ್ತಾಗಿರೋ ಹುಡುಗ ಒಳ್ಳೆಯವನೇ ಸಾರ್. ಮದುವೆ ಮಾಡಿಕೊಂಡು ಸುಖವಾಗಿ ಇರಲಿ ಬಿಡಿ. ನೀವು ಹೇಳಿ ಸಾರ್'' ಎಂದ ಅಬ್ಬೂ.

''ಅಬ್ಬೂ, ಸಿಕಂದರ್ ಅಂತ ನಮ್ಮಲ್ಲಿ ಯಾರಾದ್ರೂ ಇದ್ದರಾ ? ಈ ಹುಡುಗೀಗೆ ಅಡ್ರೆಸ್ ಯಾರು ಕೊಟ್ಟರು !'' ಅಂದೆ.

''ಇರಬಹುದು ಸಾರ್. ಕೋಲಾರದಲ್ಲಿ ಎರಡು ತಿಂಗಳು ಕರ್ಫ್ಯೂ ಇದ್ದಾಗ ಅಲ್ಲಿನೋವ್ರು ಪ್ರಿಂಟಿಂಗ್‌ಗೆ ಅಂತ ಇಲ್ಲಿಗೇ ಬರೋವ್ರು ಸಾರ್. ಅವರಲ್ಲಿ ಯಾರಾದರೂ ಇದ್ದಿರಬಹುದು'' ಎಂದ ಅಬ್ಬೂ.

''ಓ ಬಾಬರಿ ಮಸೀದಿ ಗಲಾಟೆ ಆದಾಗ್ಲಾ'' ಎಂದೆ.

''ಹೌದು ಸಾರ್. ಆಗ ಸಿಕಂದರ್‌ಗೆ ಕೋಲಾರದಲ್ಲಿ ಆರ್.ಎಸ್.ಎಸ್.ನವರು ಹೊಡೆದರಂತೆ. ಆವತ್ತಿನಿಂದ ಅವನು ನನ್ನನ್ನು ಬೇರೆಯವರ ಮುಂದೆ ಮಾತನಾಡಿಸ್ತಾ ಇರಲಿಲ್ಲ'' ಎಂದಳು ರಾಧಾ.

''ನೋಡಮ್ಮಾ ಸಿಕಂದರ್ ಯಾರೂಂತ ನಮಗೆ ಗೊತ್ತಿಲ್ಲ. ನೀನು ಮನೆಗೆ ಹೋಗೋದು ವಾಸಿ. ಈ ವಿಷಯ ಯಾರಿಗೂ ಹೇಳದೆ ಸುಖವಾಗಿ ಮದುವೆಮಾಡಿಕೊಂಡು ಇರು'' ಎಂದೆ.

''ಹಾಗಲ್ಲ ಸಾರ್, ನನ್ನ ಮನಸ್ಸೆಲ್ಲಾ ಸಿಕಂದರ್ ಮೇಲೇ ಇದೆ. ನನ್ನಿಂದ ಅವನಿಗೆ ಎಷ್ಟು ತೊಂದರೆ ಆಗಿದೆ. ನನಗೋಸ್ಕರ ಏಟು ಬೇರೆ ತಿಂದ. ಎದೆ ಮೇಲೇ ಹೊಡೆದರಂತೆ ಅವರು'' ಎಂದು ಅತ್ತಳು ರಾಧಾ.

''ಅವರು ಯಾಕೆ ಹೊಡೆದರು ಇವನಿಗೆ ?'' ಎಂದೆ ನಾನು.

''ಹಿಂದೂ ಹುಡುಗೀನ ಲವ್ ಮಾಡ್ತಾ ಇದ್ದಾನೆ ಅಂತ'' ಎಂದಳು ರಾಧಾ.

''ಸಾರ್ ಅದೆಲ್ಲಾ ಹಳೇ ಕಥೆ. ಯಾರೂ ನಂಬಾಕಿಲ್ಲ. ಸಿಕಂದರ್‌ಗೆ ಪ್ರೀತಿ ಇದ್ದಿದ್ರೆ, ಊರಿಗಾದ್ರೂ ಒಂದು ಸಲಾನಾದ್ರೂ ಹೋಗಲೇಬೇಕಲ್ಲ ಸಾರ್. ನೀವು ಹೇಳಿ ಸಾರ್ ರಾಧಮ್ಮನಿಗೆ'' ಎಂದ ಅಬ್ಬೂ.

''ಹೌದಮ್ಮ, ಅವನೆಲ್ಲೋ ದೇಶಾಂತರ ಹೋಗಿರಬಹುದು. ಮತ್ತೆ ಬರ್ತಾನೋ ಇಲ್ಲವೋ. ಅದಕ್ಕೋಸ್ಕರ, ನೀನು ಕಾಯೋದು ತರವಲ್ಲ'' ಎಂದೆ ನಾನು.

''ನಿಮ್ಮೂರಿಗೆ ಬಸ್ ಆರೂವರೇಗೆ ಇದೆ. ಅದರಲ್ಲಿ ಹೋದ್ರೆ ಬೇಗನೇ ನಿಮ್ಮ ಹಳ್ಳಿ ಸೇರ್ಕೋಬೋದು. ಯಾರಿಗೂ ಅನುಮಾನ ಬರೋಲ್ಲ. ಸ್ನೇಹಿತರ ಹತ್ರ ಮದುವೆ ವಿಚಾರ ಹೇಳೋಕೆ ಹೋಗಿದ್ದೆ ಕೋಲಾರಕ್ಕೆ ಅಂತ ಹೇಳಿ. ನಮ್ಮ ಸಾಹೇಬ್ರು ನಿಮ್ಮನ್ನ ಬಸ್‌ಗೆ ಹತ್ತಿಸ್ತಾರೆ. ನೀವು ಹೋಗ್ಬಿಡಿ. ಹಿಂದೆ ಆಗಿದ್ದೆಲ್ಲಾ ಕನಸು ಅಂತ ಮರೆತುಬಿಡಿ'' ಎಂದ ಅಬ್ಬೂ.

''ನನ್ನ ಹತ್ರ ಕಾಸು ಇಲ್ಲ, ವಾಪಸ್ಸು ಹೋಗೋಕೆ'' ರಾಧಾ ಮುಸಿ ಮುಸಿ ಅತ್ತಳು.

''ಸಾರ್ ಮೂವತ್ತು ರೂಪಾಯಿ ಕೊಡಿ ಸಾರ್. ಬಸ್‌ಚಾರ್ಜು ಸರ್. ಬಸ್‌ನಲ್ಲಿ ಕೂಡಿಸಿ ಬರೋಣ'' ಎಂದು ಅವಸರ ಮಾಡಿದ ಅಬ್ಬೂ.

ಬಸ್‌ನಲ್ಲಿ ಸೀಟು ಮಾಡಿಕೊಟ್ಟು ಟಿಕೆಟ್ ಅವಳ ಕೈಗಿತ್ತು ಅಬ್ಬೂ ಹೇಳಿದ, ''ಅಮ್ಮಾ ಎಲ್ಲೋ ನೆನಪಾಗ್ತಾ ಇದೆ. ಸಿಕಂದರ್ ಅಂತ ಚಂದದ ಹುಡುಗ ಅಲ್ವಾ. ಪ್ರೆಸ್‌ಗೆ ಬಂದಿದ್ದ. ಆಮೇಲಾಮೇಲೆ ಕೆಟ್ಟುಹೋದ ಅಂತ ನೆನಪು. ಕುಡಿಯೋದು ಕಲಿತು ಹಾಳಾದ. ಅದಕ್ಕೇ ನಾವು ಪ್ರೆಸ್‌ನ ಹತ್ತಿರ ಬರಬೇಡ ಅಂತ ಹೇಳಿದ್ವಿ. ಈಗ ಒಳ್ಳೆಯದೇ ಆಯ್ತು ನೋಡಿ. ಒಂದ್ಸಲ ಕೆಟ್ಟುಹೋದವನ್ನ ಸರಿ ಮಾಡೋಕೆ ಆಗುತ್ತಾ. ಅವನ್ನ ಮರೆತುಬಿಡಿ. ನೀವು ಬೆಳಿಗ್ಗೆ ಒಳ್ಳೆಯವರ ಮುಖ ನೋಡಿದ್ದೀರಿ ತಾಯಿ. ನಮ್ಮ ಸಾಹೇಬ್ರಂಥವರು ಸಿಕ್ರು. ಬಹಳ ಕೆಟ್ಟ ಊರಮ್ಮಾ ಇದು. ಆ ಚೀಟಿ ಇಲ್ಲಿ ಕೊಡಿ. ನೀವು ಎಲ್ಲಾ ಮರೆತು, ಮದುವೆಯಾಗಿ ತಾಯಿ'' ಎಂದು ಬಡಬಡನೆ ಹೇಳಿದ.

ಬಸ್ ಹೊರಟಿತು. ಹುಡುಗಿ ಮುಗುಳ್ನಕ್ಕು ಟಾಟಾ ಮಾಡಿದಳು.

''ಹೇಗಿತ್ತು ಸಾರ್ ಸ್ಟೋರಿ'' ಎಂದ ಅಬ್ಬೂ.

''ನಿಂಗೆ ಸಿಕಂದರ್ ಗೊತ್ತಾ, ಎಲ್ಲಿದ್ದಾನೆ ಈಗ ?'' ಎಂದೆ.

''ಈ ಮಹಾಪಟ್ಟಣದಲ್ಲಿ ಎಲ್ಲೋ ಇರ್ತಾನೆ ಸಾರ್'' ಎಂದ ಅಬ್ಬೂ.

''ಲೋ ಅಬ್ಬೂ, ಅವನೂ ಕುಡುಕ ಅಂತ ಹೇಳ್ದೆ. ನೀನೂ ಅದೇ. ನಿಮ್ಮಿಬ್ಬರದೂ ದೋಸ್ತಿ ಇರಲೇಬೇಕು. ನಿಜ ಹೇಳು, ಎಲ್ಲಿದ್ದಾನೋ ಸಿಕಂದರ್ ? ನಿನಗೆ ಗೊತ್ತಿದ್ರೆ ಅವಳಿಗೆ ಯಾಕೆ ಸುಳ್ಳು ಹೇಳ್ದೆ ?''

''ನಾನೇ ಸಿಕಂದರ್, ಬೇರೆ ಯಾರೂ ಅಲ್ಲ''

''ಹ್ಹಾ, ಕಳ್ಳ ಭಡವ, ನಿನ್ನನ್ನೇ ನಂಬಿ ಬಂದಿದ್ಳಲ್ಲಾ ಆ ಹುಡುಗಿ. ಕೈಕೊಟ್ಟೆಯಲ್ಲಾ !''

''ಸಾರ್, ಪ್ರೀತಿ ಗೆಲ್ಲೋ ಪ್ರಪಂಚ ಈಗಿಲ್ಲ. ನನಗೆ ಆ ಚಡ್ಡಿಗಳು ಹೊಡೆದಾಗಲೇ ಗೊತ್ತಾಯ್ತು. ಆಗ್ಲಿಂದ ನಾನು ನಮ್ಮೂರಿಗೆ ಹೋಗಲೇ ಇಲ್ಲ. ನಾನು ಹಿಂದೂ ಹುಡುಗಿಯನ್ನ ಮದುವೆಯಾಗಿ ಬದುಕೋದು ಅಷ್ಟೇ ಇದೆ. ಆವತ್ತು ಬಾಬರಿ ಮಸೀದಿ ಗಲಾಟೇಲಿ ಬಸ್ ಇಳೀತಾ ಇದ್ದ ನನ್ನನ್ನು, ಚಚ್ತಾ ಇದ್ದಾಗ, ನನ್ನ ಹತ್ತಿರದ ಸ್ನೇಹಿತರು ಒಬ್ಬರೂ ಮುಂದೆ ಬರಲಿಲ್ಲ ಬಿಡಿಸಿಕೊಳ್ಳೋಕೆ. ಅಂದಿನಿಂದ ಪ್ರಪಂಚದಲ್ಲಿ ನನ್ನ ಟೈಮು ಬದಲಾಗೋಯ್ತು ಸಾರ್. ದೇಶದಲ್ಲಿ ಅದೇನೋ ಯಾತ್ರೆಗಳು, ಗುಜರಾತ್ ಬೆಂಕಿ, ಪ್ರತಿವರ್ಷ ಒಂದೊಂದು. ನೀವು ಹೆಡ್‌ಲೈನ್ ಬರೀತಾನೆ ಇದ್ದೀರಿ. ನಾನು ಪ್ರಿಂಟ್ ಮಾಡ್ತಾನೇ ಇದ್ದೀನಿ. ಹೀಗಿರೋವಾಗ ಬರೀ ಪ್ರೀತಿ ಗೊತ್ತಿರೋ ಹಿಂದೂ ಹುಡುಗೀನ ಮದುವೆಯಾಗಿ, ಈಗಿರೋ ಭಜರಂಗ ದಳದ ಪ್ರಪಂಚದಲ್ಲಿ ಮುಸಲ್ಮಾನನ ಕಷ್ಟ ಹಂಚಿಕೋ ಅಂತ ಹೇಗೆ ಹೇಳ್ಲಿ ಸಾರ್'' ಎಂದ.

ನನಗೆ ಮಾತನಾಡಲಾಗಲಿಲ್ಲ.

''ಈಗ ಎಷ್ಟು ಖರ್ಚಾಯ್ತು ಸಾರ್. ೩೦ ಮತ್ತೆ ೧೦ ಆಟೋಗೆ ಅಲ್ವಾ. ಇನ್ನೂ ೧೦ ಕೊಡಿ ಸಾರ್'' ಎಂದ.

''ಓ ಪಾಕೆಟ್‌ಗೆ, ಕಂಠಪೂರ್ತಿ ಕುಡೀಯೊಕ್ಕೆ'' ಅಂದೆ.

''ಅಲ್ಲಾ ಸಾರ್, ಚರ್ಚ್‌ನ ಆಶ್ರಯ ಸದನದ ಮೇಡಂಗೆ ಕೊಡೋಕೆ. ಬೆಳಗಿನಿಂದ ನನ್ನ ರಾಧಾಳನ್ನು ಕಾಪಾಡಿದ್ದಾಳಲ್ಲಾ ಆ ಉಪಕಾರಕ್ಕೆ. ಕುಡಿಯೋಕೆ ಅಲ್ಲ ಸಾರ್'' ಎಂದ ಅಬ್ದುಲ್ ರಷೀದ್ ಉರುಫ್ ಅಬ್ಬೂ ಉರುಫ್ ಸಿಕಂದರ್.

(ಓ ಹೆನ್ರಿಯ 'ದಿ ಪಾಯಿಂಟ್ ಆಫ್ ದಿ ಸ್ಟೋರಿ' ಕಥೆಯ ರೂಪಾಂತರ)

ಕನ್ನಡಕ್ಕೆ : ವಿ. ಎಸ್. ಎಸ್. ಶಾಸ್ತ್ರಿ
ಕೋಲಾರ

ಮಳೆಯೋ ಮಳೆ... ಜೋರೋ ಎನ್ನುವ ಒಂದೇ ಪಲ್ಲವಿ. ನೆಲದಿಂದ ಮುಗಿಲವರೆಗೆ ಏಕವಾಗಿದ್ದ ಆ ಮಳೆಯ ಸ್ವರೂಪ; ಗಡಗಡನೆ ನಡುಗಿಸುತ್ತಿದ್ದ ಆ ಥಂಡಿಯ ಹವೆ, ರಸ್ತೆಗಳಲ್ಲೆಲ್ಲಾ ಹೆಜ್ಜೆ ಮುಳುಗುವಂತಿದ್ದ ನೀರಿನ ಪ್ರವಾಹ, 'ಮಲೆನಾಡಿನ ಮಳೆ' ಎಂದರೆ ಮೊದಲೇ ಹೆಸರುವಾಸಿ. ಇನ್ನು ಕೇಳಬೇಕೇ ?

ಮಳೆಯೆಂದು ಯಾವ ಬದುಕು ನಿಂತೀತು ? ಕೋಳಿ ಕೂಗಿಯೇ ಕೂಗುತ್ತದೆ; ಬೆಳಗು ಆಗಿಯೇ ತೀರುತ್ತದೆ. ಅಂದಮೇಲೆ ಸ್ನಾನ, ಅಡಿಗೆ, ಊಟ ಎಲ್ಲವೂ ಸಾಗಲೇಬೇಕು.

ಇಂಥ ಜೋರು ಮಳೆಯಲ್ಲಿಯೇ ರಾಮನ ಕಮಾನು ಗಾಡಿ ಬೆಟ್ಟದೂರಿನ ಹಾದಿಹಿಡಿದು ಹೊರಟಿತ್ತು. ಅಪರೂಪವಾಗಿ ತೌರಿಗೆ ಹೊರಟುಬರುತ್ತಿದ್ದ ಭಟ್ಟರ ಇಬ್ಬರು ಹೆಣ್ಣುಮಕ್ಕಳನ್ನು ಸುರಕ್ಷಿತವಾಗಿ ಬೆಟ್ಟದೂರಿಗೆ ತಲುಪಿಸುವ ಹೊಣೆಯನ್ನು ಇಂದು ರಾಮನೇ ಹೊತ್ತಿದ್ದ. ಆ ರಸ್ತೆಯೋ ಏರು-ತಗ್ಗು, ಮಾರ್ಗಮಧ್ಯದಲ್ಲಿ ಸೊಂಟದುದ್ದದ ಹಳ್ಳ ಬೇರೆ, ಸ್ವಲ್ಪ ಜಾರಿದರೂ ಗಾಡಿ ಉರುಳಿತೆಂದೇ ಎಣಿಕೆ. ಆದರೆ ಅದಕ್ಕೆಲ್ಲ ಅಂಜುವಂಥ ಗಂಡಲ್ಲ ರಾಮ. ಇಷ್ಟಾಗಿ ಹೊರಡುವ ಮುನ್ನ ಅವನು ಮರೆಯದೆ ಊರ ಗಂಗವ್ವನಿಗೆ ಜೋಡಿಕಾಯಿಗಳನ್ನು ಸಮರ್ಪಿಸಿ, ತಮ್ಮೆಲ್ಲರ ರಕ್ಷಣೆಯನ್ನು ಆಕೆಗೇ ವಹಿಸಿ ಬಂದಿದ್ದನೆಂದ ಮೇಲೆ, ಇನ್ನು ಯೋಚನೆಯೇಕೆ ?

ರಾಮ ಭಟ್ಟರ ಮನೆಯಾಳು; ಇದು ಇಂದು ಹೊಸದಾಗಿ ಉಂಟಾದ ಸಂಪ್ರದಾಯವಲ್ಲ. ರಾಮನ ಹಿಂದಿನ ನಾಲ್ಕು ತಲೆಮಾರಿನಿಂದ ಅವರಿಗೆ ಭಟ್ಟರ ಮನೆಯಲ್ಲೇ ಆಸರೆ. ರಾಮನನ್ನು ಆಳೆಂದು ಭಟ್ಟರ ಮನೆಯಲ್ಲಿ ಯಾರೂ ಎಂದೂ ಕಂಡವರೇ ಅಲ್ಲ. ಆ ಮನೆಯ ಜನದ ಪೈಕಿ ಅವನೂ ಒಬ್ಬನೆಂದೇ ಎಲ್ಲರ ಭಾವನೆ. ರಾಮನೊಬ್ಬ ಭಟ್ಟರ ಮನೆಯಲ್ಲಿದ್ದರೆ ಸಾಕು, ನೂರು ಜನರ ಬಲವಿದ್ದಂತೆ.

## ರತ್ನಮ್ಮ ಸುಂದರರಾವ್ (೧೯೩೦-೨೦೦೭)

ಸೃಜನಶೀಲ ಕಥನ ಕಲೆಯನ್ನು ಸಿದ್ಧಿಸಿಕೊಂಡಿದ್ದ ಹಿರಿಯ ಲೇಖಕಿ ರತ್ನಮ್ಮ ಅವರು ರಚಿಸಿದ ಕೃತಿಗಳು ಹಲವಾರು. ಅತ್ಯಂತ ಸರಳಭಾಷೆಯಲ್ಲಿ ರಚಿಸಿದ ಶ್ರೀ ಶಂಕರ ಕಥಾಮೃತ ಎಂಬ ಪುಟ್ಟ ಪುಸ್ತಕ ಆರು ಮುದ್ರಣಗಳನ್ನು ಕಂಡಿದ್ದುದೇ ಇದಕ್ಕೆ ಸಾಕ್ಷಿ.

ತಾಯಿನಾಡು ಪತ್ರಿಕೆಯಲ್ಲಿ ಅರವತ್ತರ ದಶಕದಲ್ಲಿ ಪ್ರಕಟವಾದ '...ರೆ, ಗಂಡನ ಆಯಸ್ಸು ಕ್ಷೀಣ ಆಗತ್ತೈತಿ' ಎಂಬ ಕಥೆಯಲ್ಲಿ ಮಲೆನಾಡಿನ ಜೀವನ ಚಿತ್ರಣ ಯಥಾವತ್ತಾಗಿ ಮೂಡಿಬಂದಿದೆ. ಶ್ರೀಮತಿ ರತ್ನಮ್ಮ ಅವರು ಇದೇ ಫೆಬ್ರವರಿಯಲ್ಲಿ ಗತಿಸಿದರು.

ಭಟ್ಟರು ತಮ್ಮ ಇಬ್ಬರು ಹೆಣ್ಣುಮಕ್ಕಳಾದ ಭಾಗೀರಥಿ ತುಂಗೆಯರನ್ನು ಬಯಲು ಸೀಮೆಗೆ ಲಗ್ನ ಮಾಡಿಕೊಟ್ಟಿದ್ದರು. ಅದೂ ತಮ್ಮ ಧರ್ಮಪತ್ನಿಯ ತೌರುಮನೆಗೇ. ಆ ಸೀಮೆಯೋ ಮಳೆಯನ್ನೇ ಕಾಣದ ಸೀಮೆ. ಆ ಸೀಮೆಗೆ ಹೆಣ್ಣು ಮಕ್ಕಳನ್ನು ಕೊಟ್ಟು ನೀರಿನ ಬವಣೆಯಲ್ಲಿ ಅವರನ್ನು ಸಿಕ್ಕಿಸಲು ಭಟ್ಟರಿಗೇನೂ ಇಷ್ಟವಿರಲಿಲ್ಲ. ಆದರೆ ಆಗ ಪತ್ನಿಯ ವಾದವೇ ಜೋರಾಗಿತ್ತು. ಪಾರ್ವತವ್ವನಂತೂ ''ನಾವೆಲ್ಲ ಆ ಸೀಮೆಯಲ್ಲೇ ಹುಟ್ಟಿ, ಬೆಳೆದು ದೊಡ್ಡವರಾಗಿಲ್ಲವೇ ? ಈಗ ನಾವು ಆಗಿರುವುದಾದರೂ ಏನು ?'' ಎಂದು ಸಿಂಹದಂತೆ ಘರ್ಜಿಸಿ, ಭಟ್ಟರ ಬಾಯಿ ಮುಚ್ಚಿಸಿದ್ದರು. ಸ್ವಭಾವತಃ ಶಾಂತಮೂರ್ತಿಗಳೆನಿಸಿದ್ದ ಭಟ್ಟರು ಪತ್ನಿಯ ಮಾತಿಗೆ ಚಕಾರವೆತ್ತಲು ಇಷ್ಟಪಡದೆ, ಬಸವನಂತೆ ಹೂಗುಟ್ಟಿದ್ದರು ಮಾತ್ರ. ಪಾರ್ವತವ್ವನಿಗಾದರೋ ತೌರುಮನೆಯ ಆಸ್ತಿಯನ್ನು ಕಂಡವರ ಪಾಲು ಮಾಡಲು ಇಷ್ಟವಿಲ್ಲ; ತನ್ನ ಮಕ್ಕಳನ್ನೇ ತೌರುಮನೆಗೆ ಸೇರಿಸಿ, ಅಲ್ಲಿಯ ಆಸ್ತಿಗೆ ಒಡತಿಯರನ್ನಾಗಿ ಮಾಡಬೇಕೆಂಬ ಹಂಬಲ ಆಕೆಯದು. ಆಕೆಯ ಆ ಹಂಬಲು ತೀರಲೇಬೇಕೆಂದಾಗ ಭಟ್ಟರ ಮಾತಿಗೆ ಬೆಲೆಯೇ ಇಲ್ಲವಾಗಿತ್ತು.

ಹೀಗಾಗಿ ಭಟ್ಟರ ಹಿರಿಯ ಮಗಳು ಭಾಗೀರಥಿ ಪಾರ್ವತವ್ವನ ಒಡಹುಟ್ಟಿದ ಅಣ್ಣನ ಮನೆಗೇ ಸೇರಿದ್ದಳು. ಕಿರಿಯ ಮಗಳು ತುಂಗೆ ಪಾರ್ವತವ್ವನ ಇನ್ನೊಬ್ಬ ಅಣ್ಣನ ಮನೆಗೇ ಸೇರಿದ್ದೇನೋ ನಿಜ. ಆದರೆ ಆತ ಪಾರ್ವತವ್ವನ ಬೆನ್ನಲ್ಲಿ ಬಿದ್ದ ಅಣ್ಣನಲ್ಲ, ಸ್ವಲ್ಪ ಬಳಸಪ್ಪೆ.

ತೌರುಮನೆಯನ್ನು ಬೆಳಗಿಸಲು ಭಾಗೀರಥಿಯನ್ನು ಕೊಟ್ಟಿದ್ದು ಪಾರ್ವತವ್ವನ ಒಂದು ಉದ್ದೇಶವಾದರೆ, ತುಂಗೆಯನ್ನು ಅಣ್ಣನ ಮನೆಗೆ ಸೇರಿಸಿದ ಉದ್ದೇಶ ಮತ್ತೊಂದು, ಹೇರಳವಾದ ಸಂಪತ್ತಿಗೆ ಏಕಮಾತ್ರದ ಒಡತಿಯಾದಾಳು ಎಂಬುದೇ ಆಕೆಯ ಎಣಿಕೆ.

ಲಗ್ನವಾಗಿ ಅತ್ತೆಯ ಮನೆಗೆ ಹೊರಟ ಹೆಣ್ಣುಮಕ್ಕಳು ಪುನಃ ತೌರನ್ನು ಕಂಡದ್ದು ಹತ್ತು ವರ್ಷಗಳ ಅನಂತರ.

# "...ರೆ, ಗಂಡನ ಆಯಸ್ಸು ಕ್ಷೀಣ ಆಗತ್ತೈತಿ"



## ಅಂಕುಶ

ಕೇಂದ್ರದ ಮದ್ದಾನೆಗೆ
'ಅಂಕುಶ'ವಾಗೋಣ
ಅನ್ಯಾಯದ ತೀರ್ಪು
ಸರಿದೂಗಿಸಲು;
ಅಭಿಮಾನದ ಕೋಟೆ
ಕಟ್ಟೋಣ
ಕಾವೇರಿಯನ್ನು ರಕ್ಷಿಸಲು !

ಡಿ. ವಿ. ಬಡಿಗೇರ್
ವಿರೂಪಾಕ್ಷ ನಿಲಯ, ತುಗ್ಗಿನಪೇಟೆ,
ಗದಗ, ಬೆಟಗೇರಿ - ೫೮೨ ೧೦೨

ತಂಗಿಯ ಕೈಯಿಂದ ಭಾಗೀರಥಿಯನ್ನು ಒಪ್ಪಿಸಿಕೊಂಡಾಗ ಪಾರ್ವತವ್ವನ ಅಣ್ಣ ಹಣಮಂತರಾಯ ತಂಗಿಯ ಕಣ್ಣೀರನ್ನು ಕಂಡು ಆಕೆಗೆ ಸಮಾಧಾನ ಹೇಳಿದ್ದ – ''ಪಾರ್ತೀ, ನೀನೇನೂ ಕಾಳಜಿ ಮಾಡಬ್ಯಾಡಾ, ನನಗೆ ನೀನು ಬೇರೆಯಲ್ಲ, ನಿನ್ನ ಮಗಳು ಬೇರೆಯಲ್ಲ. ನಿನ್ನ ಮಗಳನ್ನ ಹೂವಿನಂತೆ ಸಾಕ್ತೀವಿ, ನನ್ಮಗ ಭೀಮ್ಯ... ನಿನ್ನ ಅಳಿಯ... ಅವನ ಗುಣ ನೀನೇನು ಇವತ್ತು ನೋಡ್ತಿಲ್ಲ.''

ಅಣ್ಣ 'ಹಣಮೂ'ನ ಮಾತುಗಳಿಂದಾಗಿ ಪಾರ್ವತವ್ವ ಸಮಾಧಾನದ ನಿಟ್ಟುಸಿರುಬಿಟ್ಟಳು. ಇನ್ನೊಬ್ಬ ಅಣ್ಣನಿಂದಲೂ ಇಂಥದೇ ಭರವಸೆಯನ್ನು ಪಡೆದು, ತುಂಗೆಯನ್ನೂ ತನ್ನ ತೌರೂರಿಗೇ ಸೇರಿಸಿ ನಿಶ್ಚಿಂತಳಾಗಿದ್ದಳಾಕೆ.

ಅಣ್ಣಂದಿರಿಬ್ಬರೂ ತಮ್ಮ ಮಾತನ್ನುಳಿಸಿಕೊಂಡಿದ್ದರು. ಭಾಗೀರಥಿ ಅತ್ತೆಯ ಮನೆಯಲ್ಲಿ ಸುಖವಾಗಿಯೇ ಇದ್ದಳು. ಆಕೆ ಚೊಚ್ಚಲ ಹೆರಿಗೆಗೆಂದು ಬೆಟ್ಟದೂರಿಗೆ ಬಂದಿದ್ದುದಷ್ಟೆ. ಪುನಃ ಈಗಲೇ ತೌರಿಗೆ ಹೊರಟಿರುವುದು, ಉಳಿದ ನಾಲ್ಕು ಮಕ್ಕಳೊಡನೆ...

ತುಂಗೆಯ ರೀತಿ ಬೇರೆ, ಆಕೆ ಸೇರಿದ ಮನೆ ಹೆಣ್ಣು ದಿಕ್ಕಿಲ್ಲದ ಮನೆ. ಆ ಮನೆಗೆ ಅತ್ತೆ-ಸೊಸೆ ಎಲ್ಲವೂ ಆಕೆಯೇ. ಹೊಸಲಕ್ಕಿ ಮೆಟ್ಟಿ ಮನೆಯೊಳಗೆ ಹೊಕ್ಕ ಕ್ಷಣವೇ ಆಕೆಯ ತಲೆಗೆ ಹೊಣೆಗಾರಿಕೆಯ ಪಟ್ಟ ಕಟ್ಟಿತು. ಹೇರಳವಾದ ಸಂಪತ್ತನ್ನು ಆಕೆ ಕಾಪಾಡಿ ರೂಢಿಸಬೇಕಾಗಿತ್ತು. ಚೊಚ್ಚಲು ಹೆರಿಗೆಗೂ ತುಂಗೆ ತೌರುಮನೆಗೆ ಬರಲಿಲ್ಲ. ಹೀಗಾಗಿ ಇಬ್ಬರ ಹೆಣ್ಣುಮಕ್ಕಳೂ ತೌರನ್ನು ಕಾಣಲು ಹಲವಾರು ವರ್ಷಗಳೇ ಕಾಯಬೇಕಾಯಿತು.

ಹೆಣ್ಣುಮಕ್ಕಳನ್ನು ಧಾರೆ ಎರೆದು ಕೊಟ್ಟಾಕ್ಷಣ ಅವರು ತೌರಿಗೆ ಹೊರತಾದಾರೇ ? ಆದರೆ ಭಟ್ಟರ ಪಾಲಿಗೆ ಹಾಗೇ ಆಗಿತ್ತು. ಭಾಗೀರಥಿ ತುಂಗೆಯರನ್ನು ಕಂಡು ಹತ್ತಾರು ವರ್ಷಗಳೇ ಸಂದುಹೋಗಿದ್ದುವು. ಈ ಅವಧಿಯಲ್ಲಿ ಭಟ್ಟರು ನೋಡಿದ್ದರೆಂದರೆ, ಅದು ಪತ್ರಗಳ ಮುಖೇನ ಮಾತ್ರ.

ಈ ಸಲದ ಹಬ್ಬಸಾಲಿಗೆ ಹೇಗಾದರೂ ಮಾಡಿ ಭಾಗೀರಥಿ, ತುಂಗೆಯರನ್ನು ಕರೆಸಿಕೊಳ್ಳಲೇಬೇಕೆಂದು ಭಟ್ಟರು ಪಟ್ಟುಹಿಡಿದರು. ತಂದೆ ತಾಯಿಗಳಿದ್ದಾಗಲೇ ಹೆಣ್ಣುಮಕ್ಕಳು ತೌರಿಗೆ ಬಂದುಹೋಗುವುದು ಈ ಚೆನ್ನವಾದರೆ ಇನ್ನು ಗಂಡುಮಕ್ಕಳಾದ ಶಿವು, ಅನಂತ ಅವರು ದೊಡ್ಡವರಾಗಿ, ಮನೆಗೆ ಸೊಸೆಯರು ಬಂದಾಗ ತೌರಿನ ಆಸೆಯನ್ನೇ ಹೆಣ್ಣುಮಕ್ಕಳು ಬಿಡಬೇಕಾಗುವುದೇಸೋ ಎಂಬ ಕೊರಗು ಅವರನ್ನು ಆವರಿಸಿ, ಅದರ ಪರಿಹಾರಕ್ಕೆಂದೇ ಈ ಸಲದ ಹಬ್ಬಸಾಲಿಗೆ ತೌರಿಗೆ ಬರಬೇಕೆಂಬ ಆಹ್ವಾನ ಭಾಗೀರಥಿ, ತುಂಗೆಯರಿಗೆ ಹೋಗಿತ್ತು. ಇಬ್ಬರೂ ತಂತಮ್ಮ ಮಕ್ಕಳೊಡನೆ ತೌರಿಗೆ ಹೊರಟಿದ್ದರು.

ಹಬ್ಬದ ಸಾಲೆಂದರೆ ಆಷಾಢದ ಕೊನೆ, ಶ್ರಾವಣದ ಆರಂಭ; ಮಲೆನಾಡಿನಲ್ಲಿ ಮಳೆಯ ರೌದ್ರಾವತಾರ. ಭಾಗೀರಥಿ, ತುಂಗೆ ಬೆಟ್ಟದೂರಿಗೆ ಬಂದ ದಿನವಂತೂ ಮಳೆಯ ಆರ್ಭಟ ಮತ್ತೂ ಒಂದು ಪಾಲು ಹೆಚ್ಚಾಗಿಯೇ ಇತ್ತು. ಬೆಟ್ಟದೂರಿಗೆ ಬಸ್ಸಿನ ಸೌಕರ್ಯವಿರಲಿಲ್ಲ. ಮೂರು ಮೈಲಿ ದೂರದ ಪೇಟೆಯಲ್ಲಿ ಬಸ್ಸಿನಿಂದಿಳಿದು, ಮುಂದೆ ಎತ್ತಿನ ಬಂಡಿಯಲ್ಲಿ ಪ್ರಯಾಣ.

ಅಂದಿನ ಮಳೆಯನ್ನು ಕಂಡಾಗ, ಆಳುಮಕ್ಕಳಿಗೆ ಗಾಡಿಯನ್ನು ಕಟ್ಟಿರೆಂದು ಹೇಳುವ ಧೈರ್ಯ ಭಟ್ಟರಿಗಾಗಲಿಲ್ಲ. ಆದರೆ... ಬಸ್ಸಿನಿಂದಿಳಿದ ಹೆಣ್ಣುಮಕ್ಕಳು ಬೀದಿಯಲ್ಲಿ ನಿಂತಿರಬೇಕೇ ? ಅದೂ ಸಾಧ್ಯವಿಲ್ಲ. ಭಟ್ಟರ ಮನಸ್ಸು ಹಾಗೂ ಹೀಗೂ ಹೊಯ್ದಾಡತೊಡಗಿತ್ತು. ಅವರ ಮನದ ಬೇಗುದಿಯನ್ನು ರಾಮ ಊಹಿಸಿದ. ಕೂಡಲೇ ಊರ ಗಂಗವ್ವನಿಗೆ ಹರಕೆ ಹೊತ್ತು, ಕೆಳಗಿನ ಬೀದಿಯ ಕೆಂಚನ ಗಾಡಿಯನ್ನು ಕಟ್ಟಿ, ಭಟ್ಟರ ಮನೆಯ ಮುಂದೆ ತಂದೇಬಿಟ್ಟ. ಭಟ್ಟರಿಗೆ ತಿಳಿಸಿ, ಅವರ ಅಪ್ಪಣೆ ಪಡೆದು ಪಟ್ಟಣಕ್ಕೆ ಹೊರಡುವುದಷ್ಟೇ ಉಳಿದಿತ್ತು.

ರಾಮನ ಧೈರ್ಯವನ್ನು ಕಂಡ ಭಟ್ಟರು ಮನಸ್ಸಿನಲ್ಲಿಯೇ ಅವನನ್ನು ಮೆಚ್ಚಿದರು. ಹೋಗಿ ಬಾರೆಂದು ಅಪ್ಪಣೆಯನ್ನೂ ಕೊಟ್ಟರು. ರಾಮ ಗಾಡಿಯೊಳಗೆ ಹುಲ್ಲು ಹಾಸಿ, ಎರಡು ಕೊಡೆಗಳನ್ನಿಟ್ಟು ಚಾಟಿಯನ್ನು ಕೈಯಲ್ಲಿ ಹಿಡಿದು, ಗಾಡಿಯಲ್ಲಿ ಕುಳಿತು ಮರೆಯಾದ. ಪಾರ್ವತವ್ವ ಮನೆಯ ಕಟ್ಟೆಯ ಮೇಲೆ ನಿಂತು 'ಜೋಪಾನವೋ ರಾಮಾ' ಎಂದು ನಾಲ್ಕಾರು ಬಾರಿ ಹೇಳೇ ಹೇಳಿದರು. ಮಳೆಯ ಆರ್ಭಟದಲ್ಲಿ ಅವರ ಮಾತು ರಾಮನ ಕಿವಿಗೆ ಬೀಳಲೇ ಇಲ್ಲ.

ರಾಮನ ಗಾಡಿ ಪೇಟೆಯನ್ನು ಸೇರುವ ವೇಳೆಗೆ ಹಾವೇರಿಯ ಬಸ್ಸು ಇನ್ನೂ ಬಂದಿರಲಿಲ್ಲ. ರಾಮ ಗಾಡಿಯನ್ನು ನಿಲ್ದಾಣದ ಬದಿಯಲ್ಲಿ ಒಂದು ಕಡೆ ನಿಲ್ಲಿಸಿ, ಒಂದೆರಡು ಬೀಡಿ ಸೇದಿ ಮುಗಿಸುವ ಹೊತ್ತಿಗೆ ಬಸ್ಸು ನಿಲ್ದಾಣಕ್ಕೆ ಬಂದಿತು. ರಾಮ ಸೇದುತ್ತಿದ್ದ ಬೀಡಿಯನ್ನು ಎಸೆದು, ಕೊಡೆಗಳನ್ನು ಕೈಯಲ್ಲಿ ಹಿಡಿದು, ಬಸ್ಸಿನ ಬಳಿಗೆ ಓಡೋಡಿ ಬಂದ.

ಬಸ್ಸಿನಲ್ಲಿ ಕುಳಿತಿದ್ದ ಭಾಗೀರಥಿ, ತುಂಗೆಯರಿಗೆ ರಾಮನ ಗುರುತು ಸಿಕ್ಕಲಿಲ್ಲ, ಅದೂ ನಿಜವೇ. ಅವರಿಬ್ಬರೂ ರಾಮನನ್ನು ಕಂಡಿದ್ದುದು ಹತ್ತು ಹನ್ನೆರಡು ವರ್ಷಗಳ ಹಿಂದೆ. ಒಂದು ಹರಕಲು ಚೆಡ್ಡಿಯನ್ನು ತೊಟ್ಟು ಕೈಯಲ್ಲಿ ಕೋಲೊಂದನ್ನು ಹಿಡಿದು, ತಮ್ಮ ಮನೆಯ ದನಕರುಗಳನ್ನು ಅಟ್ಟಿಕೊಂಡು ಹೋಗುತ್ತಿದ್ದ ವೇಷದಲ್ಲಿ. ಆದರೆ ಇಂದಿನ ರಾಮ ಅವನಲ್ಲ. ವಯಸ್ಸಿಗೆ ಬಂದ ದೊಡ್ಡ ಆಳು, ಕಟ್ಟುಮಸ್ತಾದ ಮೈಕಟ್ಟು.

ರಾಮನಿಗೇನೋ ತುಂಗೆ, ಭಾಗೀರಥಿಯರ ಗುರುತು ಸಿಕ್ಕಿತು. ತಾನೇ ತನ್ನ ಪರಿಚಯವನ್ನು ಹೇಳಿಕೊಂಡ. ''ದನ ಕಾಯುತ್ತಿದ್ದ ಆ ರಾಮನೇ ಇವ !!??'' ಎಂದು ಆಶ್ಚರ್ಯ ಪಡುತ್ತ ಅಕ್ಕತಂಗಿಯರಿಬ್ಬರೂ ಮಕ್ಕಳೊಡನೆ ಬಸ್ಸಿನಿಂದಿಳಿದರು. ಛತ್ರಿಗಳ ಆಶ್ರಯದಲ್ಲಿ ಎಲ್ಲರೂ ಗಾಡಿಯನ್ನು ಸೇರಿದರು. ಅವರ ಸಾಮಾನುಗಳನ್ನೆಲ್ಲ ಬಸ್ಸಿನಿಂದಿಳಿಸಿ ಗಾಡಿಯಲ್ಲಿ ತಂದಿಟ್ಟ ರಾಮ. ಮರುಕ್ಷಣದಲ್ಲಿ ಗಾಡಿ ಬೆಟ್ಟದೂರಿನ ಹಾದಿ ಹಿಡಿದಿತ್ತು.

ಕಪ್ಪನೆಯ ಮೋಡ ದಟ್ಟವಾಗಿ ಕವಿದಿದ್ದುದರಿಂದ ಅದು ಬೆಳಗ್ಗೆಯೇ, ಮಧ್ಯಾಹ್ನವೇ, ಸಂಜೆಯೇ – ಎಂಬುದರ ಅರಿವೇ ಆಗುವಂತಿರಲಿಲ್ಲ. ಮುಗಿಲಿಂದ ನೆಲದವರೆಗೆ ಏಕವಾಗಿದ್ದ ಜಲಧಾರೆ; ಆಗೊಮ್ಮೆ ಈಗೊಮ್ಮೆ ಕತ್ತಿಯ ಅಲುಗಿನಂತೆ ಫಳಕ್ಕನೆ ಹೊಳೆದು ಮಾಯವಾಗುತ್ತಿದ್ದ ಮಿಂಚು; ಮಧ್ಯೆ ಮಧ್ಯೆ ಗುಡುಗಿನ ಆರ್ಭಟ. ಇಷ್ಟರ ಜೊತೆಗೆ ಹುಶ್... ಹೇಯ್... ಹಚ್... ಹಚ್... ಟುರ್... ಟುರ್... ಎನ್ನುವ ರಾಮನ ಧ್ವನಿ ಎತ್ತುಗಳಿಗಾಗಿ.

ಛತ್ರಿಗಳನ್ನು ಅಡ್ಡವಾಗಿ ಹಿಡಿದಿದ್ದರೂ ಮಳೆಯ ಇರುಚಲು ಗಾಡಿಯೊಳಕ್ಕೆ ತೂರಿಬಂದು, ಒಳಗಿದ್ದವರಿಗೆ ಸಿಂಪಡಿಸುತ್ತಿತ್ತು.

ಮಳೆಯನ್ನೇ ಕಾಣದ ದೇಶದಲ್ಲಿ ಹುಟ್ಟಿ ಬೆಳೆದ ಆ ಮಕ್ಕಳೆಲ್ಲ ಈ ಮಲೆನಾಡಿನ ಮಳೆಯ ಆರ್ಭಟ ಕಂಡು ಹೆದರಿ ಕಂಗಾಲಾಗಿದ್ದುವು. ಛಳಿಯಂತೂ ಎಲ್ಲರನ್ನೂ ಗಡಗಡನೆ ನಡುಗಿಸುತ್ತಿತ್ತು.

''ಇದೇನೋ ರಾಮ, ಈ ಮಳೆಯ ಆರ್ಭಟ ? ಈ ಊರಲ್ಲೇ ಹುಟ್ಟಿ ಬೆಳೆದ ನಾವೇ ಕಂಡಿರಲಿಲ್ಲ... ಬಿಡು...'' ಭಾಗೀರಥಿ ತನ್ನ ಆಶ್ಚರ್ಯವನ್ನು ಹೊರಗೆಡಹಿದಳು.

''ಹೌದು, ಹೌದು...'' ತುಂಗೆಯೂ ದನಿಗೂಡಿಸಿದಳು.

''ಈ ಸಲ ಆರಿದ್ರೆ ಮಳೆ ಏನೇನೂ ಸಾಲದ್ರೀ... ಅಣ್ಣನ ಮಳೆ ಸ್ವಲ್ಪ ಜೋರೇ ಇತ್ತು. ತಮ್ಮನ ಮಳೆ ಆರಂಭವಾಗೈತಿ...ಇದಂತೂ ಮತ್ತೂ ಜೋರೇ ಕಾಣತೈತಿ... ಭಟ್ಟರೂ ಹೇಳ್ತಿದ್ರು... ಈ ಪಟ್ಟು ಅಣ್ಣನಿಗಿಂತ ತಮ್ಮನೇ ಜೋರು ಅಂತ...'' ರಾಮ ಮಳೆಯ ವಿಮರ್ಶೆ ಮಾಡಿ ಹೇಳಿದ.

''ಅಣ್ಣ ತಮ್ಮಂದಿರ ಮಳೇಂದ್ರೆ... ಪುನರ್ವಸು ಪುಷ್ಯದ ಮಳೆಯೇನೋ... ಇದು ತಮ್ಮನ ಮಳೆ ಅಂದ್ರೆ...ಪುನರ್ವಸು ಮಳೆ ಮುಗಿದು ಪುಷ್ಯದ ಮಳೇನ್ನು...'' ತುಂಗೆ ಕೇಳಿದಳು.

''ಹೌದ್ರೀ ಅವ್ವ... ಇದು ಪುಷ್ಯದ ಮಳೆಯೇ. ಪುನರ್ವಸು ಮುಗಿದು ನಾಲ್ಕು ದಿನಗಳಾದುವು'' ರಾಮ ಸಮರ್ಥಿಸಿದ.

''ನಿಮ್ಮವ್ವ ಚೆಂದವೇನೋ ರಾಮ ?''

''ಎಲ್ಲಿ ಬಂತ್ರೀ ? ...ನಮ್ಮವ್ವ ಕಣ್ಮುಚ್ಚಿ ಎರಡು ವರ್ಷ ಕಳೀತು.''

''ಮುದುಕಿ ಹೊರಟ್ಹೋದ್ಲೇನೋ... ನಿನ್ನ ಲಗ್ನ...?''

''ಕಳೆದ ವರ್ಷ ಆಯಿತ್ರೀ...''

''ಹೆಣ್ಣು ಯಾವ ಊರಿಂದೋ ?''

''ನನ್ನ ಅಕ್ಕನ ಮಗಳು ಮಂಜೀನ ಕಾಣ್ರಾ ನೀವು... ಅವಳ್ನೇ ಲಗ್ನವಾಗಿದೀನಿ...''

''ಅದೂ ತಬ್ಬಲಿ ಹುಡುಗೀಂತ ತೋರ್ತದೆ... ಅಲ್ಲವೇನೋ...''

''ಹೌದ್ರೀ, ನಮ್ಮವ್ವ ಸಾಯೋವಾಗ ಮಂಜೀನ್ನೇ ಲಗ್ನ ಆಗ್ಬೇಕೂಂತ ನನ್ನ ಹತ್ರ ಮಾತು ತೊಗೊಂಡೇ ಸತ್ಲು... ಇನ್ನೇನು ಮಾಡೋದು ಹೇಳ್ರಿ... ಅವಳ್ನೇ ಲಗ್ನವಾದಿ...''

''ಮಂಜಿ ನೋಡೋಕ್ಕೆ ಚೆನ್ನಾಗಿಲ್ವೇನೋ...'' ತುಂಗೆ ಕೆಣಕಿದಳು.

''ಐದಾಳ್ರೀ...'' ರಾಮ ನಾಚುತ್ತಲೇ ಉತ್ತರವಿತ್ತ.

ಸ್ವಲ್ಪ ಹೊತ್ತು ಮೌನವಾಗಿ ಸಾಗಿತು. ಪುನಃ ಮಾತಿಗಾರಂಭವಾಯಿತು.

''ಕೊಟ್ಟಿಗೇಲಿ ದನಕರುಗಳೆಲ್ಲ ಚೆಂದಾಗವೇನೋ ರಾಮ...?''

''ಅದಾವ್ರೀ... ಕಪಿಲೆ ಮುದಿಯಾಯ್ತು. ಎರಡು ಎಮ್ಮೆಗಳು ಕರೀತಾವೆ... ಇನ್ನೊಂದು ಎಮ್ಮೆ ಮಾಘಕ್ಕೆ ಕರು ಹಾಕೀತು... ಜಾತ್ರೆ ವೇಳೆಗೆ...''

''ಕಪಿಲೆ ಆಗಲೇ ಮುದಿಯಾಯ್ತೆ... ಹೂ... ಇದ್ದೀತು... ಅದರ ಚೊಚ್ಚಲು ಮಗಳು ಗಂಗೆ ಹುಟ್ಟಿದಾಗ ನಾವು ಅದನ್ನು ನೋಡಿದ್ದು. ಗಂಗೆ ಚೆನ್ನಾಗಿದೆಯೇನೋ...?''

''ಅಯ್ಯೋ ಎಲ್ಲಿ ಬಂತ್ರೀ ? ಹೋದ ವರ್ಷ ಗಂಗೇನ ಗದ್ದೆ ಅಂಚಿನಲ್ಲಿ ಹುಲಿ ಹಿಡೀತು. ಎಳೇಕರೂನ ಬಿಟ್ಟು ಹೋಗಿಬಿಡ್ತು ಗಂಗೆ... ಅದೂ ಹೋರಿಕರು.''

''ಹೋರಿಗರುವೇನೋ...''

''ಹೌದ್ರಿ... ಆ ಬಸವನ್ನ ನಾನೇ ಕಣ್ಣಲ್ಲಿ ಕಣ್ಣಿಟ್ಟು ಸಾಕಿ ದೊಡ್ಡದು ಮಾಡಿದೀನ್ರೀ, ನಮ್ಮ ಮನೆ ನಂದಿಗೂ, ಬಸವನಿಗೂ ಜೊತೆ ಸರಿಹೋಗತ್ತೆತ್ರಿ... ನಾನಾಗ್ಲೇ ಭಟ್ಟರ ಕಿವಿಗೂ ಈ ವಿಷಯ ಹಾಕಿದೀನ್ರಿ... ಬಸವ ದೊಡ್ಡದಾದ ಮೇಲೆ ನನಗೇ ಕೊಡಬೇಕೂಂತ...''

''ಹೋರಿಗರು ಇಟ್ಕೊಂಡು ನಾವಾದ್ರೂ ಏನು ಮಾಡೇವು... ಎಂದಿದ್ರೂ ಅದನ್ನ ಇನ್ನೊಬ್ಬರಿಗೆ ಕೊಡೋದು... ನಿನಗೇ ಕೊಟ್ಟರೆ ಸರಿ... ಏನೀಗ...''

''ಭಟ್ಟರೂ ಒಪ್ಪಿದಾರ್ರೀ... ಬಸವ ತಾಯಿಯಿಲ್ಲದ ತಬ್ಬಲಿ. ಅದನ್ನ ನೀನೇ ಜೋಪಾನ ಮಾಡ್ದೆ... ಅದು ನಿನಗೇ ಸೇರೋದೇ ನ್ಯಾಯಾಂತ ಹೇಳಿದಾರ್ರೀ. ನಂದಿ, ಬಸವ ಸೇರಿದರೆ ಒಂದು ಜೊತೆ ಎತ್ತು ಆದ್ಹಂಗಾತು. ಮುಂದೆ ಅನುಕೂಲ ಕಂಡಾಗ ಒಂದು ಗಾಡಿ ಮಾಡ್ಕೊಂಡ್ರೆ ಸಾಕು...''

''ಈ ಗಾಡಿ ನಿನ್ನದಲ್ಲವೇನೋ...?''

''ಗಾಡಿ ನನಗೆಲ್ಲಿದಾವ್ರೀ ? ಕೆಳಗಿನ ಬೀದಿ ಕೆಂಚನದು... ನಾನು ಕಟ್ಟಿ ತಂದಿದೀನ್ರೀ... ಅಷ್ಟೇ...''

ಭಾಗೀರಥಿ, ತುಂಗೆಯರಿಗೆ ತೌರಿನ ಸುದ್ದಿ ಎಷ್ಟು ಕೇಳಿ ತಿಳಿದರೂ ತೃಪ್ತಿಯಿಲ್ಲ. ಅದೂ ಇದೂ ಕೇಳಿ ತಿಳಿಯುವ ವೇಳೆಗೆ ಗಾಡಿ ಊರ ಬಾಗಿಲನ್ನು ಸಮೀಪಿಸಿತ್ತು; ಮುಂದೆ ಹತ್ತಾರು ನಿಮಿಷಗಳಲ್ಲಿ ಭಟ್ಟರ ಮನೆಯ ಮುಂದೇ ನಿಂತಿತ್ತು. ಭಟ್ಟರು, ಪಾರ್ವತವ್ವ ಮಕ್ಕಳನ್ನು ಸ್ವಾಗತಿಸಲು ಕಟ್ಟೆಯ ಮೇಲೇ ನಿಂತಿದ್ದರು.

ರಾಮ ಗಾಡಿಯ ಎತ್ತುಗಳನ್ನು ಬಿಚ್ಚಿ ಪಕ್ಕಕ್ಕೆ ಸರಿಸಿದ. ಎಲ್ಲರೂ ನಿಧಾನವಾಗಿ ಇಳಿದು ಕೊಡೆಗಳನ್ನು ಹಿಡಿದು ಮನೆಯೊಳಕ್ಕೆ ಹೊರಟರು. ಮಕ್ಕಳೆಲ್ಲ ಕುಣಿಯುತ್ತ ಹಾರುತ್ತ 'ಅಜ್ಜನ ಮನಿ, ಅಜ್ಜನ ಮನಿ' – ಎಂದು ಕೂಗಾಡುತ್ತ ಕಟ್ಟೆಯನ್ನು ಏರಿದುವು. ಗಾಡಿಯಲ್ಲಿದ್ದ ಸಾಮಾನೆಲ್ಲವನ್ನೂ ರಾಮ ತಂದು ಪಡಸಾಲೆಯಲ್ಲಿರಿಸಿದ.

* * *

ಭಾಗೀರಥಿ, ತುಂಗೆ ಊರಿಗೆ ಬಂದು ಎರಡು ದಿನ ಕಳೆದಿದ್ದರೂ ಮಳೆ ಹಿಮ್ಮೆಟ್ಟಿರಲಿಲ್ಲ. ಅದರಿಂದಾಗಿ ಮನೆ ಬಿಟ್ಟು ಎಲ್ಲಿಗೂ ಹೋಗುವಂತೆಯೂ ಇರಲಿಲ್ಲ.

ಹೆಣ್ಣುಮಕ್ಕಳು ತೌರನ್ನು ಬಿಟ್ಟು ಹೊರಟಾಗಿನಿಂದೀಚೆಗೆ ಭಟ್ಟರ ಮನೆಯಲ್ಲಿ ಅಲ್ಲೊಂದು ಇಲ್ಲೊಂದು ಸಣ್ಣಪುಟ್ಟ ಬದಲಾವಣೆಗಳು ಆಗಿದ್ದುವು. ಭಾಗೀರಥಿ, ತುಂಗೆ ಅವುಗಳನ್ನೆಲ್ಲ ನೋಡುತ್ತ ಹಾಗೆಯೇ ಕೊಟ್ಟಣದ ಮನೆಗೆ ಬಂದರು.

ಕೊಟ್ಟಣದ ಮನೆಯಲ್ಲಿ ಭತ್ತ ಕುಟ್ಟುವ ಹೆಂಗಸರು ಸೇರಿದ್ದರು. ರಾಮ ಹತ್ತಾರು ಗೂಡೆ ಭತ್ತವನ್ನು ಪಣತ (ಧಾನ್ಯ ತುಂಬುವ ಕಣಜ)ದಿಂದ ತಂದು ಸುರಿದಿದ್ದ. ಭತ್ತ ಕುಟ್ಟಲು ಒನಕೆ ಹಿಡಿದಿದ್ದವರು, ಒಕ್ಕಲು ಮನೆಯ ಹೆಂಗಸರೇ ಆದ ದೇವಿ, ಚೌಡಿ ಮತ್ತು ಗೌರಿ. ಕುಟ್ಟಿದ ಭತ್ತವನ್ನು ಕೇರುತ್ತಿದ್ದವಳು ರಾಮನ ಹೆಂಡತಿ ಮಂಜಿ. ದಿನ ತುಂಬಿದ ಗರ್ಭಿಣಿಯಾಗಿದ್ದುದರಿಂದ ಒನಕೆ ಹಿಡಿದಿರಲಿಲ್ಲ.

ದೇವಿ ಭಾಗೀರಥಿಯ ಓರಗೆಯವಳೇ, ಗೌರಿ ತುಂಗೆಯ ಜೊತೆ. ದೇವಿ, ಗೌರಿ ಇಬ್ಬರಿಗೂ ಹುಟ್ಟಿದೂರು, ಸೇರಿದೂರು ಬೆಟ್ಟದೂರೇ ಆಗಿತ್ತು. ಚೌಡಿ ಬೆಟ್ಟದೂರಿಗೆ ಬಂದು ಸೇರಿದ್ದ ಸೊಸೆ. ಮೂರು ಮಂದಿಯೂ ಒರಳ ಸುತ್ತ ಸುತ್ತುತ್ತ ಭತ್ತ ಕುಟ್ಟುತ್ತಿರುವುದನ್ನು ಕಂಡು ಭಾಗೀರಥೀ, ತುಂಗೆಯರ ಮಕ್ಕಳು ಅಚ್ಚರಿಯಿಂದ ನೋಡುತ್ತ ನಿಂತವು. ಎಲ್ಲರೂ ಹಿಂದಿನ ನೆನಪುಗಳನ್ನು ಮೆಲಕು ಹಾಕುತ್ತ ಅಲ್ಲಿ ಸೇರಿದ್ದರು.

ಅಷ್ಟು ಮಂದಿಯಲ್ಲಿ ಕಿರಿಯವಳೆಂದರೆ ಮಂಜಿಯೇ. ಆಕೆಯ ಲಗ್ನವಾಗಿ ವರ್ಷದ ಮೇಲೆ ಏಳೆಂಟು ತಿಂಗಳುಗಳು ಕಳೆದಿದ್ದವಷ್ಟೆ. ಭಟ್ಟರ ಮನೆಯಾಳು ರಾಮನ ಹೆಂಡತಿಯವಳು – ಎನ್ನುವ ಅಭಿಮಾನದ ಜೊತೆಗೆ ತಾಯಿಯಿಲ್ಲದ ಮಂಜಿ ಊರೆಲ್ಲರಿಗೂ ಮಗಳೇ ಎನ್ನುವ ವಿಶ್ವಾಸ. ಮಂಜಿಯಾದರೂ ಒಮ್ಮೆ ನೋಡಿದರೆ ಮತ್ತೊಮ್ಮೆ ನೋಡಬೇಕೆನ್ನಿಸುವ ಚೆಂದೊಳ್ಳೆಯ ಹೆಣ್ಣು. ಗರ್ಭಿಣಿ ಬೇರೆ... ಮೈದುಂಬಿ ಕಳಕಳಿಸುತ್ತಿದ್ದಳಾಕೆ. ಅಪ್ಪಿತಪ್ಪಿ ಅವಳು ಒಕ್ಕಲು ಮನೆಯಲ್ಲಿ ಹುಟ್ಟಿರಬೇಕೆಂದೇ ಎಲ್ಲರ ಭಾವನೆ. ಅಂಥ ಹೆಣ್ಣು ಭಟ್ಟರ ಮನೆಯಾಳು ರಾಮನ ಮಡದಿಯಾದಳೆಂದು ತಿಳಿದಾಗ ಕರುಬಿದವರೆಷ್ಟೋ ಮಂದಿ. ಮಂಜಿ ರಾಮನ ಅಕ್ಕನ ಮಗಳೇ ಆಗಿದ್ದ ಕಾರಣ, ಅವರಿಗೆಲ್ಲ ಕರುಬುವುದಷ್ಟೇ ಆಗಿತ್ತು.

ಮಂಜಿ ಈ ಲೋಕಕ್ಕೆ ಬಂದು, ಅವಳ ತಾಯಿ ಕಣ್ಮುಚ್ಚಿ ಇನ್ನೊಂದು ಲೋಕಕ್ಕೆ ಹೋದಾಗ, ರಾಮನ ತಾಯಿ ಧರ್ಮಸ್ಥಳದ ಮಂಜುನಾಥನಿಗೆ ಹರಕೆ ಹೊತ್ತು ಆ ತಬ್ಬಲಿ ಕೂಸನ್ನು ಉಳಿಸಿಕೊಂಡು, ಆ ಕೂಸಿಗೆ ಮಂಜಿಯೆಂದೇ ಕರೆದಿದ್ದಳು. ಕಂಡವರ ಮನೆಗೆ ಆ ಹೆಣ್ಣನ್ನು ಕೊಡಲು ಇಷ್ಟಪಡದೆ, ತನ್ನ ಸೊಸೆಯನ್ನಾಗಿಯೇ ಮಾಡಿಕೊಳ್ಳಬೇಕೆಂದು ಸಾಯುವ ಮುನ್ನ ರಾಮನಿಂದ ಮಾತು ತೆಗೆದುಕೊಂಡಿದ್ದಳು ಆ ಮುದುಕಿ. ಅದರಂತೆಯೇ ನಡೆದಿತ್ತು.

ತುಂಗೆಯ ಸ್ವಭಾವವೆಂದರೆ ಯಾವಾಗಲೂ ಏನಾದರೊಂದು ವಿಷಯ ತೆಗೆದು ಕೆಣಕುತ್ತಿರುವುದು. ಈ ದಿನವಂತೂ ಆಕೆಗೆ ಹೊತ್ತು ಹೋಗಲು ಒಂದು ಸಾಧನವೂ ಬೇಕಿತ್ತು. ಆ ಸಮಯದಲ್ಲಿ ಅವಳ ಕಣ್ಣಿಗೆ ಬಿದ್ದಳು ಮಂಜಿ.

ಮಂಜಿಯನ್ನೇ ಕೆಣಕಿದಳು ತುಂಗೆ – ''ಮಂಜೀ, ನಿನ್ನ ಲಗ್ನಕ್ಕಂತೂ ನಾವು ಈ ಊರಲ್ಲಿರಲಿಲ್ಲ. ನಿನ್ನ ಗಂಡನ ಹೆಸರಾದ್ರೂ ಒಂದು ಬಾರಿ ಹೇಳೆ ಕೇಳೋಣ...''

''ಹೌದು... ಹೇಳೇ ಮಂಜಿ...'' ಭಾಗೀರಥಿಯೂ ಬಲಾತ್ಕರಿಸಿದಳು.

ಗಂಡನ ಹೆಸರು ಹೇಳಬೇಕೆಂದಾದಾಗ ಮಂಜಿಯಂತೂ ನಾಚಿಕೆಯ ಮುದ್ದೆಯೇ ಆಗಿಹೋದಳು. ಆಕೆಯ ಮುಖವೆಲ್ಲ ಕೆಂಪೇರಿತು.

''ಹೇಳೇ ಮಂಜಿ...'' ತುಂಗೆ ಮತ್ತೊಮ್ಮೆ ಬಲಾತ್ಕರಿಸಿದಳು.

''ಹೋಗ್ರವ್ವ... ನಾ ಒಲ್ಲೆ...'' ಮಂಜಿ ತಲೆಯಾಡಿಸಿದಳು.

''ಹೇಳೇ... ಬಡಿವಾರ ಮಾಡ್ಬೇಡ...'' ಭಾಗೀರಥಿಯ ಒತ್ತಾಯ.

''ನಾನು ಹಂಗೆಲ್ಲ ಹೇಳಾಕಿಲ್ಲ ಹೋಗ್ರವ್ವ... ಗಂಡನ ಹೆಸರು... ಹೆಂಡತೀರು ಎಲ್ಲಾದ್ರೂ ಹೇಳೋದುಂಟಾ...?''

ಹೆಂಡತಿ ಗಂಡನ ಹೆಸರನ್ನೇ ಹೇಳಬಾರದೆಂದು ತಿಳಿದಿದ್ದ ಆ ಮುಗ್ಧೆಯ ಮೌಢ್ಯವನ್ನು ಕಂಡು, ತುಂಗೆ, ಭಾಗೀರಥಿ ಜೋರಾಗಿ ನಕ್ಕರು.

''ಹೇಳೇ ಅಂದ್ರೆ... ಏನೋ ಭಾರಿ ಬಡಿವಾರ ಈಕೀದು... ನಾವೇನು ಮೂರು ಹೊತ್ತೂ ನಿನ್ನ ಕೇಳ್ತಿರ್ತೇವೇನೇ ? ನಿನ್ನ ಮದುವೆ ಆದ್ಮೇಲೆ ಇದೇ ಮೊದಲಬಾರಿ ನಾವು ನೋಡ್ತಿರೋದು... ಏನೋ ಹೊಸಪರಿ... ಕೇಳಿದ್ವಿ ನೋಡು... ಹೇಳಿದರೇನೇ ತಪ್ಪು ?'' ತುಂಗೆ ಸಣ್ಣ ಕೋಪವನ್ನೆ ನಟಿಸಿದಳು.

''ಖಂಡಿತ ನಾ ಹೇಳೊಲ್ರಿ...'' ಮಂಜಿ ನಿರ್ಧಾರದ ಉತ್ತರವಿತ್ತಳು.

ಕಡೆಗೆ ಊರ ದೇವರ ಹೆಸರು ರಾಮೇಶ್ವರ ಎಂದಾದರೂ ಮಂಜಿಯ ಬಾಯಲ್ಲಿ ಹೇಳಿಸಬೇಕೆಂದು ತುಂಗೆ ಪ್ರಯತ್ನಪಟ್ಟು, ಅದರಲ್ಲೂ ವಿಫಲಳಾದಳು. ಏನಾದರೂ ತುಂಗೆ ತನ್ನ ಪಟ್ಟು ಬಿಡಲಿಲ್ಲ. ಈ ದಿನ ಮಂಜಿಯ ಬಾಯಲ್ಲಿ ಅವಳ ಗಂಡನ ಹೆಸರನ್ನು ಹೇಳಿಸಿ ಕೇಳಲೇಬೇಕೆಂದು ಆಕೆಯ ಹಠ.

''ನಾವೇನು ದುಡ್ಡು ಕಾಸು ಕೇಳಿದ್ವೇನೇ ? ನಿನ್ನ ಗಂಡನ ಹೆಸರು ಒಂದು ಬಾರಿ ಹೇಳೇ ಅಂದ್ರೆ... ಭಾರೀ ಈಕೀದು... ಏನೋ ಚಿಕ್ಕಪುಟ್ಟ ಹುಡುಗೀಂತ ಕೇಳಿದ್ವಿ ನೋಡು. ವಯಸ್ಸಾದ ಮುದುಕೀರ್ನ ಯಾರಾದ್ರೂ ಕೇಳೋಕ್ಕೆ ಹೋಗ್ತಾರೇನೇ ?'' ಭಾಗೀರಥಿ ನ್ಯಾಯ ಒಪ್ಪಿಸಿದಳು.

ಈ ದಿನ ಏನೇ ಆದರೂ ತನ್ನನ್ನು ಬಿಡುವುದಿಲ್ಲವೆಂದು ಮಂಜಿಗೆ ಖಚಿತವಾಯಿತು. ಭತ್ತ ಕುಟ್ಟುತ್ತಿದ್ದ ದೇವಿ, ಗೌರಿ, ಚೌಡಿಯರೂ ತಮ್ಮ ಕೆಲಸ ನಿಲ್ಲಿಸಿ, ಈ ಮೋಜನ್ನು ನೋಡುತ್ತ ನಿಂತರು.

''ಗಂಡನ ಹೆಸರು ಹೇಳೂಂದ್ರೆ ನೀವು ಹೇಳಿಬಿಡ್ತೀರೇನವ್ವ ?'' ಮಂಜಿ ಕುತೂಹಲದಿಂದ ಕೇಳಿದಳು.

''ಸಾವಿರ ಸಲ ಬೇಕಾದ್ರೂ ಹೇಳ್ತೇವೆ. ನಮ್ಮೂರಲ್ಲಿ ಯಾರ್ಯಾರೋ ಬರ್ತಿರ್ತಾರೆ, ಅವರು ಬಂದ ಹೊತ್ನಲ್ಲಿ ಗಂಡಸರು ಮನೆಯಲ್ಲಿ ಒಂದೊಂದು ವೇಳೆ ಇರೋದೇ ಇಲ್ಲ. ಏನೇನೋ ಬರ್ಕ್ಕೋಬೇಕೂಂತಾರೆ, ಮನೆಯಲ್ಲಿ ಎಷ್ಟು ಮಂದಿ ಇದ್ದೀರಿ, ಯಜಮಾನರ ಹೆಸರೇನು, ಉಳಿದವರ ಹೆಸರೇನು – ಎಂದೆಲ್ಲ ಕೇಳ್ತಾರೆ. ಆಗ ನಾವೂ ನಿನ್ನ ಹಂಗೆ ಬಡಿವಾರ ಮಾಡ್ತಾ ಕೂತ್ರೆ, ಆಯ್ತು ಬಿಡು.'' ತುಂಗೆ ಇದ್ದ ವಿಚಾರ ತಿಳಿಸಿ ಥಟ್ಟನೆ ಉತ್ತರವಿತ್ತಳು.

''ನೀವೇನಂದ್ರೂ ನಾನು ಬೇರೆ ಹೇಳೋ ಆಕಿಯಲ್ಲ...'' ಮಂಜಿಯದು ಪುನಃ ಅದೇ ಹಾಡು.

''ಅದೇಕೆ...?'' ಭಾಗೀರಥಿಯ ಕುತೂಹಲ.

''ಹೌದ್ರೀ... ಗಂಡನ ಹೆಸರು ಹೇಳಿದರೆ ಅವರ ಆಯಸ್ಸು ಕ್ಷೀಣ ಆಗತೈತಿ...''

''ಯಾರೇ ನಿನಗೆ ಹಾಗೆ ಹೇಳಿದ್ದು...?''

''ಸಾಯೋ ಮುನ್ನ ನಮ್ಮವ್ವನೇ ಹೇಳ್ಯಾಳ್ರೀ...ಹೆಂಡತಿ ಗಂಡನ ಹೆಸರು ಹೇಳಬ್ಯಾಡ್ದು ಹೇಳಿದರೆ ಅವನ ಆಯಸ್ಸು ಕ್ಷೀಣ ಆಗತೈತಿ... ಗಂಡನ್ನ ಒಂದೇ ಸಮನೆ ಹೆಚ್ಚು ಹೊತ್ತು ನೋಡ್ತಾ ನಿಂದಿರಲೂಬಾರ್ದು, ದೃಷ್ಟಿತಗುಲಿ ಬಾಡಿ ಹೋಗ್ತಾನೆ – ಅಂತ.''

''ನಾವೆಂದೂ ಕೇಳೇ ಇರ್ಲಿಲ್ಲ ಬಿಡು. ನಮ್ಮ ಮನೆ ಲಗ್ನಗಳಲ್ಲಿ ಹುಡುಗಿ ಬಾಯಲ್ಲಿ

ಗಂಡನ ಹೆಸರು ಹೇಳ್ಳೋದೇ ನಮಗೊಂದು ಮೋಜು. ಲಗ್ನದ ಹುಡುಗಿ ಮದುವೆ ಪೂರೈಸುವ ವೇಳೆಗೆ ಏನಿಲ್ಲಾಂದ್ರೂ ಐವತ್ತು ಬಾರಿ ಹೇಳಿರ್ತಾಳೆ'' ತುಂಗೆ ತನ್ನ ಆಶ್ಚರ್ಯವನ್ನು ವ್ಯಕ್ತಪಡಿಸಿದಳು.

''ಐವತ್ತು ಬಾರಿ !!'' ಮಂಜಿಗೂ ತುಂಗೆ ಹೇಳಿದ ಮಾತು ಆಶ್ಚರ್ಯವನ್ನೇ ಉಂಟುಮಾಡಿತ್ತು.

''ಲಗ್ನ ಮುಗಿದ ಮೇಲೂ ಹೊಸಪರೀಲಿ ನಾವು ಹೆಸರು ಹೇಳ್ಳೋದೇ ಸರಿ. ಹಾಗೇ ನಿನ್ನನ್ನೂ ಕೇಳಿದ್ವಿ ನೋಡು. ಹೇಳೋಕ್ಕೆ ಇಷ್ಟವಿಲ್ಲದೆ ಶಾಸ್ತ್ರ ಬೇರೆ ತೆಗೆದೆ...''

''ಹಂಗಾದ್ರೆ ನೀವಿಬ್ರೂ ಹೇಳ್ರವ್ವ... ಆಮೇಲೆ ನಂದು ಪಾಳಿ...'' ಮಂಜಿ ಸ್ವಲ್ಪ ಸೋತಳು.

''ಹೇಳ್ಬೇಕೇನೇ...ಕೇಳು...'' ಎನ್ನುತ್ತಾ ತುಂಗೆ ಒಂದು ಕ್ಷಣ ಆಲೋಚಿಸಿ ಹೇಳಿದಳು – ''ಶ್ರೀರಾಮನು ಸೀತಾದೇವಿಯನ್ನು ವಿವಾಹವಾದದ್ದು ಮಿಥಿಲೆಯಲ್ಲಿ; ಗೋಪಾಲ ರಾಯರು ನನ್ನನ್ನು ಲಗ್ನವಾದದ್ದು ಬೆಟ್ಟದೂರಿನಲ್ಲಿ.''

ಮರುಕ್ಷಣ ಭಾಗರಥಿಯೂ ಹೇಳಿದಳು, ಮತ್ತೊಂದು ಒಗಟಿನ ಮಧ್ಯೆ ತನ್ನ ಗಂಡನ ಹೆಸರನ್ನು ತೂರಿಸಿ – ''ಶ್ರೀಕೃಷ್ಣನನ್ನು ಮದುವೆಯಾದದ್ದು ರುಕ್ಮಿಣಿಯ ಸೌಭಾಗ್ಯ; ಭೀಮರಾಯರ ಹೆಸರು ಹೇಳುವುದು ನನ್ನ ಸೌಭಾಗ್ಯ.''

ಮಂಜಿ, ಗೌರಿ, ದೇವಿ, ಚೌಡಿ – ಎಲ್ಲರೂ ಬೆಪ್ಪಾಗಿ ಕೇಳುತ್ತ ನಿಂತಿದ್ದರು.

''ಅಲ್ರೀ ಅವ್ವ, ಗಂಡನ ಹೆಸರು ಹೇಳ್ತೀನಿಂತ ಅದೇನೇನೋ ಹಿಂದೆ ಮುಂದೆ ಹಚ್ಕೊಂಡು ಬೇರೆ ಹೇಳಿದ್ರಲ್ಲ. ಹಾಗೆಲ್ಲ ಹಚ್ಕೊಂಡು ಗಿಚ್ಕೊಂಡು ಹೇಳಾಕ್ಕೆ ನಂಗೆ ಬರೋದಿಲ್ರೀ...'' ಮಂಜಿ ಹೇಳಿ ನಕ್ಕಳು.

''ನಾನು ಹಚ್ಚಿಕೊಡ್ತೇನೆ... ಹೇಳು'' ತುಂಗೆ ಹೇಳಿದಳು.

''ಹೇಳಿಕೊಡ್ರವ್ವ... ನೋಡೋಣು...''

ತುಂಗೆ ಹೇಳಿಕೊಟ್ಟಳು.

# ಹೊಲಿಗೆಯಂತ್ರದ ಅಮ್ಮಿಯ ಕವಿತೆಗಳು



ರೊಟ್ಟಿ ಪಾಲು ಮಾಡಿದಂತೆ ಬಟ್ಟೆ ಗಡಿ ಕೊರೆದು
ಕತ್ತರಿಸಿದ ಅಮ್ಮಿ ತುಂಡುತುಂಡು ಸೇರಿಸಿ
ಹೊಲಿದು ಒಂದು ಮಾಡುತ್ತಾಳೆ
ಒಂದು ಕೈಯಲ್ಲಿ ಕತ್ತರಿ :
ಮುಖವಾಡ ಒಡೆದು ಬಯಲಾಗಲು
ಮತ್ತೊಂದು ಕೈಯಲ್ಲಿ ಸೂಜಿ :
ಲೋಕದ ಮಾನ ಕಾಪಾಡಲು.

ಕಾಲಿನಿಂದ ಪೆಡಲು ತುಳಿಯುವ ಅಮ್ಮಿ
ಚಕ್ರ ತಿರುಗಿಸಿದಂತೆಲ್ಲಾ ಇತಿಹಾಸ
ಒಂದು ಸುತ್ತು ಉರುಳುತ್ತದೆ.

ಸೂಜಿಮೂಗಿಗೆ ದಾರಪೋಣಿಸುವ ಅಮ್ಮಿ
ಸಂತೆಯಲ್ಲಿ ಕೊಂಡು ತಂದ ನಿರಾಕಾರಮಾನಕ್ಕೆ ಹೊಲಿಗೆಹಾಕಿ
ರೂಪು ನೀಡುತ್ತಾಳೆ ಆಕಾಶದಂತಹ, ಕಡಲಿನಂತಹ ಬಟ್ಟೆಗೆ
ನಮೂನಮೂನೆಯ ಪಾತ್ರ ಕೊಡುವ ಅಮ್ಮಿಯೇ ಸೃಷ್ಟಿಕರ್ತೆ.
ಅಮ್ಮಿಯ ಕಣ್ಣು, ಮೂಗು, ಹಣೆ, ರೋಮಗಳಿಂದ ಇಳಿಯುವ
ಉಪ್ಪುನೀರಿನಿಂದಲೇ ಈ ನಿಗೂಢ ಬದುಕಿನೊಳಗೆ
ನಿರ್ಜೀವ ಬಟ್ಟೆಗೆ ಪ್ರವೇಶ.

ಬಣ್ಣಬಣ್ಣದ ಬಟ್ಟೆ ಹೊಲಿದು ಜಗಕ್ಕೆ
ಉಡಿಸುವ ಅಮ್ಮಿ ಯಾವಾಗಲೂ ಧರಿಸುವುದು ಹಾಲುಬಿಳಿಸೀರೆ.

ಚಿಂದಿಮನಸುಗಳನು ಜೋಡಿಸಲು ಸೂಜಿ ಇದೆ.
ಗೋಲವಿಶ್ವ ದಾರಿಸಾಗಲು ರಾಟೆ ಇದೆ.
ಲೋಕವಿಕಾರಗಳನ್ನು ಕಡಿದುಹಾಕಲೆಂದೇ
ಕೈಯಲ್ಲಿ ಕತ್ತರಿ.

ಹರಿದ ಚಂದ್ರ, ತೂತುಬಿದ್ದ ನಕ್ಷತ್ರ ಯಾರದೋ
ಚಾಟಿ ಏಟಿಗೆ ಗಿರ್ರನೆ ತಿರುಗುವ ಗ್ರಹಬುಗುರಿಗಳು
ದಿಕ್ಕುದೆಸೆಯಿಲ್ಲದೆ ಅಲೆಯುವ ಅಲೆಮಾರಿ
ಉಲ್ಕೆಗಳು, ಧೂಮಕೇತುಗಳು ನಿದ್ದೆಬಾರದೆ ಒದ್ದಾಡುತಿರಲು
ಒಂದು ಹಾಸಿಗೆ ಬೇಕು ಅಮ್ಮಿ ಹೊಲಿದುಕೊಡು.

ಕಟ್ಟಿಕೊಂಡ ಗಂಡನನ್ನು ಹೊಟ್ಟೆಯ ಮಗುವಿನಂತೆ ಸಾಕಿ
ಹೊಲಿಗೆಯಂತ್ರದ ಕೂಡ ಕಾಲುಶತಮಾನ ಕಳೆದ
ನನ್ನ ಅಮ್ಮಿಗೆ
ನಮಾಜ್ ಎಂದರೆ ಜುಮ್ಮಾ
ಈದ್ ಎಂದರೆ ದೂದ್‌ಖುರ್ಮಾ

ರಟ್ಟೆಬೀಳುವ ತನಕ ರಾಟೆ ತಿರುಗಿಸಿ
ಆರು ಮಕ್ಕಳ ಹಸಿವು ನೀಗಿಸುವ ಅಮ್ಮಿಗೆ
ಕರುಳಕುಡಿಗಳೆಂದರೆ ಕನಸುಗಣ್ಣು
ಮರುಭೂಮಿಯಲ್ಲೂ ಸಿಗುವ ಹಸಿರುಮಣ್ಣು.

* * *

ಆರೀಫ್ ರಾಜ
ಅರಕೇರ - ೫೮೪ ೧೧೧, ದೇವದುರ್ಗ ತಾಲ್ಲೂಕು, ರಾಯಚೂರು ಜಿಲ್ಲೆ

''ಶಕುಂತಲೆ ಮೆಚ್ಚಿ ಮದುವೆಯಾದದ್ದು ದುಷ್ಯಂತನನ್ನು, ಮಂಜಿ ಮೆಚ್ಚಿ ಮದುವೆಯಾದದ್ದು ರಾಮನಾಯಕನನ್ನು.''

ತುಂಗೆ ಹೇಳಿಕೊಟ್ಟ ಒಗಟನ್ನು ಗಿಣಿಪಾಠ ಹೇಳಿದಂತೆ ಮಂಜಿ ಹೇಳಿ ಒಪ್ಪಿಸಿದಳು. ಆದರೆ ಗಂಡನ ಹೆಸರು ಹೇಳುವ ವೇಳೆಯಲ್ಲಿ ನಾಚಿಕೆಗಿಂತ ಭಯವೇ ಹೆಚ್ಚಾಗಿತ್ತು ಮಂಜಿಯ ಮನಸ್ಸಿನಲ್ಲಿ. ಆ ಒಂದು ಕ್ಷಣ ಮಂಜಿ ಅರಳಿಯೆಲೆಯಂತೆ ಥರಥರನೆ ನಡುಗಿ ಹೋದಳು. ಅವಳ ಮುಖ ಅಪರಾಧಿನಿಯ ಮುಖದಂತೆ ಕಂಗೆಟ್ಟುಹೋಗಿತ್ತು. ಮರುಕ್ಷಣ ಮಂಜಿ ಊರ ದೇವಸ್ಥಾನವಿದ್ದ ದಿಕ್ಕಿಗೆ ತಿರುಗಿ ಕೈಮುಗಿದು ಕಣ್ಣುಮುಚ್ಚಿ ಒಂದು ಕ್ಷಣ ಧ್ಯಾನಿಸಿದಳು.

ಭತ್ತ ಕುಟ್ಟುವ ಕೆಲಸ ಮುಂದುವರೆಯಿತು. ತುಂಗೆ, ಭಾಗೀರಥಿ ನಗುತ್ತಾ ಮನೆಯೊಳಕ್ಕೆ ಹೊರಟುಹೋದರು. ಮಳೆ ತನ್ನ ಕರ್ತವ್ಯ ಪಾಲನೆಯಲ್ಲಿ ತೊಡಗಿಯೇ ಇತ್ತು.

* * *

ಭಟ್ಟರ ಮನೆಯ ಪಡಸಾಲೆಯ ಮೂಲೆಯಲ್ಲಿ ಸಾಲದ ವಸೂಲಿಯ ಭತ್ತ ಒಂದು ರಾಶಿ ಉಳಿದಿತ್ತು. ಪಣತಕ್ಕೆ ಆ ಭತ್ತವನ್ನು ತುಂಬುವುದು ರಾಮನ ಕೆಲಸ. ಹಗಲೆಲ್ಲ ಬಿಡುವೇ ದೊರೆಯದಿದ್ದುದರಿಂದ ರಾಮ ಆ ರಾತ್ರಿ ಭಟ್ಟರ ಮನೆಯಲ್ಲೇ ನಿಂತು, ಆ ಕೆಲಸ ಮಾಡಬೇಕೆಂದುಕೊಂಡ. ಸಂಜೆಯ ಮುಂದೆ ಸೇರಿದಷ್ಟು ಉಂಡು, ಮಳೆಯ ರಕ್ಷಣೆಗೆಂದು ತಲೆಯ ಮೇಲೆ ಕಂಬಳಿಯನ್ನು ಹೊದ್ದು ಭಟ್ಟರ ಮನೆಗೆ ಬಂದ ರಾಮ. ಭಟ್ಟರ ಮನೆಯಲ್ಲಿ ಎಲ್ಲರ ಊಟ ಮುಗಿದ ಬಳಿಕ ರಾಮನಿಗೂ ಇನ್ನೊಂದು ಸಲ ಊಟವಾಯಿತು.

ಪಡಸಾಲೆಯಲ್ಲಿದ್ದ ರಾಶಿ ಭತ್ತವನ್ನು ಪಣತಕ್ಕೆ ರಾಮನು ತುಂಬುವ ವೇಳೆಗೆ ಒಂದೆರಡು ಘಂಟೆಯ ಹೊತ್ತೇ ಹಿಡಿದಿತ್ತು. ಅದಾದ ಮೇಲೆ ಅವನು ಪಡಸಾಲೆಯಲ್ಲೇ ಮಲಗಲು ಹವಣಿಸಿ, ಗೋಣಿ ಚೀಲಗಳನ್ನು ಹಾಸಿ ಬೆಚ್ಚನೆಯ ಮೆತ್ತೆ ಮಾಡಿಕೊಂಡ. ಹೊರಗಿನ ಕಟ್ಟೆಯ ಮೇಲೆ ಹೋಗಿ ಒಂದೆರಡು ಬೀಡಿಗಳನ್ನು ಸೇದಿ ಮುಗಿಸಿ, ಒಳಗೆ ಬಂದು ಬಾಗಿಲನ್ನು ಭದ್ರಪಡಿಸಿ, ತನ್ನ ಹಾಸಿಗೆಯ ಮೇಲೆ ಉರುಳಿದ. ಬುಡ್ಡಿದೀಪವನ್ನೂ, ಬೆಂಕಿಪೊಟ್ಟಣವನ್ನೂ ಕೈಗೆಟಕುವಂತೆ ಸಮೀಪದಲ್ಲಿಯೇ ಇರಿಸಿಕೊಂಡು ಮಲಗಿದ್ದಲ್ಲಿಂದಲೇ ದೀಪವನ್ನು ನಂದಿಸಿದ ರಾಮ. ಕೆಲವು ಕ್ಷಣಗಳಲ್ಲಿಯೇ ನಿದ್ರಾವಶನಾಗಿದ್ದ.

ಭಟ್ಟರ ಗೊರಕೆಯ ಸದ್ದು ಮನೆಯಲ್ಲೆಲ್ಲ ಆವರಿಸಿತ್ತು; ಜೊತೆಗೆ ಹೊರಗೆ ಮಳೆಯ ಆರ್ಭಟ, ಆಗೊಮ್ಮೆ ಈಗೊಮ್ಮೆ ದೂರದಲ್ಲೆಲ್ಲೋ ನಾಯಿ ಬೊಗಳುವ ಸದ್ದು.

ಸರಿ ರಾತ್ರಿಯ ಒಂದು ಹೊತ್ತಿನಲ್ಲಿ ಹೊಡೆದೆಬ್ಬಿಸಿದಂತೆ ರಾಮನಿಗೆ ಎಚ್ಚರವಾಯಿತು. ಸಮೀಪದಲ್ಲಿಯೇ ಎಲ್ಲಿಯೋ ಆದ ಹುಲಿಯ ಘರ್ಜನೆ ಅವನ ಕಿವಿಗೆ ಬಂದಪ್ಪಳಿಸಿತ್ತು. ರಾಮ ಎದ್ದು ಕುಳಿತು ಕಿವಿ ನಿಮಿರಿಸಿ, ಮತ್ತೊಮ್ಮೆ ಕೇಳಿದ. ಹೌದು ನಿಜವೇ, ಮತ್ತೊಂದು ಬಾರಿ ಹುಲಿಯ ಘರ್ಜನೆ ಕೇಳಿಬಂತು. ಅದೂ ಬಹಳ ಸಮೀಪದಲ್ಲಿಯೇ. ಜೊತೆಗೆ ದನಕರುಗಳ ಚೀರಾಟ ಬೇರೆ.

ಒಡನೆಯೇ ರಾಮ ಹೌಹಾರಿದ. ''ಭಟ್ಟರೇ, ಅವ್ವಾ, ಕೊಟ್ಟಿಗೆಯೊಳಗೆ ಹುಲಿ ನುಗ್ಗಿದೇಂತ ತೋರ್‍ತದೆ... ಏಳ್ರೀ...'' ಎಂದು ಹೇಳುತ್ತ ದಡದಡನೆ ಪಡಸಾಲೆಯ ಬಾಗಿಲು ತೆಗೆದು ಹೊರಗೆ ಕಾಲಿಟ್ಟ.

ಮಳೆಯಲ್ಲಿ ನೆಂದ ಹುಲಿಯೊಂದು ಆಶ್ರಯವನ್ನು ಹುಡುಕುತ್ತ ಊರೊಳಕ್ಕೆ ನುಗ್ಗುಬಂದಿತ್ತು. ಊರಂಚಿನಲ್ಲಿಯೇ ಇದ್ದ ಭಟ್ಟರ ಮನೆಯ ಕೊಟ್ಟಿಗೆಯ ದನಗಳ ವಾಸನೆ ಅದರ ಮೂಗಿಗೆ ಹೊಡೆದು, ಆ ವಾಸನೆಯನ್ನೇ ಅನುಸರಿಸಿ ಹೊರಟುಬಂದಿದ್ದ ಹುಲಿ ಭಟ್ಟರ ಮನೆಯ ಕೊಟ್ಟಿಗೆ ಬಾಗಿಲಿನಲ್ಲೇ ಬಂದುನಿಂತಿತ್ತು. ಅದರ ಕಣ್ಣುಗಳು ಆ ಕಗ್ಗತ್ತಲೆಯಲ್ಲಿಯೂ ಕೆಂಡದಂತೆ ಹೊಳೆಯುತ್ತಿದ್ದುವು. ಬಾಗಿಲ ಬಳಿ ಇಣುಕಿ ನೋಡಿದ ರಾಮ ಹುಲಿಯನ್ನು ಕಂಡ. ಅವನು ಕಟ್ಟೆಯ ಎರಡು ಮೆಟ್ಟಿಲುಗಳನ್ನು ಇಳಿಯುವ ವೇಳೆಗೆ ಹುಲಿ ಕೊಟ್ಟಿಗೆಯ ಕದವನ್ನು ದೂಡಿ, ಬಾಗಿಲ ಬಳಿಯಲ್ಲೇ ಇದ್ದ ಅವನ ಮೆಚ್ಚಿನ ಬಸವನ ಕತ್ತನ್ನೇ ಹಿಡಿದಿತ್ತು.

''ಅಯ್ಯೋ ಬಸವಾ... ನನ್ನ ಬಸವಾ...'' ರಾಮ ಚಿಟ್ಟನೆ ಚೀರಿದ. ಆ ಕ್ಷಣದಲ್ಲಿ ಅವನಿಗೆ ಆವೇಶವೇ ಬಂದಂತಿತ್ತು. ತನ್ನ ಜೀವದ ಮೇಲಿನ ಪರಿವೆ ಅವನಿಗೆ ಇದ್ದಂತಿರಲಿಲ್ಲ. ಬಸವನನ್ನು ಉಳಿಸಿಕೊಳ್ಳಬೇಕೆಂಬುದೊಂದೇ ಅವನ ಯೋಚನೆ. ರಾಮ ತಕ್ಷಣ ಓಡಿ ಬಸವನನ್ನು ಹಿಡಿದೆಳೆದ. ಒಂದು ಕಡೆ ಹುಲಿ ಬಸವನನ್ನು ಎಳೆಯುತ್ತಿದ್ದರೆ ಇನ್ನೊಂದು ಕಡೆ ರಾಮ ಹಿಡಿದೆಳೆಯುತ್ತಿದ್ದ.

ಬಾಯಿಗೆ ಬಂದ ತುತ್ತನ್ನು ಕಳೆದುಕೊಳ್ಳುವ ಪ್ರಸಂಗ ಹುಲಿಗೊದಗಿತ್ತು. ಅನಾಯಾಸವಾಗಿ ತನಗೆ ಸಿಕ್ಕಿದ್ದ ಆಹಾರಕ್ಕೆ ಮುಳ್ಳಾಗಿಬಂದ ರಾಮನ ಮೇಲೆ ಅದರ ರೋಷ ಉಕ್ಕಿತು. ಬಸವನನ್ನು ಬಿಟ್ಟು ರಾಮನನ್ನೇ ಹಿಡಿದು ನೆಲಕ್ಕಪ್ಪಳಿಸಿತು.

ಆ ವೇಳೆಗೆ ಭಟ್ಟರ ಮನೆಯವರೆಲ್ಲ ಎದ್ದು ಲಾಟೀನುಗಳನ್ನು ಹಚ್ಚಿಕೊಂಡು ಹೊರಗೆ ಬಂದರು. ಭಟ್ಟರು ಹಾಕಿದ ಒಂದು ಕೂಗಿಗೇ ನೆರೆಮನೆಯವರೆಲ್ಲ ಎಚ್ಚೆತ್ತು ಹೊರಗೆ ಬಂದು ಸೇರಿದರು. ಜನರ ಗದ್ದಲವನ್ನೂ ದೀಪವನ್ನೂ ಕಂಡೊಡನೆ ಹುಲಿ ರಾಮನನ್ನು ಬಿಟ್ಟು ಓಡಿತು.

ರಾಮನಿಗೆ ಪ್ರಜ್ಞೆ ಇರಲಿಲ್ಲ. ಕೊಟ್ಟಿಗೆಯ ಬಳಿ ನೆಲದ ಮೇಲೆ ಉರುಳಿದ್ದ ಅವನನ್ನು ಎಲ್ಲರೂ ಸೇರಿ ತಂದು ಕಟ್ಟೆಯ ಮೇಲೆ ಮಲಗಿಸಿದರು. ಬಸವನಂತೂ ಹೆದರಿ, ಕಂಗಾಲಾಗಿ, ವಿಕಾರವಾಗಿ ಕೂಗುತ್ತಾ ನಿಂತಿತ್ತು. ಅದರ ಕುತ್ತಿಗೆಯ ಬಳಿ ರಕ್ತ ಧಾರಾಕಾರವಾಗಿ ಸುರಿಯುತ್ತಿತ್ತು.

ರಾಮನ ದೇಹದ ಮೇಲೂ ಸಹ ಅನೇಕ ಕಡೆ ಹುಲಿಯ ಉಗುರುಗಳು ಚೆನ್ನಾಗಿ ನಾಟಿ, ಗುಣಿಗಳು ಬಿದ್ದು ರಕ್ತ ಚಿಮ್ಮುತ್ತಿತ್ತು. ಪಾರ್ವತವ್ವನಂತೂ ಆ ಕ್ಷಣವೇ ಮನೆಯ ಸಂದಿ ಮೂಲೆಗಳನ್ನೆಲ್ಲ ಹುಡುಕಿ, ನಂಜುಹರವಾದ ಬೇರುಗಳನ್ನೆಲ್ಲ ಹೊರಗೆ ತೆಗೆದು, ಸಾಣೆಕಲ್ಲಿನಲ್ಲಿ ತೇಯ್ದು ತಂದಿತ್ತರು. ಅವುಗಳ ಲೇಪನದಿಂದಾಗಿ ರಕ್ತಸ್ರಾವವೇನೋ ನಿಂತಿತು. ಆದರೆ ಎಷ್ಟು ಹೊತ್ತಾದರೂ ರಾಮನಿಗೆ ಪ್ರಜ್ಞೆ ಮರಳಲಿಲ್ಲ; ಅವನು ಬದುಕುವ ಆಸೆಯೇ ದೂರ ಉಳಿದಿತ್ತು.

ಎಂದಿನಂತೆ ಬೆಳಗಾಯಿತು. ಇನ್ನು ಮಂಜಿಗೆ ಹೇಳಿಕಳುಹಿಸಬೇಕು. ಈ ಕೆಟ್ಟ ಸುದ್ದಿಯನ್ನು ದಿನತುಂಬಿದ ಗರ್ಭಿಣಿಗೆ ಹೇಳಿಕಳುಹಿಸುವಾಗ ಭಟ್ಟರ ಕೈಕಾಲು ನಡುಗಿತು, ಧ್ವನಿ ಕುಗ್ಗಿತು.

ಸಮಾಚಾರ ತಿಳಿದ ಮಂಜಿ ಓಡೋಡಿ ಬಂದಳು. ಈ ಆಘಾತವನ್ನು ಎದುರಿಸುವ ಶಕ್ತಿ ಆಕೆಯಲ್ಲಿ ಎಂದೋ ಮಾಯವಾಗಿತ್ತು. ದಿಗ್ಭ್ರಮೆ ಹಿಡಿದುಹೋಗಿದ್ದ ಮಂಜಿಯ ಮುಖದಲ್ಲಿ ಅಳುವೂ ಇಲ್ಲ, ನಗುವೂ ಇಲ್ಲ, ಬದಲಾಗಿ ಯಾವುದೋ ಅನಿಷ್ಟ ಕಳೆ ತಾಂಡವವಾಡುತ್ತಿತ್ತು. ಬಂದಕೂಡಲೇ ಮಂಜಿ ಗಂಡನ ಬಳಿ ಕುಳಿತು ಅವನ ತಲೆಯನ್ನೊಮ್ಮೆ ನೇವರಿಸಿದಳು. ರಾಮ ಒಂದು ಬಾರಿ ಕಣ್ಣುಬಿಟ್ಟು ನೋಡಿದ. ಅವನಿಗೆ ಪ್ರಜ್ಞೆ ಬಂತೆಂಬ ಆಸೆ ಎಲ್ಲರಿಗೂ ಅಂಕುರಿಸುವಷ್ಟರಲ್ಲಿ ಮತ್ತೆ ಕಣ್ಣು ಮುಚ್ಚಿದ ರಾಮ ಪುನಃ ತೆರೆಯಲಿಲ್ಲ. ಮಂಜಿಯನ್ನು ಕಂಡು ತೃಪ್ತಿಗೊಂಡ ಅವನ ಹರಣ ಹಾರಿಹೋಯಿತು.

ಹಿಂದಿನ ದಿನ ಕೊಟ್ಟಣದ ಮನೆಯಲ್ಲಿ ಗಂಡನ ಹೆಸರು ಹೇಳಿದುದೇ ಈ ಅನಾಹುತಕ್ಕೆ ಕಾರಣವೆಂದು ಮಂಜಿಗೆ ಈಗ ದೃಢವಾಗಿತ್ತು. ಅವಳ ಬುದ್ಧಿ ಒಂದು ನಿಮಿಷದಲ್ಲಿ ವಿಕಲ್ಪವಾಗಿ ಹೋಯಿತು. ''ಗಂಡನ ಹೆಸರು ಹೇಳಬ್ಯಾಡ್ದು; ಹೇಳಿದರೆ ಅವರ ಆಯಸ್ಸು ಕ್ಷೀಣ ಆಗತೈತಿ...'' ಎಂದೊಮ್ಮೆ ಹೇಳಿದ ಮಂಜಿ ಥರಥರನೆ ನಡುಗಿ ಕುಸಿದುಬಿದ್ದಳು. ಆಗ ತುಂಗೆ, ಭಾಗೀರಥಿ ಪಶ್ಚಾತ್ತಾಪದಲ್ಲಿ ಬೆಂದೇಹೋದರು.

ಭಟ್ಟರು ಆ ಕ್ಷಣವೇ ಪಕ್ಕದ ಊರಿನ ಸಾಹುಕಾರರಿಗೆ ಹೇಳಿಕಳುಹಿಸಿ ಕಾರನ್ನು ತರಿಸಿದರು. ಮಂಜಿಯನ್ನು ಅದರಲ್ಲಿ ಮಲಗಿಸಿ ಪೇಟೆಯ ಆಸ್ಪತ್ರೆಗೆ ಸಾಗಿಸಲು ಅನುವಾದರು. ಹೊರಡುವಾಗ ನೆರೆದಿದ್ದ ಇತರರಿಗೆ ಮುಂದಿನ ಕೆಲಸ ಮುಗಿಸುವಂತೆ ಹೇಳಿ, ರಾಮನನ್ನೊಮ್ಮೆ ಕಡೆಯ ಬಾರಿ ನೋಡಿ, ಕಣ್ಣೀರು ಸುರಿಸುತ್ತ ಗದ್ಗದ ಕಂಠದಿಂದ – ''ನನ್ನ ಮನೆಯ ಬಸವನಿಗಾಗಿ ನೀನು ಜೀವಕೊಟ್ಟೆ ರಾಮ; ನಿನ್ನ ಮಂಜಿಯನ್ನು ಮಗಳಂತೆ ಸಾಕಿ ನಿನ್ನ ಋಣ ತೀರಿಸುತ್ತೇನೆ ತಮ್ಮಾ...'' ಎಂದು ಹೇಳಿ ಕಾರಿನಲ್ಲಿ ಕುಳಿತು ಹೊರಟುಬಿಟ್ಟರು.

* * *

ರಾಮನ ಪಡಿಯಚ್ಚಿನಂತಿದ್ದ ಗಂಡುಕೂಸಿನೊಡನೆ ಮಂಜಿ ಆಸ್ಪತ್ರೆಯಿಂದ ಮರಳಲು ನಾಲ್ಕಾರು ತಿಂಗಳುಗಳೇ ಹಿಡಿದುವು. ಭಟ್ಟರು ತಮ್ಮ ಮನೆಯ ಒಳಹಿತ್ತಿಲಿನಲ್ಲಿಯೇ ಅವಳಿಗಾಗಿ ಒಂದು ಹುಲ್ಲು ಮನೆಯನ್ನು ಕಟ್ಟಿಸಿಕೊಟ್ಟು, ಅವಳ ಯೋಗಕ್ಷೇಮದ ಹೊರೆಯನ್ನು ತಾವೇ ಹೊತ್ತರು. ಗಂಡನ ನೆನಪು ಮರುಕಳಿಸಿದಾಗ ಮಂಜಿಗೆ ಬುದ್ಧಿಭ್ರಮಣೆಯಾಗುತ್ತಿತ್ತು. ಭಟ್ಟರು, ಪಾರ್ವತವ್ವ ಎಷ್ಟೋ ಬಾರಿ ಮಂಜಿಯನ್ನು ಕಂಡು ಕಣ್ಣೀರು ಸುರಿಸಿದುದೂ ಉಂಟು.

ಬರುಬರುತ್ತ ಮಂಜಿ ಹುಚ್ಚಿಯೇ ಆದಳು. ಆದರೆ ಅವಳಿಂದ ಯಾರಿಗೂ ರವೆಯಷ್ಟೂ ಕೇಡಾಗುತ್ತಿರಲಿಲ್ಲ. ಊರಲ್ಲಿ ಎಲ್ಲಿಯಾದರೂ ಲಗ್ನ ನಡೆಯುವುದೆಂದು ತಿಳಿದರೆ ಸಾಕು, ಮಂಜಿ ಓಡೋಡಿ ಹೋಗಿ ಲಗ್ನವಾಗುವ ಹುಡುಗಿಗೆ ಉಪದೇಶ ನೀಡುತ್ತಿದ್ದಳು – ''ತಂಗಿ, ಏನೇ ಆದ್ರೂ ನೀನು ನಿನ್ನ ಗಂಡನ ಹೆಸರು ಹೇಳಬ್ಯಾಡ; ಹೇಳಿದರೆ ಅವನ ಆಯುಸ್ಸು ಕ್ಷೀಣವಾಗತೈತಿ.''

ಯಾರು ಬೇಡವೆಂದರೂ ಬಿಡದೆ ಮಂಜಿ ಈ ಒಂದು ಕೆಲಸವನ್ನು ತನ್ನ ಕರ್ತವ್ಯವೆಂದೇ ಭಾವಿಸಿ ಮಾಡಿಬರುತ್ತಿದ್ದಳು. ❑

# ಆನು ದೇವಾ ಹೊರಗಣವನು...

## –ಒಂದು ಸಂದರ್ಶನ



**ಪ್ರಶ್ನೆ**: ನೀವು ನಿಮ್ಮ ಕೃತಿಯಲ್ಲಿ ಬಸವಣ್ಣನನ್ನು ಸಂಪೂರ್ಣವಾಗಿ ಮಾದಿಗನೆಂದು ನಿರೂಪಿಸಿದ್ದೀರಾ ಅಥವಾ ಪ್ರಶ್ನೆಯಾಗಿಯೇ ಉಳಿಸಿದ್ದೀರಾ ?

**ಉತ್ತರ** : ಅಧ್ಯಯನದ ನೆಲೆಗಳಲ್ಲಿ ಸಿಕ್ಕಿರುವ ಸಾಂಸ್ಕೃತಿಕ ಆಕರಗಳ ಆಧಾರದಲ್ಲಿ ಕೆಳಜಾತಿ ಮೂಲದವನು ಎನ್ನುವ, ಅದರಲ್ಲೂ ಕೆಳಜಾತಿ ಮೂಲದಲ್ಲಿ ಯಾರವರಾಗಿದ್ದರು ಎನ್ನುವುದನ್ನು ಪರಿಶೀಲನೆ ಮಾಡುತ್ತಾ ಹೋದಾಗ ಆತ ಮಾದಿಗರವನು ಆಗಿರಬಹುದು ಎನ್ನುವ ಸಂಭಾವ್ಯ ಸೂಚಿಸಿದ್ದೇನೆ.

**ಪ್ರಶ್ನೆ**: ಬಸವಣ್ಣನವರ ತತ್ವ ಮುಖ್ಯ, ಜಾತಿ ಮುಖ್ಯವಲ್ಲ ಎನ್ನುವ ವಿಚಾರದಲ್ಲಿ ನಿಮ್ಮ ನಿಲುವೇನು ?

**ಉತ್ತರ** : ಬಸವಣ್ಣ ಜಾತಿ ವ್ಯವಸ್ಥೆಯನ್ನು ವಿರೋಧಿಸಿದ್ದಾನೆ. ಜಾತಿ ವ್ಯವಸ್ಥೆಯನ್ನು ಬದಲಾಯಿಸಬೇಕೆಂದು ಆ ಕಾಲದಲ್ಲಿ ಪ್ರಯತ್ನಪಟ್ಟಿದ್ದಾನೆ. ಆ ರೀತಿ ಪ್ರಯತ್ನ ಮಾಡಿದ ಬಸವಣ್ಣ ಸ್ವತಃ ಯಾವ ರೀತಿಯ ಸಾಮಾಜಿಕ ಹಿನ್ನೆಲೆಯಿಂದ ಮೂಡಿಬಂದಿದ್ದ ಎನ್ನುವುದು ಅಧ್ಯಯನಕಾರರಿಗೆ ಬಹಳ ಮುಖ್ಯವಾಗುತ್ತದೆ. ಇದು ಆಲೋಚನಾ ವಿಷಯವೋ ಭಾವನಾತ್ಮಕ ವಿಷಯವೋ ಆಗಿರದೆ, ಆ ಕಾಲಘಟ್ಟದ ಸಾಮಾಜಿಕ ಸನ್ನಿವೇಶ ಆ ಕೆಳಜಾತಿಗಳಿಗೆ ಏನು ಒತ್ತಡವೊಂದನ್ನು ಹೇರಿತ್ತು, ಹೇಗೆ ವಿರೋಧಿಸಬೇಕು ಎಂಬುದರ ಸೂಚನೆಯಾಗಿದೆ. ಅಂತಹ ಮಾಹಿತಿಯನ್ನು ಪೂರಕವಾಗಿ ನಿರೂಪಿಸಿದ್ದೇನೆ.

**ಪ್ರಶ್ನೆ**: ಬಸವಣ್ಣ 'ಮಾದಿಗ' ಜಾತಿಯವನು ಎನ್ನುವುದಕ್ಕೆ ನೀವು ಸಂಪೂರ್ಣವಾಗಿ ಆಧಾರ ಒದಗಿಸಿಲ್ಲ ಎನ್ನುವ ಮಾತಿದೆ, ಏನಂತೀರಿ ?

**ಉತ್ತರ** : ಬಸವಣ್ಣನ ಜೀವನ ಚರಿತ್ರೆ ಬಗ್ಗೆ, ಆತನ ಅಧ್ಯಯನ, ಆದರ್ಶ ಇತ್ಯಾದಿಗಳೆಲ್ಲವನ್ನು ನಾನು ಗಮನಿಸಿದ್ದೇನೆ. ಬಸವಣ್ಣನವರ ಬಗ್ಗೆ ಸಾವಿರಾರು ಪುಸ್ತಕಗಳು ಬಂದಿವೆ. ಎಲ್ಲಾ ಪುಸ್ತಕಗಳನ್ನು ಗಮನಿಸಿದರೆ ಮಾತ್ರ ಅಧ್ಯಯನ ಅಥವಾ ವಿಶ್ಲೇಷಣೆ ಸಂಪೂರ್ಣವಾಗುತ್ತದೆಯೆಂದೇನೂ ಇಲ್ಲ. ವಿಶ್ಲೇಷಣೆಗೆ ಬೇಕಾಗಿರುವಂತಹ ಸಾಕಷ್ಟು ಮಾಹಿತಿಯನ್ನು ಉಲ್ಲೇಖಗಳನ್ನು ಪರಿಶೀಲಿಸಿ ಅದರ ಆಧಾರದ ಮೇಲೆ ಸಮಗ್ರವಾಗಿ ವಿಶ್ಲೇಷಣೆ ಮಾಡಿದ್ದೇನೆ.

**ಪ್ರಶ್ನೆ**: ಬಸವಣ್ಣನನ್ನು ನಿರ್ದಿಷ್ಟ ಜಾತಿಗೆ ಸೀಮಿತಗೊಳಿಸಿ, ಕೆಲವರು ತಮ್ಮ ಭಾವನಾತ್ಮಕತೆಗೆ ಪೆಟ್ಟುಬಿದ್ದಿದೆ ಎಂಬ ಒಂದು ವಾದವನ್ನು ಮುಂದಿಟ್ಟಿದ್ದಾರೆ. ಬಹುಜನರ ನಂಬಿಕೆಗಳಿಗೆ ನೀವು ಧಕ್ಕೆ ತಂದಿದ್ದೀರಿ ಎನ್ನುವ ಅಭಿಪ್ರಾಯವಿದೆ. ನೀವೇನು ಹೇಳುತ್ತೀರಿ ?

**ಉತ್ತರ**: ಈಗ ಕೆಲವು ಸಲ ಏನಾಗುತ್ತೆ, ಜನರು ಕೆಲವು ವಾದಗಳನ್ನು ಕೆಲವು ನಂಬಿಕೆಗಳನ್ನು ಬೆಳೆಸಿಕೊಂಡು ಬಂದಿರುತ್ತಾರೆ. ಅದಕ್ಕೆ ವಾಸ್ತವಿಕ ತಳಹದಿ ಇರಬೇಕೆಂದೇನೂ ಇಲ್ಲ, ಅವು ಸತ್ಯಾಂಶಗಳು ಆಗಿರಲೇಬೇಕು ಎಂಬುದಿಲ್ಲ. ಸಾಮಾನ್ಯವಾಗಿ ಜನಜನಿತವಾಗಿರುವ ಕೆಲವು ಅಭಿಪ್ರಾಯಗಳು ಆ ರೀತಿಯಾಗಿ ಸಮಾಜದಲ್ಲಿ ಚಾಲ್ತಿಯಾಗಿ ಬಂದಿವೆ. ಆದರೆ ಅವರ ನಂಬಿಕೆಗಳಿಗೆ ಧಕ್ಕೆ ತರಬೇಕು ಎನ್ನುವ ಪ್ರವೃತ್ತಿಯಿಂದ ಮಾಡಿರುವ ಅಧ್ಯಯನವಲ್ಲ ನನ್ನದು. ಬದಲಾಗಿ ಇಲ್ಲಿಯವರೆಗೂ ಬಸವಣ್ಣನನ್ನು ಕುಲಾದಿಪುರುಷನನ್ನಾಗಿ, ಪೌರಾಣಿಕ ಪುರುಷನನ್ನಾಗಿ, ಧಾರ್ಮಿಕ ಪುರುಷನನ್ನಾಗಿ ಬೆಳೆಸಿದ್ದರು. ಕೇವಲ ಅವರ ಧಾರ್ಮಿಕ ವ್ಯಕ್ತಿತ್ವವನ್ನು ಪ್ರತಿಬಿಂಬಿಸಲಾಗಿತ್ತು. ನಾನು ಅದಕ್ಕೆ ಬದಲಾಗಿ ಆತನಿಗಿರುವ ಸಾಮಾಜಿಕ ವ್ಯಕ್ತಿತ್ವವನ್ನು ನಿರೂಪಿಸಿದ್ದೇನೆ. ಪೌರಾಣಿಕ ವ್ಯಕ್ತಿತ್ವದ ಜೊತೆಗೆ ಆತನಿಗೆ ಇರುವ ಸಾಮಾಜಿಕ ಹಿನ್ನೆಲೆಯೇನು ? ಸಾಮಾಜಿಕ ಇತಿಹಾಸವೇನು ? ಸಾಮಾಜಿಕ ಕಾಲಘಟ್ಟದ ಸನ್ನಿವೇಶದ ಚಿತ್ರಣ ಏನು ? ಅದರಿಂದಾಗಿ ಹೊಸ ವಾಸ್ತವದ ಕಡೆಗೆ ಆಲೋಚನಾತ್ಮಕವಾಗಿ ಚಿಂತಿಸಬೇಕು. ಮತ್ತು ಅದರಲ್ಲಿ ಎಲ್ಲಿ ಸತ್ಯ ಕಾಣುತ್ತೆ, ಆ ಹೊಸದನ್ನು ಸ್ವೀಕರಿಸಲು ನಾವು ಸಿದ್ಧರಾಗಬೇಕು. ಈ ರೀತಿಯ ಚಿಂತನೆಯ ನೆಲೆಗಟ್ಟು ನಮ್ಮ ಸಮಾಜಕ್ಕೆ ಇರಬೇಕು ಎಂಬುದನ್ನು ನಾನು ಬಯಸುತ್ತೇನೆ.

**ಪ್ರಶ್ನೆ**: ಈ ವಿವಾದವನ್ನು ಕುರಿತು ನಿಮ್ಮ ಅಭಿಪ್ರಾಯವೇನು ?

**ಉತ್ತರ** : ಮುಖ್ಯವಾಗಿ ನನಗೆ ಅನ್ನಿಸುತ್ತಿರುವುದು ಇದು ಅಗತ್ಯಕ್ಕಿಂತ ಹೆಚ್ಚು ಬೆಳೆಸಲ್ಪಡುತ್ತಿದೆ, ಎಂದು. ಬಸವಣ್ಣನನ್ನು ಯಾವ ರೂಪದಲ್ಲಿ ಸಮಾಜಕ್ಕೆ ತೋರಿಸಬೇಕು ಅಂತ ಕೆಲವರು ತೀರ್ಮಾನ ಮಾಡಿದ್ದಾರೋ ಅಥವಾ ಮೊದಲಿಂದಲೂ ಆ ರೀತಿಯ ನಂಬಿಕೆಗಳನ್ನು ಬೆಳೆಸುವುದಕ್ಕೆ ಪ್ರಯತ್ನ ಮಾಡಿದ್ದಾರೋ ಅವರಿಗೆ ಸ್ವಲ್ಪ ಆಘಾತ ಆಗಿರಬಹುದು. ಅದರಿಂದಾಗಿ ಈ ಪುಸ್ತಕದಲ್ಲಿ ಇಲ್ಲದಿರುವ ಅಂಶಗಳನ್ನು ಜನರಲ್ಲಿ ಬಿತ್ತುವುದು, ಇಲ್ಲದಿರುವ ದುರುದ್ದೇಶಗಳನ್ನು ಆರೋಪಿಸುವುದು, ಇಲ್ಲದಿರುವ ಭಾವನೆಗಳನ್ನು ಕೆದಕುವುದು ಕಂಡುಬಂದಿದೆ. ಅದಕ್ಕೇ ನಾನು ಅಪಶಬ್ದ ಬಳಸಿದ್ದೇನೇನೋ ಎನ್ನುವಂತೆ ಪ್ರತಿಬಿಂಬಿಸಲಿಕ್ಕೆ ಪ್ರಯತ್ನ ನಡೆದಿದೆ. ಜನಸಾಮಾನ್ಯರು ಒಂದು ಅಭಿಪ್ರಾಯವನ್ನು ತಾಳ್ಮೆಯಿಂದ ಪಡೆಯಬೇಕು ಎನ್ನುವುದಕ್ಕೆ ಅವಕಾಶ ಕೊಡದೆ ಪ್ರಚೋದನೆಯನ್ನು ನೀಡುವುದಕ್ಕೆ ಪ್ರಯತ್ನ ನಡೆದಿದೆಯೇ ಎಂಬುದನ್ನು ಪರೀಕ್ಷಿಸಬೇಕು. ನಿಜವಾಗಿ ಎಲ್ಲಾ ಪತ್ರಿಕೆಗಳು, ಮಾಧ್ಯಮಗಳು, ಬಹಳ ಸಂಯಮದಿಂದ ಇದರ ವಾಸ್ತವಾಂಶಗಳು ಏನಿವೆ ಎಂಬುದರ ಬಗ್ಗೆ ಮುಕ್ತವಾಗಿರುವಂತಹ ವಾತಾವರಣವನ್ನು ಸೃಷ್ಟಿಸಿವೆ.

ವಿವಾದ ಮಾಡಬೇಕು ಮತ್ತು ಅದರಿಂದ ಸಂಘರ್ಷ ತಂದಿಡಬೇಕು, ಅದರಿಂದಾಗಿ ಈ ಪುಸ್ತಕದಲ್ಲಿ ಬಂದಿರುವ ವಿಚಾರ ಅಳಿಸಿಹೋಗಬೇಕು ಎನ್ನುವ ಪ್ರಯತ್ನ ಸರಿಯಲ್ಲ. ಇದರ ಸಮಗ್ರ ಚರ್ಚೆ ಆಗಬೇಕು. ಬರಿಯ ಉದ್ವಿಗ್ನತೆಗೆ ಒಳಗಾಗುವುದು ಸರಿಯಲ್ಲ. ಏಕೆಂದರೆ, ಉದ್ವಿಗ್ನತೆಯ ವಾತಾವರಣದಲ್ಲಿ ವಾಸ್ತವಾಂಶಗಳನ್ನು ಗಮನಿಸುವು

ಡಾ|| ಬಂಜಗೆರೆ ಜಯಪ್ರಕಾಶ್ ಅವರ 'ಆನು ದೇವಾ ಹೊರಗಣವನು...' ಕೃತಿಯು ಅಧ್ಯಯನ ಶಿಸ್ತಿಗೆ ಹೊರತಾದ ಕಾರಣಗಳಿಂದಾಗಿ ವಿವಾದಕ್ಕೆ ಸಿಲುಕಿದೆ. ಮೂಲತಃ ಅದನ್ನು ಮಾಪನ ಮಾಡಬೇಕಾದ್ದು ಒಂದು ಸಂಶೋಧನೆಯ ಕೃತಿಯಾಗಿ; ಪ್ರಸಕ್ತ ರಾಜಕೀಯ ಮತ್ತು ಮತಧಾರ್ಮಿಕ ನೆಲೆಯಲ್ಲಿ ಅಲ್ಲ. ತುಮಕೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಅಧ್ಯಾಪಕರಾಗಿರುವ ಡಾ|| ನಾಗಭೂಷಣ ಬಗ್ಗನಡು ಅವರು ಇತ್ತೀಚೆಗೆ ಡಾ|| ಬಂಜಗೆರೆಯವರನ್ನು ಸಂದರ್ಶಿಸಿದ್ದಾರೆ. ಅದರ ಆಯ್ದ ಭಾಗಗಳು ಇಲ್ಲಿವೆ. ಚರ್ಚೆಯ ಮುಂದುವರಿಕೆಗೆ ಇದು ಅನುವಾಗಬಹುದು.

**ಡಾ|| ನಾಗಭೂಷಣ ಬಗ್ಗನಡು**

ದಾಗಲಿ ಅಥವಾ ವಿಚಾರವನ್ನು ಸ್ವೀಕರಿಸುವುದಾಗಲಿ ಸಾಧ್ಯವಾಗುವುದಿಲ್ಲ. ಅಲ್ಲಿ ಪಂಗಡಗಳು ಏರ್ಪಡುತ್ತವೆ. ಇದನ್ನು ಒಪ್ಪುವ ಮತ್ತು ವಿರೋಧಿಸುವ ಎರಡು ಗುಂಪುಗಳ ನಡುವೆ ಸ್ಪರ್ಧೆಯ ವಿಷಯವಾಗುತ್ತದೆ. ಆದ್ದರಿಂದ ವಿವಾದವನ್ನು ಕಡೆಗಣಿಸಿ ಇದನ್ನು ಅಧ್ಯಯನ ಕೃತಿಯನ್ನಾಗಿ ಗಮನಿಸಬೇಕೆಂದು ನಾನು ಬಯಸುತ್ತೇನೆ. ಕರ್ನಾಟಕದ ಬಹಳಷ್ಟು ಜನ ದೊಡ್ಡ ಲೇಖಕರು, ವಿಚಾರವಂತರು, ವಿದ್ವಾಂಸರು, ಸಂಶೋಧಕರು ಎಲ್ಲರೂ ಇದನ್ನು ಗಂಭೀರ ವಾದ ಅಧ್ಯಯನ ಕೃತಿ ಎಂದು ಹೇಳಲು ಹೊರಟಿದ್ದಾರೆ. ಎಲ್ಲಾ ಜನಗಳನ್ನೂ ಒಪ್ಪಿಸಬೇಕೆಂಬುದಿಲ್ಲ. ಇದರಲ್ಲಿರುವ ಎಲ್ಲಾ ವಿವರಗಳನ್ನೂ ಒಪ್ಪಬೇಕಾಗಿಲ್ಲ. ಆದರೆ ಇದರ ಅಧ್ಯಯನ ರೀತಿ, ಅದು ಹೊರಟಿರುವ ಕ್ರಮ, ಎತ್ತಿರುವ ಸಾಂಸ್ಕೃತಿಕ ಪ್ರಶ್ನೆಗಳು ಬಹಳ ಗಂಭೀರವಾಗಿವೆ. ಇದರಿಂದಾಗಿ ನಮ್ಮ ಸಾಂಸ್ಕೃತಿಕ ಲೋಕದ ಪುನರ್ ಮನನ ಹಾಗೂ ಪುನರ್ಓದು ಸಾಧ್ಯವಾಗಿದೆ. ಅಷ್ಟು ಸಾಕು ಒಂದು ಕೃತಿಯ ಸಾರ್ಥಕತೆಗೆ. ಪ್ರಚಾರಕ್ಕೋಸ್ಕರ ಬರೆದಿದ್ದಾಗಿದ್ದರೆ ಏನೋ ಒಂದಿಷ್ಟು ಪ್ರಚೋದನ ರೀತಿಯಲ್ಲಿ ಬರೆದು, ಸಂಘರ್ಷಕ್ಕೆ ಒಳಗಾಗುವ ಹಾಗೆ ಮಾಡಬಹುದಾಗಿತ್ತು! ಅದು ನನ್ನ ಉದ್ದೇಶ ಎಂದೆಂದಿಗೂ ಆಗುವುದಿಲ್ಲ.

ಆ ಪುಸ್ತಕವನ್ನು ಓದಿ ಅದರ ಬಗ್ಗೆ ತಾತ್ವಿಕವಾದ, ವೈಚಾರಿಕವಾದ, ಚರ್ಚೆ ಯಾರು ಮಾಡುತ್ತಾರೋ ಅವರಿಗೆ ನಾನು ಉತ್ತರ ಕೊಡುತ್ತೇನೆ. ಸುಮ್ಮನೆ ಇಲ್ಲದ ಆರೋಪ ವನ್ನು ಮಾಡಿ, ನನ್ನನ್ನು ಹೀನಾಯಗೊಳಿಸಿ, ಹಂಗಿಸಿ, ಆ ಮುಖಾಂತರವಾಗಿ ಸಮಾಧಾನ ಪಡೆಯೋದಾದರೆ ಯಾವಾಗಲೂ ಅವರಿಗೆ ಹಕ್ಕಿದೆ. ಅವರು ಈ ರೀತಿ ಸಮಾಧಾನಪಟ್ಟುಕೊಳ್ಳಲಿ. ಆದರೆ ಸತ್ಯ ಮುಚ್ಚಿಹೋಗಲ್ಲ.

**ಪ್ರಶ್ನೆ**: ರಾಜ್ಯದ ಕೆಲವೆಡೆ ಪ್ರತಿಭಟನೆಗಳು ನಡೆದಿವೆ. ಈ ಕೃತಿಯನ್ನು ಮುಟ್ಟುಗೋಲು ಹಾಕಬೇಕೆಂಬ ಒತ್ತಾಯಗಳು ಬಂದಿವೆ. ಇದರ ಬಗ್ಗೆ ನೀವು ಏನು ಹೇಳುತ್ತೀರಿ ?




**ಉತ್ತರ**: ಸರ್ಕಾರ ಅದಕ್ಕೆ ಸರಿಕಂಡ ರೀತಿಯಲ್ಲಿ ವರ್ತಿಸಲಿ. ನನಗೇನೂ ಅದರ ಬಗ್ಗೆ ಆಕ್ಷೇಪ ಇಲ್ಲ. ಆದರೆ ಕೃತಿಯ ಉದ್ದೇಶವೇನು, ಸತ್ಯ ಏನಿದೆ, ಎನ್ನುವುದರ ಬಗ್ಗೆ ಕರ್ನಾಟಕದ ವಿದ್ಯಾವಂತ ಜನತೆ ಅಥವಾ ವಿದ್ವಾಂಸ ವರ್ಗ ಈಗಾಗಲೇ ಕೊಡಬೇಕಾದ ಮಾನ್ಯತೆ ಮತ್ತು ಮನ್ನಣೆಯನ್ನು ಕೊಟ್ಟಿದ್ದಾರೆ. ನಾನು ಕೇಳುವುದು ಇಷ್ಟೆ: ಇದನ್ನು ಕೇವಲ ಬಲಾಬಲಗಳ ಮೇಲೆ, ಅಥವಾ ಒತ್ತಡಗಳ ಮೇಲೆ, ರಾಜಕೀಯ ತಂತ್ರಗಳ ಆಧಾರದ ಮೇಲೆ ನಿರ್ಧರಿಸಬಾರದು. ಅದನ್ನು ನಿಜವಾಗಿಯೂ ಒಂದು ಕೃತಿಯನ್ನಾಗಿ ಪರಿಶೀಲಿಸಿ ಸರ್ಕಾರದಲ್ಲಿ ಯಾರು ಸಂವೇದನಾಶೀಲರಿದ್ದಾರೋ ಅವರು, ಕರ್ನಾಟಕದ ವಿದ್ವಾಂಸರು, ಇದಕ್ಕ ಸಂಬಂಧಪಟ್ಟ ಕ್ಷೇತ್ರದವರು, ಇತ್ಯಾದಿ ಎಲ್ಲರೂ ಅಧ್ಯಯನಮಾಡಿ ತೀರ್ಮಾನಿಸಲಿ. ನಿಜವಾಗಿ ಸಮಾಜಕ್ಕೆ ಹಾನಿಕಾರಕವಾಗಿರುವ ಕೃತಿಯಾಗಿದ್ದರೆ ಕೃತಿಯನ್ನು ಮುಟ್ಟುಗೋಲು ಹಾಕಿಕೊಳ್ಳಲಿ, ಅದಕ್ಕೆ ನನ್ನ ಅಭ್ಯಂತರವಿಲ್ಲ. ಆದರೆ ಈ ತೀರ್ಪು ಯಾವಾಗಲೂ ನಿಷ್ಪಕ್ಷ ಪಾತದಿಂದ ಕೂಡಿರಬೇಕು. ಅದನ್ನು ನಾನು ಸ್ವಾಗತಿಸುತ್ತೇನೆ.

**ಪ್ರಶ್ನೆ**: ಈ ಕೃತಿಯ ಪರಿಶೀಲನೆಗೆ ಸರ್ಕಾರ ಒಂದು ಸಮಿತಿಯನ್ನು ರಚಿಸಬೇಕೆಂದು ಆಗ್ರಹಿಸಿದ್ದೀರಾ ?

**ಉತ್ತರ**: ಹಿಂದೆ ಒಂದು ಮಾಧ್ಯಮ ಗೋಷ್ಠಿಯಲ್ಲಿ ಇದೇ ರೀತಿ ಚರ್ಚೆ ನಡೆಯಿತು. ಕೆಲವು ಪತ್ರಕರ್ತರು ಪ್ರಶ್ನೆ ಕೇಳಿದ್ದರು : ವಿವಾದಕ್ಕೆ ಯಾವ ರೀತಿ ಅಂತ್ಯವನ್ನು ಸೂಚಿಸಬಹುದು, ಎಂದು. ವಿವಾದ ಎರಡು ರೀತಿಯಲ್ಲಿ ಪರಿಹಾರ ಆಗುತ್ತದೆ. ಒಂದು, ಬಸವಣ್ಣನವರು ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿದವರು ಎನ್ನುವಂತಹ ವಾದ. ಬಸವಣ್ಣ ನವರು ದಲಿತ ಜಾತಿಯಲ್ಲಿ ಹುಟ್ಟಿದವರು, ಅದರಲ್ಲೂ ಮಾದಿಗರ ಸಮುದಾಯದ ಮೂಲದಿಂದ ಬಂದಂತಹ ಮಹಾನ್ ಪ್ರತಿಭೆ ಎಂಬುದು ಇನ್ನೊಂದು ವಾದ. ಅದನ್ನು ಸಮರ್ಥಿಸುವವರು, ಅದನ್ನು ಒಪ್ಪುವಂಥವರು ಕೂಡ ಇರುತ್ತಾರೆ. ಎಲ್ಲರೂ ಕೂಡ ಗ್ರಹಿಸಬೇಕಾದ್ದನ್ನು ಗ್ರಹಿಸಿ ಸಮರ್ಥಿಸುತ್ತಾರೆ. ಸರ್ಕಾರ ಸಮಿತಿ ರಚಿಸಲಿ ಎಂದು ನಾನು ಹೇಳಲಿಲ್ಲ; ಸರ್ಕಾರ ಒಂದು ಅಧ್ಯಯನ ಸಮಿತಿ ರಚಿಸಲಿ ಎಂದಿದ್ದೆ. ಈ ಕ್ಷೇತ್ರಕ್ಕೆ ಸಂಬಂಧಪಟ್ಟಂತಹ ಪರಿಣತರು ಮತ್ತು ಸಂಶೋಧಕರು ಈ ಅಧ್ಯಯನ ಸಮಿತಿಯಲ್ಲಿ ಇರಬೇಕು. ಅದು ಸ್ವತಂತ್ರವಾಗಿರಬೇಕು. ಅದರಲ್ಲಿ ಎಲ್ಲಾ ಜಾತಿ ವರ್ಗಗಳಿಗೂ ಅವಕಾಶ ಇರಲಿ. ವಿದ್ವಾಂಸರೆಲ್ಲರೂ ಒಂದು ನಿಲುವಿಗೆ ಬಂದರೆ ಅದನ್ನು ಒಪ್ಪುವ, ಬಿಡುವ, ಸ್ವಾತಂತ್ರ್ಯ ಯಾವಾಗಲೂ ಸಮಾಜಕ್ಕೆ ಇದ್ದೇ ಇರುತ್ತದೆ. ಅವರು ವಿವಾದವನ್ನು ಪರಿಶೀಲಿಸಿ ನಂತರ ಏನು ತೀರ್ಪು ಕೊಡುತ್ತಾರೋ ನೋಡೋಣ. ಆಗಲೂ ನನ್ನ ಅಪೀಲು ಇದ್ದೇ ಇರುತ್ತೆ. ನನ್ನ ವಾದಮಂಡನೆ ಇದ್ದೇ ಇರುತ್ತೆ.

**ಪ್ರಶ್ನೆ**: ಬಸವಣ್ಣನನ್ನು 'ಮಾದಿಗ'ನೆಂದು ನಿರೂಪಿಸುವು ದರಿಂದ ಆ ಸಮಾಜದಲ್ಲಿ ಏನಾದರೂ ಬದಲಾವಣೆಗಳು ಆಗುತ್ತವೆಯೇ ?

**ಉತ್ತರ**: ಆ ಸಮಾಜ ಒಂದು ಅಸ್ಮಿತೆಯನ್ನು ಗಳಿಸುತ್ತದೆ. ಒಂದು, ನಾನಾರು ಎಂದು ಅರ್ಥಮಾಡಿ ಕೊಳ್ಳುತ್ತಾರೆ. ಇವತ್ತು ಯಾಕಂಗಿದೆ ಅದನ್ನು ಯಂಗೆ ಬದಲಾಯಿಸಬೇಕು, ಅನ್ನೋ ಪ್ರಜ್ಞೆ ಮೂಡುತ್ತದೆ. ಬಸವಣ್ಣ ಮಾದಿಗನೆಂದರೆ, ಅಂತಹ ಕೊಡುಗೆ ನೀಡಿದ ಸಮುದಾಯ ಇವತ್ತು ಹಿಂಗಿದೆ, ಕರ್ನಾಟಕದ ಸಂಸ್ಕೃತಿಗೆ ಇಂತಹ ಕೊಡುಗೆ ಕೊಟ್ಟ ಸಮುದಾಯ ಯಾಕೆ ಇಷ್ಟು ಬೀದಿ ಪಾಲಾಗಿದೆ, ಬಡತನದಲ್ಲಿದೆ, ಅಕ್ಷರ ಗೊತ್ತಿಲ್ಲದೆ ಇದೆ, ಎಂಬ ಪ್ರಶ್ನೆಗಳೆಲ್ಲಾ ಬರುತ್ತವೆ. ಯಾವುದೇ ದಲಿತ ಸಮುದಾಯದ ಹುಡುಕಾಟವೇ ಇದು : ತನ್ನ ಪರಂಪರೆ ಏನು ? ಮೂಲ ಯಾವುದು ? ಮುಂದೆ ನಡೆಯಬೇಕಿರುವ ಹಾದಿ ಏನು ? ಇವನ್ನೆಲ್ಲಾ ತಿಳಿಯುವಂತಾಗುತ್ತದೆ.

ಡಾ॥ ನಾಗಭೂಷಣ ಬಗ್ಗನಡು
ಕನ್ನಡ ಅಧ್ಯಾಪಕರು, ತುಮಕೂರು ವಿಶ್ವವಿದ್ಯಾಲಯ, ತುಮಕೂರು

## ಪರಿ-ಸರವಾದಿಗಳು

ನಗರದಿಂದ ಕಾಡಿಗೆ
ಬಂದರು
ಪೆಪ್ಸಿ ಕೋಲಾ ಬಾಟಲ್‌ಗಳ ಹಿಡಿದು
ಕಾಡು ಉಳಿಸಿ
ನಾಡು ಬೆಳಿಸಿ
ಅಂತ ಉದ್ದುದ್ದ ಭಾಷಣಕಾರರು

ಆ ಪೆಪ್ಸಿ ಕೋಲಾ ಬಾಟಲ್‌ಗಳೇ ಬೇಕೆಂದು
ಹಠಕ್ಕೆ ಬಿದ್ದ ನಮ್ಮ ಮಕ್ಕಳು
ನಗರದ ಹಾದಿ ಹಿಡಿದು
ಬೀದಿ ಪಾಲಾದರು.

ನಾಗತಿಹಳ್ಳಿ ರಮೇಶ
ನಂ. ೫೫೧೦, ೭ನೇ ಮುಖ್ಯರಸ್ತೆ, ವಾಟರ್ ಟ್ಯಾಂಕ್ ರಸ್ತೆ, ಆರ್.ಬಿ.ಐ. ಲೇಔಟ್
ಪುಟ್ಟೇನಹಳ್ಳಿ, ಜೆ.ಪಿ. ನಗರ, ೭ನೇ ಹಂತ, ಬೆಂಗಳೂರು - ೫೬೦ ೦೭೮

## ಪ್ಯಾಲಸ್ತೈನ್ ವಿಭಜನೆಗೆ ಸಂಚು

ಮಧ್ಯಪ್ರಾಚ್ಯದ ಬೆಳವಣಿಗೆಗಳಿಗೂ ಭಯೋತ್ಪಾದನಾ ಕೃತ್ಯಗಳಿಗೂ ನಿಕಟಸಂಬಂಧ ಇದೆ ಎನ್ನುವುದು ತಿಳಿದಿರುವ ವಿಚಾರ. ಬ್ರಿಟನ್ನಿನಲ್ಲಿ ಈಚೆಗೆ ಸಂಭವಿಸಿದ ಕಾರುಬಾಂಬು ಸ್ಫೋಟಗಳಿಗೂ ಇರಾಕ್ ಮತ್ತು ಪ್ಯಾಲಸ್ತೈನ್ ಘಟನೆಗಳಿಗೂ ನೇರವಾಗಿ ಸಂಬಂಧ ಇಲ್ಲದೇ ಇರಬಹುದು. ಆದರೆ ಪರೋಕ್ಷವಾಗಿ ಇದೆ ಎನ್ನುವುದು ನಿಜ. ಏಕೆಂದರೆ, ಅಮೆರಿಕಾದ ನೀತಿಗಳಿಗೆ ಬ್ರಿಟನ್‌ನ ಪೂರ್ಣಬೆಂಬಲ ಯಾವತ್ತೂ ಇರುವುದು. ಏನೇ ಆದರೂ ಮೂಲಭೂತವಾದಿಗಳ ಹಿಂಸಾಕೃತ್ಯ ಖಂಡನೀಯ. ಹಾಗೆಯೇ ಸಾಮ್ರಾಜ್ಯಶಾಹಿಗಳು ಈ ಭೂಭಾಗದಲ್ಲಿ ಅನುಸರಿಸುತ್ತಿರುವ ಒಡಕುಂಟುಮಾಡುವ ನೀತಿಯೂ ಖಂಡನೀಯ. ಇಸ್ಲಾಮಿಕ್ ಮೂಲಭೂತವಾದಿಗಳ ದುಷ್ಕೃತ್ಯಗಳಿಗೆ ಇಡೀ ಇಸ್ಲಾಮಿಕ್ ಸಮುದಾಯವನ್ನು ದೂಷಿಸುವುದು ಸರಿಯಲ್ಲ. ಸಮಸ್ಯೆಯ ಮೂಲವನ್ನು ಅರಿತು ಬಗೆಹರಿಸಿದಾಗ ಮಾತ್ರ ಇದನ್ನು ತಡೆಯಲು ಸಾಧ್ಯ. ಮಧ್ಯಪ್ರಾಚ್ಯದಲ್ಲಿ ಶಾಂತಿ ನೆಲೆಸುವವರೆಗೆ ಇಂಥ ಪ್ರಕರಣಗಳು ತಪ್ಪಿದ್ದಲ್ಲ.




ಪಶ್ಚಿಮ ಏಶಿಯಾ ಪ್ರದೇಶದಲ್ಲಿ ತೈಲಸಂಪತ್ತಿನ ಮೇಲೆ ಯಾಜಮಾನ್ಯ ಸ್ಥಾಪಿಸಿಕೊಳ್ಳಲು ಅಮೆರಿಕಾ ಮತ್ತು ಐರೋಪ್ಯ ದೇಶಗಳು ಅನುಸರಿಸುತ್ತ ಬಂದಿರುವ ನೀತಿಗಳಿಂದಾಗಿ ಇಸ್ಲಾಮ್ ಧರ್ಮಾನುಯಾಯಿಗಳಾದ ಈ ದೇಶಗಳ ಜನರಲ್ಲಿ ತಮ್ಮ ಅಸ್ತಿತ್ವಕ್ಕೇ ಅಪಾಯವಿದೆ ಎನ್ನುವ ಭಾವನೆ ಬೆಳೆದಿದೆ. ಈ ಬಗೆಯ ಭೀತಿಯೇ ಭಯೋತ್ಪಾದನೆಗೆ ಬಹುಮಟ್ಟಿಗೆ ಪ್ರೇರಕ. ಎರಡನೇ ಮಹಾಯುದ್ಧದ ನಂತರ ಈ ಸ್ವತಂತ್ರ ದೇಶಗಳ ಬಗ್ಗೆ ಅಮೆರಿಕಾ ಮತ್ತು ಬ್ರಿಟನ್ ವಿಭಜಿಸಿ ಆಳುವ ನೀತಿಯನ್ನು ಅನುಸರಿಸಿಕೊಂಡುಬಂದಿವೆ. ಮೊದಲನೇ ಹೆಜ್ಜೆಯೇ ಈ ಪ್ರದೇಶದಲ್ಲಿ ಯಹೂದ್ಯರಿಗಾಗಿ ಪ್ರತ್ಯೇಕವಾದ ಇಸ್ರೇಲ್ ರಾಜ್ಯವನ್ನು ಸ್ಥಾಪಿಸಿ, ಪ್ಯಾಲಸ್ತೈನ್ ಅರಬ್ ರಾಜ್ಯನಿರ್ಮಾಣವನ್ನು ಕೈಬಿಟ್ಟದ್ದು. ವಿಶ್ವಸಂಸ್ಥೆಯ ಆದೇಶವನ್ನು ಉಲ್ಲಂಘಿಸಿ ಅರಬ್ ರಾಷ್ಟ್ರಗಳ ವಿರೋಧವಿದ್ದರೂ ಲೆಕ್ಕಿಸದೆ ಇಸ್ರೇಲ್‌ಅನ್ನು ಸ್ಥಾಪಿಸಿದ್ದಲ್ಲದೆ ಅಮೆರಿಕಾ, ಬ್ರಿಟನ್‌ಗಳು ಅದರ ವಿಸ್ತರಣಾವಾದಿ ಧೋರಣೆಗೂ ಬೆಂಬಲ ನೀಡಿದವು. ಇಸ್ರೇಲಿಗೆ ಆಧುನಿಕ ಆಯುಧ ಸಾಮಗ್ರಿಗಳನ್ನು ಒಳಗೊಂಡಂತೆ ಎಲ್ಲ ಬಗೆಯ ನೆರವನ್ನು ನೀಡಿ ದುರಾಕ್ರಮಣಕಾರಿ ಯುದ್ಧಕ್ಕೆ ಪ್ರಚೋದನೆ ನೀಡಲಾಯಿತು. ಅದರ ಪರಿಣಾಮವೇ ಈ ಪ್ರದೇಶದಲ್ಲಿ ಎರಡು ಯುದ್ಧಗಳು, ಸ್ವತಂತ್ರ ಪ್ಯಾಲಸ್ತೈನ್ ರಾಷ್ಟ್ರದ ಸ್ಥಾಪನೆಯ ನಿರಾಕರಣೆ. ಇಸ್ರೇಲನ್ನು ಉಪಯೋಗಿಸಿಕೊಂಡು ಅಮೆರಿಕಾ ಅರಬ್ ರಾಷ್ಟ್ರಗಳ ಐಕ್ಯತೆಯನ್ನು ಮುರಿಯುವುದರಲ್ಲಿ ಯಶಸ್ವಿಯಾಯಿತು. ಇಸ್ರೇಲಿನ ಎಲ್ಲ ಉದ್ಧಟತನಗಳಿಗೂ, ವಿಶ್ವಸಂಸ್ಥೆಯ ಆದೇಶಗಳ ಉಲ್ಲಂಘನೆಗಳಿಗೂ ಅಮೆರಿಕಾದ ಕುಮ್ಮಕ್ಕೇ ಕಾರಣ. ಸುಮಾರು ಅರ್ಧ ಶತಮಾನದ ಅವಿರತ ಹೋರಾಟ ನಡೆಸಿದ ಪ್ಯಾಲಸ್ತೈನ್ ವಿಮೋಚನಾ ಸಂಸ್ಥೆ ದೀರ್ಘಕಾಲ ನಡೆದ ಸಂಧಾನಗಳ ಪರಿಣಾಮವಾಗಿ ಇಸ್ರೇಲಿಗೆ ಮಾನ್ಯತೆ ನೀಡಲು ಸಮ್ಮತಿಸಿತು. ಈ ಹಿನ್ನೆಲೆಯಲ್ಲಿ ಸ್ವತಂತ್ರ ಪ್ಯಾಲಸ್ತೈನ್ ರಾಜ್ಯದ ಸ್ಥಾಪನೆಗೆ ಪೂರ್ವಭಾವಿಯಾಗಿ ವಿಮೋಚನಾ ಸಂಸ್ಥೆಯ ನಾಯಕ ಯಾಸೆರ್ ಅರಾಫತ್ ನೇತೃತ್ವದಲ್ಲಿ ಸ್ವಾಯತ್ತ ಅಧಿಕಾರ ಸ್ಥಾಪನೆಯಾಯಿತು. ಆದರೆ ಎಂದೂ ಇದು ಪೂರ್ಣಾಧಿಕಾರ ಪಡೆಯಲೇ ಇಲ್ಲ. ಇಸ್ರೇಲ್ ಒಪ್ಪಂದದ ಅಂಶಗಳನ್ನು ಮುರಿಯುತ್ತಲೇ ಬಂದಿತು; ಭಯೋತ್ಪಾದನೆಯನ್ನು ವಿರೋಧಿಸುವ ಹೆಸರಿನಲ್ಲಿ.

ಪ್ಯಾಲಸ್ತೈನ್ ವಿಮೋಚನಾ ಸಂಸ್ಥೆಯ ಒಂದು ವಿಭಾಗವಾಗಿದ್ದ ಹಮಾಸ್ ಯಾಸೆರ್ ಅರಾಫತ್ ಇಸ್ರೇಲಿಗೆ ಮಾನ್ಯತೆ ನೀಡಿ ಮಾಡಿಕೊಂಡ ಒಪ್ಪಂದವನ್ನು ವಿರೋಧಿಸಿ ಹೊರ ಬಂದಿತು. ಉಗ್ರವಾದಿಗಳೆಂದು ಹಣೆಪಟ್ಟಿ ಹೊತ್ತ ಈ ಸಂಸ್ಥೆಯ ಬೇಡಿಕೆ ಇಸ್ರೇಲ್ ಎರಡು ಯುದ್ಧಗಳಲ್ಲಿ ಆಕ್ರಮಿಸಿಕೊಂಡ ಎಲ್ಲ ಭೂ ಪ್ರದೇಶವನ್ನು ತೆರವುಗೊಳಿಸಬೇಕೆಂಬುದು. ಇಸ್ರೇಲ್ ಗಾಝಾಪಟ್ಟಿ ಪ್ರದೇಶದಲ್ಲಿ ಹಾಗೂ ಇತರ ಕಡೆ ಪ್ರಾಬಲ್ಯ ಹೊಂದಿದ್ದ ಹಮಾಸ್ ಅನ್ನು ಮುಗಿಸಲು ಆಗಾಗ ದಾಳಿ ನಡೆಸುತ್ತಲೇ ಇತ್ತು. ಯಾಸೆರ್ ಅರಾಫತ್ ಅಧಿಕಾರಾವಧಿಯಲ್ಲೇ ಭಯೋತ್ಪಾದಕರ ವಿರುದ್ಧ ಕ್ರಮದ ಹೆಸರಿನಲ್ಲಿ ಅವರ ಕಚೇರಿಯನ್ನು ಆಕ್ರಮಿಸಿಕೊಂಡು, ಆತನನ್ನು ಒಂದು ರೀತಿಯ ಗೃಹಬಂಧನದಲ್ಲಿರಿಸಿತು. ಇಸ್ರೇಲಿನ ಈ ಎಲ್ಲ ದುಷ್ಕೃತ್ಯಗಳಿಗೂ ಅಮೆರಿಕಾ ಮತ್ತು ಐರೋಪ್ಯ ರಾಷ್ಟ್ರಗಳ ಬೆಂಬಲವಿತ್ತು. ಯಾಸೆರ್ ಅರಾಫತ್‌ರ ನಿಧನಾನಂತರ ಪ್ಯಾಲಸ್ತೈನ್‌ನಲ್ಲಿ ಅಧಿಕಾರಕ್ಕೇರಿದ ಮಹಮದ್ ಅಬ್ಬಾಸ್ ಅಮೆರಿಕಾಗೆ ಬೇಕಾದವನು. ಒಡಕಿಗೆ ಇದೇ ಪ್ರಾರಂಭ. ೨೦೦೬ರಲ್ಲಿ ಪ್ಯಾಲಸ್ತೈನ್‌ನಲ್ಲಿ ಜರುಗಿದ ಚುನಾವಣೆಗಳಲ್ಲಿ ಹಮಾಸ್ ಅಧಿಕ ಮತಗಳನ್ನು ಗಳಿಸಿ ಬಹುಮತ ಪಡೆದು ಅಧಿಕಾರಕ್ಕೆ ಬಂದಿತು. ಈ ಚುನಾವಣೆಗಳು ನಡೆದದ್ದು ಅಮೆರಿಕಾದ ಮಾಜಿ ಅಧ್ಯಕ್ಷ ಜಿಮ್ಮಿ ಕಾರ್ಟರ್ ಮೇಲ್ವಿಚಾರಣೆಯಲ್ಲಿ. ಪ್ರಜಾಪ್ರಭುತ್ವ ರೀತಿಯಲ್ಲಿ ಜರುಗಿದ ಚುನಾವಣೆಯಲ್ಲಿ ಹಮಾಸ್ ಬಹುಮತ ಗಳಿಸಿ ಅಧಿಕಾರಕ್ಕೆ ಬಂದದ್ದು ಇಸ್ರೇಲ್, ಅಮೆರಿಕಾಗಳಿಗೆ ತಲೆನೋವು ತಂದಿತು. ಸರಕಾರವನ್ನು ಉರುಳಿಸಲು ಅವು ತೆಗೆದುಕೊಂಡ ಮೊದಲ ಕ್ರಮ ಒಪ್ಪಂದಕ್ಕನುಸಾರವಾಗಿ ಪ್ಯಾಲಸ್ತೈನ್ ಆಡಳಿತಕ್ಕೆ ನೀಡಬೇಕಾದ ಹಣಕಾಸಿಗೆ ಮುಟ್ಟುಗೋಲು. ಯೂರೋಪಿನ ರಾಷ್ಟ್ರಗಳೂ ಕೂಡ ಇದರಲ್ಲಿ ಶಾಮೀಲಾದುವು. ಖಜಾನೆ ಖಾಲಿಮಾಡಿ ಚುನಾಯಿತ ಸರಕಾರ ಉರುಳಿಸುವ ಪ್ರಯತ್ನದ ಜೊತೆಗೆ ಹಮಾಸ್ ಕಾರ್ಯಕರ್ತರ ಮೇಲೆ ಇಸ್ರೇಲಿ ಸೈನಿಕರ ದಾಳಿ. ಫತಾ ಅಧ್ಯಕ್ಷ ಅಬ್ಬಾಸ್ ಅಮೆರಿಕಾ, ಇಸ್ರೇಲ್‌ಗಳು ಬೀಸಿದ ಬಲೆಯಲ್ಲಿ ಬಿದ್ದು ಹಮಾಸ್ ಮೇಲೆ ಹರಿಹಾಯ್ದದ್ದು. ಪ್ಯಾಲಸ್ತೈನ್‌ನ ಈ ಒಡಕಿನಿಂದ ಪ್ರಯೋಜನವಾದ್ದು ಇಸ್ರೇಲಿಗೆ ಮತ್ತು ಅದರ ಬೆಂಬಲಿಗರಿಗೆ. ಈ ಒಡಕನ್ನು ಸರಿಪಡಿಸಲು ಅರಬ್ ರಾಷ್ಟ್ರಗಳ ಮಧ್ಯಸ್ತಿಕೆಯಿಂದ ಮೆಕ್ಕಾದಲ್ಲಿ ನಡೆದ ಮಾತುಕತೆಗಳ ಪರಿಣಾಮವಾಗಿ ಆದ ಒಪ್ಪಂದದ ಪ್ರಕಾರ ರಾಷ್ಟ್ರೀಯ ಐಕ್ಯತೆಯ ಸರಕಾರದ ಸ್ಥಾಪನೆಗೆ ಹಮಾಸ್ ಸಮ್ಮತಿ ಸೂಚಿಸಿತು. ಫತಾದ ಅಧ್ಯಕ್ಷ ಅಬ್ಬಾಸ್ ಒಪ್ಪಂದವನ್ನು ಜಾರಿಗೆ ತಾರದೆ ಹಮಾಸ್ ಕಾರ್ಯಕರ್ತರ ಮೇಲೆ ದಾಳಿ ನಡೆಸಲಾರಂಭಿಸಿತು. ಈ ಬೆಳವಣಿಗೆಯಿಂದ ಹರ್ಷಿತಗೊಂಡ ಇಸ್ರೇಲ್ ಮತ್ತು ಅಮೆರಿಕಾ ಫತಾ ನಾಯಕ ಅಬ್ಬಾಸ್‌ಗೆ ಮತ್ತಷ್ಟು ಕುಮ್ಮಕ್ಕು ನೀಡಿದವು. ಎರಡೂ ತಂಡಗಳ ನಡುವೆ ಘರ್ಷಣೆಗಳಾಗಿ ಗಾಝಾಪಟ್ಟಿ ಪ್ರದೇಶ ಹಮಾಸ್‌ಗಳ ವಶಕ್ಕೆ ಬಂದಿತು. ಉಳಿದ ವೆಸ್ಟ್ ಬ್ಯಾಂಕ್ ಪ್ರದೇಶ ಫತಾ ಆಡಳಿತಕ್ಕೆ ಒಳಪಟ್ಟಿತು. ಈ ಬೆಳವಣಿಗೆ ಪ್ಯಾಲಸ್ತೈನ್ ಸ್ವಾತಂತ್ರ್ಯ ಚಳವಳಿಯ ಇತಿಹಾಸದಲ್ಲಿ ಒಂದು ದುರಂತವೇ ಸರಿ. ಇದು ಪ್ಯಾಲಸ್ತೈನ್ ರಾಜ್ಯ ಸ್ಥಾಪನೆಯನ್ನು ಇನ್ನಷ್ಟು ಮುಂದೂಡಿದೆ.

ಅಮೆರಿಕಾದ ಅಧ್ಯಕ್ಷ ಜಾರ್ಜ್ ಬುಷ್ ಮತ್ತು ವಿದೇಶಾಂಗ ಕಾರ್ಯದರ್ಶಿ ಕಾಂಡಲೀಸಾ ರೈಸ್ ಹಮಾಸ್‌ಅನ್ನು ತೀವ್ರವಾಗಿ ಖಂಡಿಸಿದ್ದಾರೆ. ಇಸ್ರೇಲ್ ಫತಾ ಸರಕಾರಕ್ಕೆ ಬೆಂಬಲಿಸಲು ವೆಸ್ಟ್‌ಬ್ಯಾಂಕ್ ಮೇಲೆ ವಿಧಿಸಲಾಗಿದ್ದ ನಿರ್ಬಂಧಗಳನ್ನು ತೆಗೆದುಹಾಕಿ, ಪ್ಯಾಲಸ್ತೈನಿಗೆ ನೀಡಬೇಕಾಗಿದ್ದ ತೆರಿಗೆ ಹಣವನ್ನು ಪಾವತಿಮಾಡಲು ನಿರ್ಧರಿಸಿದೆ. ಪಶ್ಚಿಮ ರಾಷ್ಟ್ರಗಳೂ ಫತಾ ಸರಕಾರಕ್ಕೆ ನೆರವು ನೀಡಲು ಮುಂದೆಬಂದಿವೆ. ಹಮಾಸ್ ಆಡಳಿತದಲ್ಲಿರುವ ಗಾಝಾವನ್ನು ಇಕ್ಕಟ್ಟಿಗೆ ಸಿಲುಕಿಸಿ, ಮುಗ್ಗಟ್ಟಿನಿಂದ ನಲುಗಿಸಲು ಎಲ್ಲ ಸನ್ನಾಹ ನಡೆದಿದೆ. ಇಸ್ರೇಲಿ ಪ್ರಧಾನಿ ಎಹೂದ್ ಎಲ್ಮರ್ಟ್ ಈ ಪ್ರದೇಶದಲ್ಲಿ ಮೂರು ರಾಜ್ಯಗಳ ಸ್ಥಾಪನೆಯ ಸೂಚನೆ ನೀಡಿದ್ದಾರೆ. ಪ್ಯಾಲಸ್ತೈನನ್ನು ಇಬ್ಭಾಗ ಮಾಡುವ ಹಂಚಿಕೆ ನಡೆದಿದೆ. ಈ ಎಲ್ಲ ಬೆಳವಣಿಗೆಗಳನ್ನು ಅರಬ್ ರಾಷ್ಟ್ರಗಳು ಮೂಕಪ್ರೇಕ್ಷಕರಂತೆ ನೋಡುತ್ತಿರುವುದು ಶೋಚನೀಯ.

## ವಿದೇಶಾಂಗ ನೀತಿ ನಿರ್ದೇಶಿಸುವ ಪ್ರಯತ್ನ

ಅಮೆರಿಕಾ ಏನು ಮಾಡಿದರೂ ಸರಿ ಅದು ಸ್ವೀಕಾರಾರ್ಹ ಎನ್ನುವ ಮನೋಭಾವ ನಮ್ಮ ಸರಕಾರದ ವರಿಷ್ಠರಲ್ಲಿ, ಕೆಲವು ಮಾಧ್ಯಮಗಳಲ್ಲಿ ಬೇರೂರಿಬಿಟ್ಟಿದೆ. ಹಾಗಾಗಿ ಅಮೆರಿಕಾದ ನಾಯಕರು ದುರಹಂಕಾರದಿಂದ ಏನೇ ಅವಮಾನಮಾಡಿದರೂ ನುಂಗಿಕೊಳ್ಳುವ, ಸಹನೆಯಿಂದ ಸ್ವೀಕರಿಸುವ ಪ್ರವೃತ್ತಿ ಬೆಳೆದಿದೆ. ಕೆಲವರಿಗೆ ಅದು ರೂಢಿಯಾಗಿದ್ದು, ಎಲ್ಲ ಶ್ರೀಮಂತ ರಾಷ್ಟ್ರದ ಆಶೀರ್ವಾದವೆಂದು ಪರಿಗಣಿಸುವುದು ಸುಲಭವಾಗಿದೆ. ಎನ್‌ಡಿಎ ಸರಕಾರದಲ್ಲಿ ರಕ್ಷಣಾಮಂತ್ರಿಯಾಗಿದ್ದ ಜಾರ್ಜ್ ಫರ್ನಾಂಡಿಸ್ ಅಮೆರಿಕಾಗೆ ಭೇಟಿ ನೀಡಿದ್ದಾಗ ವಿಮಾನ ನಿಲ್ದಾಣದಲ್ಲಿ ಶೋಧನೆಗೊಳಪಟ್ಟದ್ದು ಅವರಿಗೆ ಅವಮಾನಕರ ಎನ್ನಿಸಲೇ ಇಲ್ಲ. ಅದೇ ರೀತಿ ಅಧ್ಯಕ್ಷ ಜಾರ್ಜ್ ಬುಷ್‌ರ ಮರುಳುಮಾತಿಗೆ, ಒಡ್ಡಿದ ಆಮಿಷಗಳಿಗೆ ಬಲಿಯಾಗಿ ಯುಪಿಎ ಸರಕಾರದ ಪ್ರಧಾನಿ ಮನಮೋಹನ್ ಸಿಂಗ್ ದೇಶದ ಸ್ವಾತಂತ್ರ್ಯ, ಸಾರ್ವಭೌಮತ್ವಗಳಿಗೇ ಮಾರಕವಾಗಿರುವ ನ್ಯೂಕ್ಲಿಯರ್ ಸಹಕಾರ ಒಪ್ಪಂದಕ್ಕೆ ಸಹಿಹಾಕಲಿದ್ದಾರೆ. ಈಗ ಈ ಒಪ್ಪಂದವನ್ನು ಮೀರಿದಲ್ಲಿ ೧೨೩ ಎನ್ನುವ ಒಪ್ಪಂದಕ್ಕೆ ಅಂಗೀಕಾರ ಪಡೆಯಲು ಬುಷ್ ಸರಕಾರ ಪ್ರಯತ್ನಿಸುತ್ತಿದೆ. ಇಡೀ ದೇಶದ ವೈಜ್ಞಾನಿಕ ಸಮುದಾಯದ, ಜನತೆಯ, ತೀವ್ರ ವಿರೋಧವಿದೆ ಈ ಒಪ್ಪಂದಕ್ಕೆ. ಆದರೂ ಅಮೆರಿಕಾದ ನಾಯಕರು ನ್ಯೂಕ್ಲಿಯರ್ ಕ್ಷೇತ್ರದಲ್ಲಿ ಭಾರತದ ಸ್ವಾತಂತ್ರ್ಯವನ್ನು ತೀವ್ರವಾಗಿ ಮೊಟಕು ಮಾಡುವ ಒಪ್ಪಂದಕ್ಕೆ ಅಂಗೀಕಾರ ಪಡೆಯುವ ಭರವಸೆ ಹೊಂದಿದ್ದಾರೆ. ಈ ವರ್ಷ ಸೆಪ್ಟೆಂಬರ್‌ನಲ್ಲಿ ಅಮೆರಿಕಾಗೆ ಭೇಟಿ ನೀಡಲಿರುವ ಮನಮೋಹನ್ ಸಿಂಗ್ ಇನ್ನೇನು ಅವಾಂತರ ಮಾಡುವರೋ ಕಾದು ನೋಡಬೇಕು.

ಸೀಯಾರ್ಕೆ

ಈ ಮಧ್ಯೆ ಅಮೆರಿಕಾ ಭಾರತವನ್ನು ಪೂರ್ಣವಾಗಿ ಅಧೀನವಾಗಿಸಿಕೊಳ್ಳಲು

## ನೆಲಕ್ಕೆ ಬಿದ್ದ ಹಣ್ಣು



ಆ ಹಣ್ಣ
ನಾಲ್ಕು ಮಂದಿ ಕೂಡಿ
ಕುಯ್ದು ರಸವನ್ನೀರಿ
ವಾಟೆಯು ನೆಲಕ್ಕೆಸೆಯದೆ
ಚಚ್ಚಿ ಚೂರುಚೂರಾಗಿಸಿ
ಮುಗಿಯಿತೆಂದು ಕೇಕೆ ಹಾಕಿ
ನಡೆದರು.

ಚೂರಾದ ಆ ವಾಟೆ
ಮಣ್ಣೊಳು ಕಲೆತ ಗೊಬ್ಬರವಾಗಿ
ಜೀವ ಜೀವದೊಳಗೆ ಇಳಿದು
ಕಾಲವಾಗಿ ಬೆಳೆದಂತೆ
ಜಗದೊಡಲ ಬೇರ
ಹೂಕಾಯಿ
ಅವರ ಕಣ್ಣಲ್ಲೂ ಅರಳುತ್ತಿತ್ತು.

ನಾಗತಿಹಳ್ಳಿ ರಮೇಶ
ನಂ. ೫೫೦, ೨ನೇ ಮುಖ್ಯರಸ್ತೆ, ವಾಟರ್ ಟ್ಯಾಂಕ್ ರಸ್ತೆ, ಆರ್.ಬಿ.ಐ. ಲೇಔಟ್
ಪುಟ್ಟೇನಹಳ್ಳಿ, ಜೆ. ಪಿ. ನಗರ ೭ನೇ ಹಂತ, ಬೆಂಗಳೂರು - ೫೬೦ ೦೭೮

ಎಲ್ಲ ಸನ್ನಾಹವನ್ನು ನಡೆಸುತ್ತಿದೆ. ಭಾರತದ ವಿದೇಶಾಂಗ ನೀತಿಯನ್ನು ಅಮೆರಿಕಾದ ನೀತಿಗೆ ಹೊಂದಿಕೆಯಾಗುವಂತೆ ಮಾಡಿಕೊಳ್ಳಲು ಪ್ರಯತ್ನಿಸುತ್ತಿದೆ. ಅಲಿಪ್ತ ನೀತಿಯ ಬಗ್ಗೆ ತೀವ್ರವಾದ ದಾಳಿಯನ್ನಾರಂಭಿಸಿದೆ. ಅಲಿಪ್ತ ಚಳವಳಿ ಪ್ರಾರಂಭವಾದಾಗಿನಿಂದ ಅಮೆರಿಕಾ ಅದನ್ನು ವಿರೋಧಿಸುತ್ತ ಬಂದಿದೆ. ಅರವತ್ತರ ದಶಕದಲ್ಲೇ ಅಮೆರಿಕಾ ಅಲಿಪ್ತ ನೀತಿಯನ್ನು 'ಅನೀತಿ' ಎಂದು ಮೂದಲಿಸಿತ್ತು. ಶೀತಲ ಯುದ್ಧ ಕಾಲದಲ್ಲಿ ಈ ನೀತಿಯನ್ನು ಸೋವಿಯೆತ್ ಒಕ್ಕೂಟದ ಪರವಾದ್ದು ಎಂದೂ ಸಾರಿತ್ತು. ಅಲಿಪ್ತ ಚಳವಳಿಯಲ್ಲಿ ಒಡಕುಂಟುಮಾಡಲು ಸರ್ವಪ್ರಯತ್ನವನ್ನೂ ಮಾಡಿತ್ತು. ಈಗಲೂ ಮಾಡುತ್ತಿದೆ. ಏಕಶಕ್ತಿ ಕೇಂದ್ರೀಯ ಜಗತ್ತಿನಲ್ಲಿ ಅಲಿಪ್ತ ಚಳವಳಿ ನಿರರ್ಥಕ; ಅಮೆರಿಕಾವನ್ನು ಅನುಸರಿಸುವುದೇ ಇರುವ ಏಕೈಕ ಮಾರ್ಗ ಎನ್ನುವುದು ಅದರ ವಾದ. ಕಳೆದ ವರ್ಷ ಜರುಗಿದ ಅಲಿಪ್ತ ರಾಷ್ಟ್ರಗಳ ಶೃಂಗಸಭೆ ಹಾಗೂ ಅದು ಅಂಗೀಕರಿಸಿದ ತೀರ್ಮಾನಗಳು ಅಮೆರಿಕಾದ ನಾಯಕರ ಕಣ್ಣು ಕೆಂಪಗಾಗಿಸಿತ್ತು. ಚಳವಳಿ ಕ್ರಿಯಾಶೀಲಗೊಳ್ಳುವ ಸಾಧ್ಯತೆಗಳನ್ನು ಹೊಸಕಿಹಾಕಲು ಅದು ನೋಡುತ್ತಿದೆ. ಅದಕ್ಕಾಗಿ ಅದು ಅಲಿಪ್ತ ಚಳವಳಿಯ ವಿರುದ್ಧ ಪ್ರಚಾರವನ್ನು ನಡೆಸುತ್ತಿದೆ. ಈಚೆಗೆ ಅಮೆರಿಕಾದ ವಿದೇಶಾಂಗ ಕಾರ್ಯದರ್ಶಿ ಕಾಂಡಲೀಸಾ ರೈಸ್ ಭಾರತ ಸರಕಾರ ಅಲಿಪ್ತ ಚಳವಳಿಯಿಂದ ಹೊರಬರಬೇಕೆಂದು ಉದ್ಧಟತನದಿಂದ ಹಿತವಚನ ಬೋಧಿಸಿದ್ದಾರೆ. ಅಲಿಪ್ತನೀತಿ ಇಂದಿನ ಸಂದರ್ಭದಲ್ಲಿ ನಿರರ್ಥಕ ಎಂದು ಹೇಳಿದ್ದಾರೆ. ಭಾರತ ೧೨೩ ಒಪ್ಪಂದಕ್ಕೆ ಸಹಿಹಾಕುವ ಬಗ್ಗೆ ವಿಶ್ವಾಸ ವ್ಯಕ್ತಪಡಿಸಿರುವ ರೈಸ್ ಒಮ್ಮೆ ಇದಕ್ಕೆ ಸಹಿಯಾದರೆ ಅಲಿಪ್ತ ಚಳವಳಿಯಲ್ಲಿ ಭಾರತದ ಮುಂದುವರಿಕೆ ನಿರರ್ಥಕ ಎಂದಿದ್ದಾರೆ. ಈಕೆಯ ಉದ್ಧಟತನದ ಹೇಳಿಕೆಗೆ ಮನಮೋಹನ ಸಿಂಗ್ ಸರಕಾರದ ಪ್ರತಿಕ್ರಿಯೆ ಮೃದುವಾಗಿದ್ದುದು ಖಂಡನೀಯ. ನಮ್ಮ ವಿದೇಶೀ ನೀತಿ ಹೇಗಿರಬೇಕು ಎಂದು ಉಪದೇಶಮಾಡಲು ಈಕೆ ಯಾರು ? ಪ್ರಚಲಿತ ಪರಿಸ್ಥಿತಿಯಲ್ಲಿ ಅಲಿಪ್ತ ಚಳವಳಿಯನ್ನು ಸಕ್ರಿಯಗೊಳಿಸಿ, ಬಲಗೊಳಿಸುವುದು ಅಗತ್ಯ. ಅಮೆರಿಕಾದ ದುರಹಂಕಾರದ ವರ್ತನೆಯನ್ನು ಎದುರಿಸಲು ಇರುವ ಮಾರ್ಗ ಇದೊಂದೇ.

ಈ ಮಧ್ಯೆ ಭಾರತಕ್ಕೆ ಅಮೆರಿಕಾದ ನ್ಯೂಕ್ಲಿಯರ್ ಶಕ್ತಿ ಯುದ್ಧನೌಕೆ 'ನಿಮಿಟ್ಜ್' ನೀಡಿದ್ದ ಭೇಟಿ ಒಂದು ಕಪ್ಪು ಚುಕ್ಕೆ. ದಕ್ಷಿಣ ಭಾರತದ ಚೆನ್ನೈನ ತೀರದಲ್ಲಿ ಐದು ದಿನಗಳು ಬೀಡು ಬಿಟ್ಟಿದ್ದ ಈ ಕುಖ್ಯಾತ ನೌಕೆ ಬಾಂಗ್ಲಾ ವಿಮೋಚನೆಯ ಸಮಯದಲ್ಲಿ ಬೆದರಿಕೆ ಹಾಕಲು ಬಂಗಾಳ ಕೊಲ್ಲಿಯ ಆಸುಪಾಸಿನಲ್ಲಿ ಸಂಚರಿಸುತ್ತಿದ್ದುದನ್ನು ಮರೆಯುವಂತಿಲ್ಲ. ನ್ಯೂಕ್ಲಿಯರ್ ಅಸ್ತ್ರಗಳಿಂದ ಸಜ್ಜಿತವಾಗಿರುವ ಈ ನೌಕೆ ಈಗ ಭೇಟಿ ನೀಡಿದ್ದು ಕೂಡ ಶಕ್ತಿ ಪ್ರದರ್ಶನಕ್ಕಾಗಿಯೇ. ಭಾರತ ಸರಕಾರ ಈ ನೌಕೆಯ ಭೇಟಿಗೆ ಅವಕಾಶ ನೀಡಿದ್ದು, ಇದೊಂದು ಸೌಹಾರ್ದ ಭೇಟಿಯೆಂದು ಪರಿಗಣಿಸಿದ್ದು ಖಂಡನೀಯ. ಇದನ್ನು ವಿರೋಧಿಸಿ ಪ್ರತಿಭಟಿಸಿದ್ದು ಎಡಪಕ್ಷಗಳು ಮತ್ತು ಪರಿಸರವಾದಿಗಳು ಮಾತ್ರ. ಮಾಧ್ಯಮಗಳಂತೂ ಪ್ರತಿಭಟನೆಯನ್ನು ಕಡೆಗಣಿಸಿದುವು. 'ನಿಮಿಟ್ಜ್' ಸಂದರ್ಶನಕ್ಕೆ ದೊಡ್ಡ ಪ್ರಚಾರ ನೀಡಿದುವು.

ಅಮೆರಿಕಾದ ಪ್ರತಿಯೊಂದು ಚಲನೆಯೂ ಒಂದು ಉದ್ದೇಶವನ್ನು ಹೊಂದಿರುತ್ತದೆ. 'ನಿಮಿಟ್ಜ್' ಸಂದರ್ಶನ ಮಿಲಿಟರಿ ಕ್ಷೇತ್ರದಲ್ಲಿ ಭಾರತ-ಅಮೆರಿಕಾ ಸಹಕಾರ ವರ್ಧಿಸುತ್ತಿದೆ ಎಂದು ಸಾಬೀತುಗೊಳಿಸಲು. ಇದು ಒಳ್ಳೆಯದಲ್ಲ, ಆತಂಕಕಾರಿ. ರಕ್ಷಣಾಕ್ಷೇತ್ರದಲ್ಲಿ ಅಮೆರಿಕಾದ ಪ್ರವೇಶ ಅಪಾಯಕಾರಿ. ಇದನ್ನು ಅರಿತು ಈಗಲೇ ಅದಕ್ಕೆ ಕಡಿವಾಣ ಹಾಕಬೇಕು. ನಮ್ಮ ದೇಶದ ಸ್ವಾತಂತ್ರ್ಯ, ಸಾರ್ವಭೌಮತ್ವಗಳ ರಕ್ಷಣೆಗೆ ಅಮೆರಿಕಾವನ್ನು ಎಷ್ಟು ದೂರ ಇರಿಸಿದರೆ ಅಷ್ಟು ಕ್ಷೇಮ. ಸಮಾನ ಸಂಬಂಧಗಳಿಗೆ ಮಾತ್ರ ಅವಕಾಶವಿರಬೇಕು. ಸರಕಾರ ಅಂಥ ನೀತಿ ಅನುಸರಿಸುವಂತೆ ಒತ್ತಾಯ ತರುವುದು ಇಂದು ಜರೂರು ಅಗತ್ಯವಾಗಿದೆ.

## ಪಾಕಿಸ್ತಾನದಲ್ಲಿ ಆತಂಕಕಾರಿ ಬೆಳವಣಿಗೆ

**ಪಾ**ಕಿಸ್ತಾನದಲ್ಲಿ ಸಂಭವಿಸುತ್ತಿರುವ ಘಟನೆಗಳು ಗಂಭೀರ ಸ್ವಭಾವದ್ದಾಗಿವೆ. ಚುನಾವಣೆಗಳು ಸನ್ನಿಹಿತವಾಗಿರುವ ಸಮಯದಲ್ಲಿ ಜನರಲ್ ಮುಷರ್ರಫ್ ಆಡಳಿತೆ ಇಕ್ಕಟ್ಟಿನಲ್ಲಿ ಸಿಕ್ಕಿಬಿದ್ದಿದೆ. ಆಗಾಗ್ಗೆ ಮಿಲಿಟರಿ ಸರ್ವಾಧಿಕಾರದ ಅಡಿಯಲ್ಲಿ ಸಿಲುಕಿಕೊಳ್ಳುವ ಪಾಕಿಸ್ತಾನದಲ್ಲಿ ಈ ಬೆಳವಣಿಗೆಗಳು ಸಹಜವಾಗಿ ತೋರಬಹುದು. ಆದರೆ ಈಚೆಗಿನ ಘಟನೆಗಳು ಪಾಕಿಸ್ತಾನದಲ್ಲಿ ಮುಸ್ಲಿಮ್ ಮೂಲಭೂತವಾದಿಗಳ ಕೈ ಮೇಲಾಗುತ್ತಿರುವುದರ ಸೂಚನೆ ಹೆಚ್ಚಾಗಿ ಕಂಡುಬರುತ್ತಿದೆ. ನ್ಯಾಯಾಧೀಶ ಚೌಧುರಿಯವರನ್ನು ಕಿತ್ತುಹಾಕಿದ ಸಂದರ್ಭದಲ್ಲಿ ಬಂದ ಪ್ರತಿಭಟನೆ, ಪಾಕಿಸ್ತಾನದಲ್ಲಿ ಪ್ರಜಾಪ್ರಭುತ್ವ ಚಳವಳಿಗೆ ಕುಮ್ಮಕ್ಕು ನೀಡಿತು. ಈ ಚಳವಳಿಯನ್ನು ವಿರೋಧಿಸಲು ಮುಷರ್ರಫ್ ಆಡಳಿತೆ ಎಂಕ್ಯುಎಂನಂಥ ಸಂಘಟನೆಯನ್ನು ಬಳಸಿಕೊಂಡಿತು. ಇದೊಂದು ಕಡೆಯಾದರೆ ಮೂಲಭೂತವಾದಿಗಳು ತಾಲಿಬಾನ್ ಜೊತೆಗೂಡಿಕೊಂಡು ನಡೆಸಿರುವ ಕಾರ್ಯಾಚರಣೆಗಳು ಇನ್ನೊಂದು ಬಗೆ. ಈ ಮೊದಲು ತನ್ನ ಆಡಳಿತವನ್ನು ಭದ್ರಪಡಿಸಿಕೊಳ್ಳಲು ಬಳಸಿಕೊಂಡ ಶಕ್ತಿಗಳೇ ಇಂದು ಅವರ ವಿರುದ್ಧ ತಿರುಗಿಬಿದ್ದಿವೆ.

ವರ್ಲ್ಡ್ ಟ್ರೇಡ್ ಸೆಂಟರ್ ಮೇಲೆ ಸೆಪ್ಟೆಂಬರ್ ೧೧ರಂದು ನಡೆದ ದಾಳಿಗೆ ಮುನ್ನ ಮುಷರ್ರಫ್ ಆಡಳಿತೆ ಆಫ್ಘಾನಿಸ್ತಾನದ ತಾಲಿಬಾನ್‌ಗಳೊಂದಿಗೆ ಕೈ ಜೋಡಿಸಿತ್ತು. ತಾಲಿಬಾನ್ ಮೂಲಭೂತವಾದಿಗಳನ್ನು ಬೆಂಬಲಿಸಿತ್ತು. ಅಮೆರಿಕಾದ ಒತ್ತಡಗಳಿಗೆ, ಬೆದರಿಕೆಗಳಿಗೆ ಮಣಿದು ಪಾಕಿಸ್ತಾನ ಆಫ್ಘಾನಿಸ್ತಾನದ ಮೇಲೆ ದುರಾಕ್ರಮಣಕ್ಕೆ ಬೆಂಬಲ ನೀಡಿತು. ತಾಲಿಬಾನ್‌ಗಳನ್ನು ವಿರೋಧಿಸಿತು. ಆದರೆ ಈಚೆಗೆ ಆಫ್ಘಾನಿಸ್ತಾನದಲ್ಲಿ ತಾಲಿಬಾನ್‌ಗಳ ಪ್ರಾಬಲ್ಯ ಹೆಚ್ಚಾಗಿದೆ. ಕಾಬೂಲಿನ ಹೊರಗೆ ಅಮೆರಿಕಾದ ಕೈಗೊಂಬೆ ಸರಕಾರ ಅಧಿಕಾರ ಚಲಾಯಿಸಲಾಗುತ್ತಿಲ್ಲ. ಅಮೆರಿಕಾದ ಸೇನೆಯ ಕೃಪೆಯಿಂದ ಆಫ್ಘಾನಿಸ್ತಾನದ ಕರ್ಜೈ ಸರಕಾರ ಜೀವಂತವಾಗಿದೆ. ಇದೇ ಸ್ಥಿತಿ ಪಾಕಿಸ್ತಾನದಲ್ಲಿ ಮುಷರ್ರಫ್ ಸರಕಾರಕ್ಕೂ ಬಂದೀತು. ಹಾಗಾದಲ್ಲಿ ಭಾರತದ ಮಟ್ಟಿಗೆ ಅದು ಆತಂಕಕಾರಿ ಬೆಳವಣಿಗೆಯೇ ಸರಿ. ತಾಲಿಬಾನ್ ನಿಗ್ರಹಿಸಲು ಅಮೆರಿಕಾಗೆ ಮುಷರ್ರಫ್ ಸರಕಾರದ ಬೆಂಬಲ ಅತ್ಯಗತ್ಯವಾಗಿದೆ. ಅದೇ ಸಮಯದಲ್ಲಿ ಪಾಕಿಸ್ತಾನದಲ್ಲಿ ಮೂಲಭೂತವಾದಿಗಳ ಪ್ರಾಬಲ್ಯ ಅಧಿಕಗೊಂಡಿದ್ದು ತಾಲಿಬಾನ್‌ಗಳೊಂದಿಗೆ ಶಾಮೀಲಾಗಿರುವುದು ಕಂಡುಬಂದಿದೆ. ಇತ್ತೀಚಿನ ಇಸ್ಲಾಮಾಬಾದ್ ಮಸೀದಿ ಪ್ರಕರಣ ಹಾಗೂ ಸಂಭವಿಸಿದ ಸಾವುನೋವುಗಳು ಅಪಾಯದ ಮೊದಲ ಸೂಚನೆಯಾಗಿವೆ. ಭಾರತ ಈ ಬೆಳವಣಿಗೆಗಳನ್ನು ಎಚ್ಚರದಿಂದ ಗಮನಿಸಬೇಕಾಗಿದೆ.

ಆಫ್ಘಾನಿಸ್ತಾನದ ಮೇಲೆ ದಾಳಿಯನ್ನು ನಡೆಸುವ ಸಂದರ್ಭದಲ್ಲಿ ಅಮೆರಿಕಾ ಪಾಕಿಸ್ತಾನದ ಮೇಲೆ ಧಮಕಿ ಹಾಕಿತ್ತು ಎಂದು ಮುಷರ್ರಫ್ ತಮ್ಮ ಆತ್ಮಚರಿತ್ರೆಯಲ್ಲೇ ಒಪ್ಪಿಕೊಂಡಿದ್ದಾರೆ. ಈಗ ಕೈಮೀರಿದರೆ ಪಾಕಿಸ್ತಾನದಲ್ಲಿ ಮಧ್ಯ ಪ್ರವೇಶ ಮಾಡಲು ಅಮೆರಿಕಾ ಹಿಂಜರಿಯುವುದಿಲ್ಲ. ಇದು ಪಾಕಿಸ್ತಾನದ ಆಡಳಿತಕ್ಕೂ ಮನದಟ್ಟಾಗಿದೆ. ಈ ಬಿಕ್ಕಟ್ಟಿನಿಂದ ಹೇಗೆ ಪಾರಾಗುವುದು ಎನ್ನುವುದೇ ಮುಖ್ಯ ಪ್ರಶ್ನೆಯಾಗಿದೆ ಪಾಕಿಸ್ತಾನಿ ಆಡಳಿತಕ್ಕೆ. ಭಾರತಕ್ಕೂ ಇದು ಸಂದಿಗ್ಧ ಪರಿಸ್ಥಿತಿ.

ಸೀಯಾರ್ಕೆ
'ಚೌಬೀನ', ೮೪೯, ೬ನೇ ಕ್ರಾಸ್, ೧ನೇ ಮೇನ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್,
ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

# ಬಾಲ ಕಾರ್ಮಿಕ ಪದ್ಧತಿ ನಿಷೇಧ

**ಬಾ**ಲ ಕಾರ್ಮಿಕ ಪದ್ಧತಿ ನಿಷೇಧ ಮತ್ತು ನಿಯಂತ್ರಣ ಕಾಯಿದೆ - ೧೯೮೬ ದೇಶದಲ್ಲಿ ಜಾರಿಯಾದಾಗ ಶೆಡ್ಯೂಲ್ 'ಎ'ನಲ್ಲಿ ೭ ಕ್ಷೇತ್ರಗಳನ್ನು ಹಾಗೂ ಶೆಡ್ಯೂಲ್ 'ಬಿ'ಯಲ್ಲಿ ೧೮ ಕ್ಷೇತ್ರಗಳನ್ನು (ಕಾರ್ಪೆಟ್, ಸಿಮೆಂಟ್ ತಯಾರಿಕೆ, ಪಟಾಕಿ ಮತ್ತು ಇತರೆ) ಅಪಾಯಕಾರಿ ಎಂದು ಪರಿಗಣಿಸಲಾಗಿತ್ತು. ಈ ಕ್ಷೇತ್ರಗಳಲ್ಲಿ ಮಕ್ಕಳ ದುಡಿಮೆಯನ್ನು ನಿಷೇಧಿಸಿ ಉಳಿದ ಕ್ಷೇತ್ರಗಳಲ್ಲಿ ನಿಯಂತ್ರಣ ಕಾಯಿದೆಯನ್ನು ತರಲಾಗಿತ್ತು. ಇದೊಂದು ಅಡ್ಡಗೋಡೆಯ ಮೇಲಿನ ದೀಪದ ಮಾದರಿಯ ಕಾಯಿದೆಯಾಗಿದ್ದು ಮಕ್ಕಳ ಹಕ್ಕುಗಳನ್ನು ರಕ್ಷಣೆ ಮಾಡುವ ಯಾವ ಲಕ್ಷಣಗಳೂ ಕಾಣಬರಲಿಲ್ಲ. ಮಕ್ಕಳು 'ಮತಬ್ಯಾಂಕ್' ಅಲ್ಲವೆಂದು ಭಾವಿಸಿದ ರಾಜಕಾರಣಿಗಳು ಮಕ್ಕಳನ್ನು ನಿರ್ಲಕ್ಷ್ಯ ಮಾಡಿದರೆ, ಅಧಿಕಾರಿಗಳು ದುಡಿವ ಮಕ್ಕಳ ಹಕ್ಕುಗಳ ರಕ್ಷಣೆಯಲ್ಲಿ ದಿವ್ಯ ಅಸಡ್ಡೆಯನ್ನೇ ತಾಳಿದ್ದರು. ಮಾಲಿಕರು ಯಾವುದೇ ಭಯವಿಲ್ಲದೆ ಮಕ್ಕಳನ್ನು ಗುಲಾಮರಂತೆ ದುಡಿಸಿಕೊಳ್ಳುವ ಪ್ರವೃತ್ತಿ ನಿರಂತರವಾಗಿ ಸಾಗುತ್ತಿತ್ತು. ಮತ್ತೊಂದೆಡೆ ಪೋಷಕರು ಮುಗ್ಧತೆ-ಅನಿವಾರ್ಯತೆಗಳಿಗೆ ಸಿಕ್ಕಿಕೊಂಡು ಮಕ್ಕಳನ್ನು ಕೆಲಸಕ್ಕೆ ದೂಡುತ್ತಿದ್ದರು. ಬಡತನ, ಹಸಿವು, ಪೋಷಕರ ನಿರುದ್ಯೋಗ ಇನ್ನಿತರೇ ಕಾರಣಗಳಿಗಾಗಿ ಮಕ್ಕಳು ದುಡಿಯುತ್ತಿದ್ದಾರೆ ಅನ್ನುವ ಅನುಕಂಪದ ನಿಲುವು ಸಮಾಜದ ಬಹುತೇಕ ಜನರು ಹಾಗೂ ಸಂಘ-ಸಂಸ್ಥೆಗಳು ತಾಳಿದ್ದವು.

**ಎಚ್ಚೆತ್ತ ಸಂಘಟನೆಗಳು**

೮೦ರ ದಶಕದವರೆಗೆ ಇದೇ ಪರಿಸ್ಥಿತಿ ದೇಶದೆಲ್ಲೆಡೆ ಮುಂದುವರೆಯಿತು. ಆದರೆ ೮೦ರ ಪ್ರಾರಂಭದಲ್ಲಿ ಮಕ್ಕಳ ಹಕ್ಕುಗಳ ಪ್ರತಿಪಾದನೆಯನ್ನು ಪ್ರಶ್ನಿಸುತ್ತ ಬೀದಿಗಿಳಿದ ಪ್ರಗತಿಪರ ಪಕ್ಷಗಳು ಮತ್ತು ಸ್ವಯಂ ಸೇವಾ ಸಂಘಟನೆಗಳು, ೧೯೮೬ ನಿಷೇಧ ಮತ್ತು ನಿಯಂತ್ರಣ ಕಾಯಿದೆ ದ್ವಂದ್ವ ನೀತಿಯ ಅಂಶಗಳಿಂದ ಕೂಡಿದೆ, ಮಕ್ಕಳ ದೃಷ್ಟಿಯಿಂದ ದುಡಿಮೆಯಲ್ಲಿ ನಿಯಂತ್ರಣ ಅನ್ನುವುದು ಅನರ್ಥ; ಶಾಲೆಯಿಂದ ಹೊರಗುಳಿದಿರುವ ಎಲ್ಲ ಮಕ್ಕಳು ಬಾಲ ಕಾರ್ಮಿಕರು, ಮಕ್ಕಳು ದುಡಿಯುವ ಎಲ್ಲ ಕ್ಷೇತ್ರಗಳನ್ನು ಅಪಾಯಕಾರಿ ಎಂದು ಘೋಷಿಸಬೇಕು; ತಪ್ಪಿತಸ್ಥರ ವಿರುದ್ಧ ಕಾನೂನು ಕ್ರಮ ಕೈಗೊಳ್ಳಬೇಕು; ದುಡಿಮೆಯಿಂದ ಮುಕ್ತವಾದ ಮಕ್ಕಳ ಶೈಕ್ಷಣಿಕ ಪರಿಹಾರ ಕಾರ್ಯಕ್ರಮ ಹಾಗೂ ಪೋಷಕರಿಗೆ ಉದ್ಯೋಗದ ಭದ್ರತೆ ಒದಗಿಸಬೇಕು ಎಂದು ದೇಶವ್ಯಾಪಿ ಜನಜಾಗೃತಿ ಉಂಟುಮಾಡಿದವು. ಸರ್ಕಾರದ ಮೇಲೆ ಒತ್ತಡ ತರಲಾಯಿತು. ಅಂತರರಾಷ್ಟ್ರೀಯ ಮಟ್ಟದಲ್ಲಿ ಚರ್ಚೆ ನಿರಂತರವಾಗಿ ನಡೆಯಿತು. ಅಲ್ಲದೆ ನ್ಯಾಯಾಲಯಗಳಲ್ಲಿ ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆಗಳು ಕೂಡ ದಾಖಲಾದವು. ಈ ಎಲ್ಲ ಹಿನ್ನೆಲೆಯಲ್ಲಿ ಕಳೆದ ೧೫ ವರ್ಷಗಳ ಅವಧಿಯಲ್ಲಿ ಹಲವಾರು ನೀತಿಗಳು, ನ್ಯಾಯಾಲಯದ ತೀರ್ಪುಗಳು, ರಾಜ್ಯ-ಕೇಂದ್ರ ಸರ್ಕಾರದ ಯೋಜನೆಗಳು ಜಾರಿಗೆಬಂದವು.

**ಪ್ರಮುಖ ಬದಲಾವಣೆಗಳು**

೧. ೧೯೯೨ರಲ್ಲಿ ಭಾರತವು ಅಂತರರಾಷ್ಟ್ರೀಯ ಮಕ್ಕಳ ಹಕ್ಕುಗಳ ಒಡಂಬಡಿಕೆಗೆ ಸಹಿ ಹಾಕಿ ಮಕ್ಕಳ ಹಕ್ಕುಗಳ ರಕ್ಷಣೆಗೆ ತಾನು ಬದ್ಧ ಹಾಗೂ ೧೪ ವರ್ಷದೊಳಗಿನ ಎಲ್ಲ ಮಕ್ಕಳಿಗೆ ಶಿಕ್ಷಣ ಒದಗಿಸುತ್ತೇನೆ ಎಂದು ಘೋಷಿಸಿತು.

೨. ಡಿಸೆಂಬರ್ ೧೦, ೧೯೯೬ರಲ್ಲಿ ಸುಪ್ರೀಂ ಕೋರ್ಟ್ ಮೊಟ್ಟಮೊದಲ ಬಾರಿಗೆ ಅಪಾಯಕಾರಿ ಕ್ಷೇತ್ರದಲ್ಲಿ ಮಕ್ಕಳನ್ನು ದುಡಿಸಿಕೊಳ್ಳುವುದು ಅಪರಾಧ; ಒಂದು ವೇಳೆ ದುಡಿಸಿಕೊಂಡಲ್ಲಿ ಮಾಲಿಕರಿಗೆ ಜೈಲು ಶಿಕ್ಷೆ ಹಾಗೂ ೨೦ ಸಾವಿರ ರೂಪಾಯಿಗಳ ದಂಡ ವಿಧಿಸಲಾಗುವುದು ಎಂದು ಐತಿಹಾಸಿಕ ತೀರ್ಪನ್ನು ನೀಡಿತು. ಮುಂದುವರೆದು, ರಾಷ್ಟ್ರದ ಎಲ್ಲ ರಾಜ್ಯಗಳಲ್ಲಿ ಬಾಲ ಕಾರ್ಮಿಕರ ಸರ್ವೆ ಕಾರ್ಯಗಳನ್ನು ಆಯಾ ರಾಜ್ಯಗಳು ಕೈಗೊಂಡು ಆದೇಶ ನೀಡಿದ ಆರು ತಿಂಗಳ ಒಳಗೆ ನ್ಯಾಯಾಲಯಕ್ಕೆ ಸಲ್ಲಿಸಬೇಕು; ಬಾಲ ಕಾರ್ಮಿಕತೆಯಿಂದ ಬಿಡುಗಡೆ ಆದ ಮಕ್ಕಳಿಗಾಗಿ ವಿಶೇಷವಾದ ಪರ್ಯಾಯ ಶಾಲೆಗಳನ್ನು ತೆರೆಯಬೇಕು, ಪೋಷಕರಿಗೆ ಆರ್ಥಿಕವಾಗಿ ಸ್ವಾವಲಂಬಿಗಳಾಗಲು ಉದ್ಯೋಗ ಭರವಸೆ ನೀಡಬೇಕು ಎಂಬಿತ್ಯಾದಿ ಅಂಶಗಳುಳ್ಳ ಮಹತ್ತರವಾದ ತೀರ್ಪು ನೀಡಿತು. ಈ ತೀರ್ಪು ತಮಿಳುನಾಡಿನ ಶಿವಕಾಶಿಯ ಬೆಂಕಿಪೊಟ್ಟಣ ಮತ್ತು ಪಟಾಕಿ ತಯಾರು ಮಾಡುವ ಫ್ಯಾಕ್ಟರಿಗಳಲ್ಲಿ ದುಡಿಯುತ್ತಿದ್ದ ನೂರಾರು ಮಕ್ಕಳು ಜೀವಂತವಾಗಿ ಬೆಂದುಹೋದ ಹಾಗೂ ಹರಿವ ಹೊಳೆಯೊಂದರಲ್ಲಿ ಫ್ಯಾಕ್ಟರಿ ಬಸ್ಸೊಂದು ಬಿದ್ದು ನೀರು ಪಾಲಾದ ನತದೃಷ್ಟ ಮಕ್ಕಳ ಪರವಾಗಿ ೧೯೮೬ರಲ್ಲಿ ಸುಪ್ರೀಂ ಕೋರ್ಟಿನಲ್ಲಿ ಎಂ.ಸಿ. ಮೆಹತ ಅನ್ನುವವರು ಸಲ್ಲಿಸಲಾಗಿದ್ದ ಮನವಿಯ ಆಧಾರಿತ ತೀರ್ಪು ಎಂಬುದನ್ನು ನಾವು ಗಮನಿಸಬೇಕಾಗಿದೆ.

೩. ಜೂನ್ ೩೦, ೧೯೯೭ರಲ್ಲಿ ರಾಜ್ಯದ ಉಚ್ಚತಮ ನ್ಯಾಯಾಲಯ (ಮಾಗಡಿಯಲ್ಲಿ

ಆರ್. ವಿಶ್ವಸಾಗರ್



ಸಾವಿರಾರು ಮಕ್ಕಳು ರೇಷ್ಮೆ ಹುರಿ ಯಂತ್ರಗಳಲ್ಲಿ ಕೆಲಸ ಮಾಡುತ್ತಿದ್ದುದನ್ನು ಪ್ರಶ್ನಿಸಿ ಹೂಡಲಾಗಿದ್ದ ಸಾರ್ವಜನಿಕ ಹಿತಾಸಕ್ತಿ ದೂರು ಅನ್ವಯ) ಮೊದಲ ಬಾರಿಗೆ ತೀರ್ಪು ನೀಡಿತು. ಆ ತೀರ್ಪಿನ ಅನ್ವಯ ರಾಜ್ಯದಲ್ಲಿ ೧೧ ವರ್ಷ ಒಳಗಿನ ಯಾವುದೇ ಮಗುವನ್ನು ಯಾವುದೇ ಕ್ಷೇತ್ರದಲ್ಲಿ ದುಡಿಸಿಕೊಳ್ಳುವುದು ಅಪರಾಧವೆನಿಸಿದೆ.

೪. ಅಂತರರಾಷ್ಟ್ರೀಯ ಮಟ್ಟದಲ್ಲಿ ಕೆಲವು ದೇಶಗಳು ಭಾರತದಲ್ಲಿ ಬಾಲ ಕಾರ್ಮಿಕರಿಂದ ಉತ್ಪಾದಿಸಲ್ಪಟ್ಟ ವಸ್ತುಗಳ ಆಮದನ್ನು ನಿಷೇಧಿಸುವುದಾಗಿ ಬೆದರಿಸಿದವು.

೫. ಈ ಹಿನ್ನಲೆಯಲ್ಲಿ ರಾಷ್ಟ್ರೀಯ ಬಾಲ ಕಾರ್ಮಿಕ ಯೋಜನೆ ಸಂಘ ಕೇಂದ್ರ ಸರ್ಕಾರದ ಆದೇಶದ ಮೇರೆಗೆ ಸ್ಥಾಪಿತಗೊಂಡು ರಾಷ್ಟ್ರಾದ್ಯಂತ, ನೂರಾರು ಜಿಲ್ಲೆಗಳಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಬಾಲ ಕಾರ್ಮಿಕರನ್ನು ವಿಮುಕ್ತಿಗೊಳಿಸುವ ಹಾಗೂ ಬಾಲ ಕಾರ್ಮಿಕರನ್ನು ಶಿಕ್ಷಣದ ಮುಖ್ಯವಾಹಿನಿಗೆ ತರುವ ಹಿನ್ನಲೆಯಲ್ಲಿ ಬಾಲ ಕಾರ್ಮಿಕರ ವಿಶೇಷ ಶಾಲೆಗಳು ಪ್ರಾರಂಭವಾದವು.

೬. ರಾಜ್ಯ ಸರ್ಕಾರ ಕೂಡ ೨೦೦೧ನೇ ಸಾಲಿನಲ್ಲಿ ರಾಜ್ಯ ಮಕ್ಕಳ ಕ್ರಿಯಾ ಯೋಜನೆ ರೂಪಿಸಿ ಶಾಲೆಯಿಂದ ಹೊರಗುಳಿದ ಎಲ್ಲಾ ಮಕ್ಕಳನ್ನು ಶಿಕ್ಷಣದ ಮುಖ್ಯವಾಹಿನಿಗೆ ತರುವ ಮಹತ್ತರವಾದ ಯೋಜನೆ ರೂಪಿಸಿತು.

೭. ಸರ್ವ ಶಿಕ್ಷಣದಂತಹ ಮಹತ್ತರವಾದ ಯೋಜನೆಗಳು ಜಾರಿಯಾದವು. 'ಬಾ ಬಾಲೆ ಶಾಲೆಗೆ', 'ಬಾ ಮರಳಿ ಶಾಲೆಗೆ', 'ಕೂಲಿಯಿಂದ ಶಾಲೆಗೆ', 'ಕಲಿ ನಲಿ' ಮುಂತಾದ ಹತ್ತಾರು ಕಾರ್ಯಕ್ರಮಗಳು, ಸಮುದಾಯದ ಭಾಗವಹಿಸುವಿಕೆಯನ್ನು ಖಾತರಿಪಡಿಸಲು ಎಸ್.ಡಿ.ಎಂ.ಸಿ.ಗಳು ಚಾಲ್ತಿಗೆ ಬಂದವು.



೮. ೨೦೦೨ರಲ್ಲಿ ಕೇಂದ್ರ ಸರ್ಕಾರವು ಈ ದೇಶದ ಕೋಟ್ಯಂತರ ಮಕ್ಕಳ, ಅದರಲ್ಲೂ ಬಡವರು, ದಲಿತರು, ಆದಿವಾಸಿಗಳ ಮತ್ತು ಅಲ್ಪಸಂಖ್ಯಾತರ ಮಕ್ಕಳಿಗೆ ಗುಣಾತ್ಮಕವಾದ ಉಚಿತ ಮತ್ತು ಕಡ್ಡಾಯ ಪ್ರಾಥಮಿಕ ಶಿಕ್ಷಣವನ್ನು ಒದಗಿಸುವ ಜವಾಬ್ದಾರಿಯಿಂದ ೮೬ನೇ ತಿದ್ದುಪಡಿಯನ್ನು ಸಂಸತ್‌ನಲ್ಲಿ ಅಂಗೀಕರಿಸಿ **ಶಿಕ್ಷಣವನ್ನು ಮೂಲಭೂತ ಹಕ್ಕಾಗಿಸಿತು.** ಈ ಹಿನ್ನಲೆಯಲ್ಲಿ ಸರ್ಕಾರ ಎಲ್ಲರ ಪ್ರಶಂಸೆ ಹಾಗೂ ಅಭಿನಂದನೆಗೆ ಪಾತ್ರವಾಯಿತು.

**ಮಸುಕಾದ ಮಕ್ಕಳ ಭವಿಷ್ಯ**

ಆದರೆ ಕಳೆದ ಮೇ ೨೦೦೬ರಲ್ಲಿ ಕೇಂದ್ರ ಸರ್ಕಾರ ಸಂಪನ್ಮೂಲದ ಕೊರತೆ ಹಾಗೂ ಹಾಲಿ ಸರ್ವಶಿಕ್ಷಣ ಅಭಿಯಾನ ಯೋಜನೆಯ ನೆಪ ಒಡ್ಡಿ ೮೬ನೇ ತಿದ್ದುಪಡಿಯನ್ನು ವಾಪಸ್ಸು ಪಡೆದು ಶಿಕ್ಷಣದ ಮೂಲಭೂತ ಹಕ್ಕಿಗೆ ಚ್ಯುತಿ ತಂದಿರುವುದಲ್ಲದೆ, **ಶಿಕ್ಷಣ ನೀಡುವುದು ಆಯಾ ರಾಜ್ಯ ಸರ್ಕಾರಗಳ ಜವಾಬ್ದಾರಿ** ಎಂದು ಆದೇಶ ಹೊರಡಿಸಿ ತನ್ನ ಗುರುತರ ಜವಾಬ್ದಾರಿಯಿಂದ ಹೊರಬಂದಿದೆ. ಇದರಿಂದ ದೇಶದ ಕೋಟ್ಯಂತರ ಬಡ, ದಲಿತ, ಹಿಂದುಳಿದ, ಅಲ್ಪಸಂಖ್ಯಾತರ ಮಕ್ಕಳ ಶಿಕ್ಷಣದ ಭವಿಷ್ಯ ಕತ್ತಲಿಗೆ ದೂಡಿದಂತಾಗಿದೆ.

ಶೇಕಡ ೪೦ರಷ್ಟು ಮಕ್ಕಳು ೫ನೇ ತರಗತಿ ಮುಗಿಸುವ ಮುನ್ನವೇ ಪ್ರಾಥಮಿಕ ಶಾಲೆಗಳಿಂದ ಹೊರಗುಳಿಯುತ್ತಿದ್ದಾರೆ. ಇಂದಿಗೂ ಶೇಕಡ ೫೦ ಶಾಲೆಗಳಿಗೆ ಸರಿಯಾದ ಆಟದ ಮೈದಾನ, ಕುಡಿಯುವ ನೀರು, ಶೌಚಾಲಯ, ಪ್ರಯೋಗಾಲಯ ಹಾಗೂ ಇತರೆ ಮೂಲ ಸೌಲಭ್ಯಗಳಿಲ್ಲದೆ ನರಳುತ್ತಿವೆ. ಮಕ್ಕಳು ಆನಂದ, ಉತ್ಸಾಹ ಮತ್ತು ಕ್ರಿಯಾಶೀಲವಾಗಿ ಕಲಿಯುವ ವಾತಾವರಣಗಳು ಬಹುತೇಕ ಶಾಲೆಗಳಲ್ಲಿ ಇಲ್ಲ. ಶಿಕ್ಷಕರ ಅಸಡ್ಡೆ, ದೌರ್ಜನ್ಯಕ್ಕೆ (ಶಿಕ್ಷೆ ಕೊಡುವುದು, ಬೆದರಿಸುವುದು ಇತರೆ) ಒಳಗಾಗಿ ಮಕ್ಕಳು ಶಾಲೆ ತೊರೆಯುತ್ತಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ.

**ಪಾಪ್ಯುಲಿಸ್ಟ್ ಸ್ಲೋಗನ್‌ಗಳು - ಬೀದಿಗೆ ಬಿದ್ದ ಬಡವರು**

ಒಂದೆಡೆ ಮಧ್ಯಾಹ್ನದ ಬಿಸಿಯೂಟ ಮತ್ತು ಪ್ರೌಢಶಾಲೆಯ ಬಡ ಬಾಲಕಿಯರಿಗೆ ಸೈಕಲ್ ವಿತರಣೆಯಂತಹ ಪಾಪ್ಯುಲಿಸ್ಟ್ ಕಾರ್ಯಕ್ರಮಗಳಿಗೆ ಕೈಹಾಕುವ ಸರ್ಕಾರ ಜಾಗತೀಕರಣ-ಖಾಸಗೀಕರಣ ಪ್ರಕ್ರಿಯೆಯ ಗುಲಾಮರಾಗಿ ಕೋಟ್ಯಂತರ ಬಡವರ ಬಿ.ಪಿ.ಎಲ್. ಕಾರ್ಡ್ ಕಸಿದುಕೊಂಡು, ಎ.ಪಿ.ಎಲ್. ಕಾರ್ಡ್ ಕೊಟ್ಟು ಇಡೀ ಕುಟುಂಬಗಳೇ ಅರೆಹೊಟ್ಟೆಯಲ್ಲಿ ಬೀದಿಗೆ ಬೀಳುವಂತೆ ಮಾಡಿದೆ. ಉದ್ಯೋಗ ಭರವಸೆ ಯೋಜನೆ ಮತ್ತು ಆಹಾರ ಭದ್ರತೆ ಯೋಜನೆಗಳು, ಶ್ರೀಮಂತ ರಾಜಕಾರಣಿ, ಅಧಿಕಾರಿ, ದಲ್ಲಾಳಿಗಳ ಜೇಬು ಮತ್ತು ಸೂಟ್‌ಕೇಸುಗಳನ್ನು ತುಂಬುವಲ್ಲಿ ನೆರವಾಗಿವೆಯೇ ವಿನಾ ಬಡವರ ಕಣ್ಣೀರು ಇಂಗಿಸುವ, ಹಸಿವು ನೀಗಿಸುವ, ಉದ್ಯೋಗ ನೀಡುವ ಕಾರ್ಯಕ್ರಮಗಳಾಗುತ್ತಿಲ್ಲ. ಇಂತಹ ಹೀನಾಯ ಸ್ಥಿತಿಯಲ್ಲಿ ಬಡವರನ್ನು ಇರಿಸಿ, ಈಗ ಹೋಟೆಲ್, ಡಾಬಾ, ಟೀ ಅಂಗಡಿ, ಮನೆಗೆಲಸ ಮುಂತಾದ ಕ್ಷೇತ್ರಗಳನ್ನು ಕೂಡ ಅಪಾಯಕಾರಿ ಕ್ಷೇತ್ರಗಳೆಂದು ಘೋಷಿಸಿ ಮಕ್ಕಳ ದುಡಿಮೆ ನಿಷೇಧ ಮಾಡಿ ಎಂದು ಆದೇಶ ಹೊರಡಿಸಲಾಗಿದೆ! ಈ ಆದೇಶ ಹಾಗೂ ಶಿಕ್ಷಣ ಮೂಲಭೂತ ಹಕ್ಕು ಎಂದು ಘೋಷಿಸಿದ್ದನ್ನು ವಾಪಸು ಪಡೆದಿರುವುದು ಯಾರನ್ನೋ ಓಲೈಸಲು ನಡೆಸುತ್ತಿರುವ ಹುನ್ನಾರವೂ ಆಗಿದೆ.

೨೦೦೧ರ ಹೊತ್ತಿಗೆ ಶೇಕಡ ೬೦ ಕುಟುಂಬಗಳನ್ನು ಬಡತನ ರೇಖೆಯಿಂದ ಮೇಲೆ ತರುತ್ತೇವೆಂದು ವಿದೇಶಿ ಸಾಲ ತರುವಾಗ ಜಾಗತಿಕ ಒಪ್ಪಂದ ಮಾಡಿಕೊಂಡಿದ್ದ ಭಾರತ ಸರ್ಕಾರ ವಾಸ್ತವವಾಗಿ ಈ ದೇಶದ ಕೋಟ್ಯಂತರ ಕಾರ್ಮಿಕರನ್ನು, ಕೂಲಿಕಾರರನ್ನು, ಬುಡಕಟ್ಟು, ದಲಿತ ಹಿಂದುಳಿದ ಶೋಷಿತ ವರ್ಗದವರ ಬದುಕು- ಉದ್ಯೋಗಗಳನ್ನು ಕಸಿದುಕೊಂಡು ಬೀದಿಗೆ ತಳ್ಳಿತು. ಸರ್ಕಾರ ಬಡವರನ್ನು ಕಡುಬಡವರನ್ನಾಗಿಸಿದೆಯೇ ವಿನಾ ಬಡತನ ರೇಖೆಯಿಂದ ಮೇಲೆ ಎತ್ತಲಿಲ್ಲ. ಆದರೆ ಮತ್ತೆ ವಿದೇಶಿ ಸಾಲದ ಭಿಕ್ಷೆಗೆ ಕೈಯೊಡ್ಡಿರುವ ಇದೇ ಸರ್ಕಾರ ಅನಿವಾರ್ಯವಾಗಿ ತಾನು ಮೊದಲು ಮಾಡಿಕೊಂಡಿದ್ದ ಒಪ್ಪಂದಕ್ಕೆ ಉತ್ತರ ನೀಡಬೇಕಾಗಿತ್ತು. ಹೀಗಾಗಿಯೇ ಹಿಂದೆ ನೀಡಲಾಗಿದ್ದ ಬಹುತೇಕ ಬಿ.ಪಿ.ಎಲ್. ಕಾರ್ಡುಗಳ ಜಾಗದಲ್ಲಿ ಕೋಟ್ಯಂತರ ಬಡವರ ಕೈಲಿ ಎ.ಪಿ.ಎಲ್. ಕಾರ್ಡುಗಳು ! **ಅಂದರೆ ಭಾರತದಲ್ಲಿ ಈಗ ಶೇಕಡ ೬೦ ಕುಟುಂಬಗಳನ್ನು ಬಡತನ ರೇಖೆಯಿಂದ ಮೇಲೆ ತರಲಾಗಿದೆಯಂತೆ !!!** ಜಾಗತಿಕ ದಣಿಗಳಿಗೆ ನಮ್ಮವರು ನೀಡುತ್ತಿರುವ ಅತಿ ಲಜ್ಜೆಗೆಟ್ಟ ಅಂಕಿ-ಅಂಶಗಳು ಯಾರೋ ತಮ್ಮ ಸ್ವ-ಹಿತಾಸಕ್ತಿಗೆ ಮಾಡಿಕೊಂಡ ಒಪ್ಪಂದಕ್ಕೆ ಬಡವರು ಬಲಿಯಾಗುತ್ತಿರುವುದು ನಮ್ಮ ಮುಂದಿರುವ ಚಿತ್ರಣ.

''ಎ.ಪಿ.ಎಲ್. ಕಾರ್ಡು ಯಾಕೆ ಕೊಟ್ಟಿರಿ'' ಎಂದು ಗ್ರಾಮ ಪಂಚಾಯಿತಿಗಳಿಗೆ, ಗ್ರಾಮ ಲೆಕ್ಕಾಧಿಕಾರಿಗಳಿಗೆ ಬಡವರು ದಿನಗಟ್ಟಲೆ ಕ್ಯೂನಲ್ಲಿ ನಿಂತು ಬಡಿದಾಡಿಕೊಂಡು, ಕಣ್ಣೀರು ಹಾಕಿ ಕೇಳುತ್ತಿದ್ದಾರೆ. ಇದಕ್ಕೆ ಸರ್ಕಾರ ಉತ್ತರ ಕೊಡಲು ಸಾಧ್ಯವೆ ?

ಶಿಕ್ಷಣ ಮೂಲಭೂತ ಹಕ್ಕನ್ನಾಗಿ ಮಾಡಲಾಗದು ಎಂದಿರುವ ಕೇಂದ್ರ ಸರ್ಕಾರ, ಬಾಲ ಕಾರ್ಮಿಕ ಪದ್ಧತಿಯನ್ನು ನಿಷೇಧ ಮಾಡಿರುವ ಕೇಂದ್ರ ಸರ್ಕಾರ, ಬಾಲ ಕಾರ್ಮಿಕರಿಗೆ ಪರ್ಯಾಯವನ್ನು ನೀಡದ ಕೇಂದ್ರ ಸರ್ಕಾರ, ಬಡವರ ಉದ್ಯೋಗ ಕಸಿದುಕೊಂಡು ಎ.ಪಿ.ಎಲ್. ಕಾರ್ಡು ಕೊಟ್ಟಿರುವ ಸರ್ಕಾರ, ಈ ದೇಶದ ಕೋಟ್ಯಂತರ ಕೂಲಿ ಕಾರ್ಮಿಕರನ್ನು ಮತ್ತು ಶೋಷಿತ ಕುಟುಂಬಗಳನ್ನು ಹಾಗೂ ಅವರ ಮಕ್ಕಳನ್ನು ಬೆತ್ತಲೆ ನಿಲ್ಲಿಸಲಿದೆ. ಭ್ರಷ್ಟ ರಾಜಕಾರಣಿಗಳು ಜಾಗತಿಕ ದುಷ್ಟಕೂಟದೊಂದಿಗೆ ಹೂಡಿರುವ ಸಂಚು ಅಲ್ಲವೇ ಇದು ?

**ಜನತೆ ಜಾಗೃತರಾಗಬೇಕು**

ಇಂದು ಜನರು ಜಾಗೃತರಾಗಬೇಕಾಗಿದೆ. ಮಕ್ಕಳ ಹಕ್ಕುಗಳ ಪರವಾಗಿ ಹಾಗೂ ಬಾಲ ಕಾರ್ಮಿಕ ಪದ್ಧತಿ ವಿರೋಧಿಸಿ ಹೋರಾಡುತ್ತಿರುವ ಪಕ್ಷಗಳು, ಸಂಘಟನೆಗಳು ಸರ್ಕಾರಗಳ ನಿಜ ಬಣ್ಣವನ್ನು ಅರಿಯಬೇಕಾಗಿದೆ. ಹೋರಾಟ ತೀವ್ರಗೊಳಿಸಿ, ಶಿಕ್ಷಣವನ್ನು ಮೂಲಭೂತ ಹಕ್ಕನ್ನಾಗಿ ಸರ್ಕಾರ ಖಾತರಿಗೊಳಿಸಲು, ಬಾಲ ಕಾರ್ಮಿಕರಿಗೆ ಪರ್ಯಾಯ ವ್ಯವಸ್ಥೆ ಕಲ್ಪಿಸಲು, ಸಮಾನ ಶಿಕ್ಷಣ ಜಾರಿಗೊಳಿಸಲು ಹಾಗೂ ಬಡವರ ಪರವಾದ ಮತ್ತು ಅಭಿವೃದ್ಧಿ ಪರವಾದ ಹೋರಾಟಗಳನ್ನು ತೀವ್ರಗೊಳಿಸಬೇಕಿದೆ. ಇಲ್ಲದಿದ್ದರೆ ಶೋಷಿತರಿಗೆ ಮತ್ತು ಅವರ ಮಕ್ಕಳಿಗೆ ಗಂಡಾಂತರ ತಪ್ಪಿದ್ದಲ್ಲ.

ಆರ್. ವಿಶ್ವಸಾಗರ್
ಚಿಂತನ ಫೌಂಡೇಶನ್, ರೈಲ್ವೆ ನಿಲ್ದಾಣದ ಎದುರು, ಚಿತ್ರದುರ್ಗ



# ಪರ್ಸಿಯೈಡ್ ಉಲ್ಕಾವೃಷ್ಟಿ

**ಆ**ಗಸ್ಟ್ ಎಂದರೆ ಮೋಡ ಎಂದು ಜನಸಾಮಾನ್ಯರ ಅನಿಸಿಕೆ. ಆದರೂ ಹವ್ಯಾಸೀ ವೀಕ್ಷಕರಿಗೆ ಈ ತಿಂಗಳು ಮುಖ್ಯವಾದದ್ದು; ಕಾರಣ ೧೨ರಂದು ಕಾಣುವ ಉಲ್ಕಾವೃಷ್ಟಿ. ಇದು ಬೆಳಗಿನ ಜಾವದ ನೋಟ. ಆದ್ದರಿಂದ ಆ ನಕ್ಷತ್ರಪುಂಜ ನಕ್ಷೆಯಲ್ಲಿ ಕಾಣುವುದಿಲ್ಲ. ವಾಸ್ತವವಾಗಿ ಈ ಉಲ್ಕಾವೃಷ್ಟಿ ಜುಲೈನಲ್ಲಿಯೇ ಪ್ರಾರಂಭವಾಗುತ್ತದೆ. ಪ್ರತಿ ಬೆಳಿಗ್ಗೆ ಸುಮಾರು ಗಂಟೆ ೧೦-೧೫ರಂತೆ ಆರಂಭವಾಗಿ ಆಗಸ್ಟ್ ೧೨ಕ್ಕೆ ಗರಿಷ್ಠ ಮುಟ್ಟುತ್ತದೆ. ಪುನಃ ಕ್ರಮೇಣ ಕಡಿಮೆಯಾದರೂ ತಿಂಗಳುದ್ದಕ್ಕೂ ನಡೆಯುತ್ತದೆ. ೧೯೯೨ರಲ್ಲಿ ಬಂದಿದ್ದ ಸ್ವಿಫ್ಟ್ - ಟಟಲ್ ಎಂಬ ಧೂಮಕೇತು ಬಿಟ್ಟುಹೋದ ಧೂಳಿನ ಕಣಗಳೇ ಹೀಗೆ ಉಲ್ಕೆಗಳಾಗಿ ಬೀಳುತ್ತವೆ. ೧೯೯೮-೯೯ರಲ್ಲಿ ಗಂಟೆಗೆ ಸುಮಾರು ೧೦೦೦ ಉಲ್ಕೆಗಳು ಕಂಡಿದ್ದವು. ಕ್ರಮೇಣ ಕಡಿಮೆಯಾಗುತ್ತಾ ಬಂದಿದೆ. ೧೨ರಂದು ಚಂದ್ರನ ಬೆಳಕಿನ ತೊಂದರೆಯೂ ಇಲ್ಲ. ಆದುದರಿಂದ ನಕ್ಷತ್ರಲೋಕ ಕ್ಷಣಕಾಲವಾದರೂ ಪ್ರತ್ಯಕ್ಷವಾದರೆ ವೀಕ್ಷಿಸಲು ಮರೆಯದಿರಿ.

ಸಂಜೆಯ ಆಕಾಶ ಆಕಾಶಗಂಗೆಯ ಸುಂದರ ನೋಟ ಒದಗಿಸುತ್ತದೆ. ಗುರು ಗ್ರಹದ ಹೊರತಾಗಿ ಯಾವ ಗ್ರಹವೂ ಇಲ್ಲ. ವೃಶ್ಚಿಕರಾಶಿ ಮತ್ತು ಧನುರಾಶಿಗಳ ಆಸು ಪಾಸನ್ನು ದುರ್ಬೀನು ಅಥವಾ ದೂರದರ್ಶಕ ದಿಂದ ಪರಿಶೀಲಿಸಿ. ಆಕಾಶಗಂಗೆಯ ಹರಿವು ಸ್ಪಷ್ಟವಾಗುತ್ತದೆ. ಒಂದು ಕವಲು ದಕ್ಷಿಣದ ಅಂಚಿನಲ್ಲಿ ಸೆಂಟಾರಸ್ (ಕಿನ್ನರ) ಗುಚ್ಛದ ಎರಡು ಪ್ರಕಾಶಮಾನ ನಕ್ಷತ್ರ ಗಳತ್ತ ಹೊರಟಿದೆ. ತ್ರಿಶಂಕು ಅಥವಾ ದಕ್ಷಿಣ ಶಿಲುಬೆ ಕಂತುವ ಹಂತದಲ್ಲಿದ್ದರೂ ಗುರುತಿಸಬಹುದು. ಇನ್ನೊಂದು ಕವಲು ಉತ್ತರಕ್ಕೆ ಹೊರಟಿದೆ. ಅದು ಲೈರಾ (ವೀಣಾ) ಮತ್ತು ಅಕ್ವಿಲಾ (ಗರುಡ) ಮೂಲಕ ಹರಿಯುತ್ತದೆ. ಈ ಎರಡು ಪುಂಜಗಳೊಡನೆ ರಾಜಹಂಸವೂ ಸೇರಿ (ಸಿಗ್ನಸ್) ಮೂರು ಪ್ರಖರ ನಕ್ಷತ್ರಗಳ ತ್ರಿಕೋಣ ರಚಿಸುತ್ತವೆ.

ನೆತ್ತಿಯಿಂದ ಪಶ್ಚಿಮಕ್ಕೆ ನೀಲಿ ನಕ್ಷತ್ರ ಚಿತ್ರಾ, ಸ್ವಾತಿ ಕಾಣುವುವು. ಇಲ್ಲಿ ಆಕಾಶಗಂಗೆಯ ಹರಿವಿಲ್ಲ. ಪೂರ್ವದಲ್ಲೂ ಮಕರದ ಭಾಗ ಬರಡು. ಉತ್ತರದಲ್ಲಿ, ಸಪ್ತರ್ಷಿಗಳು ವಿರಾಜರಾಗಿದ್ದಾರೆ. ನೆತ್ತಿಯ ಮೇಲಿನ ಹರ್‌ಕ್ಯುಲಿಸ್ (ಭೀಮ) ಗುರುತಿಸಲು ಸಫಲರಾದರೆ ಆಕಾಶ ಶುಭ್ರವಾಗಿದೆ ಎಂದರ್ಥ.

ಕಳೆದ ತಿಂಗಳಲ್ಲಿ ಮಘವನ್ನು ಹಿಂದೆ ಹಾಕಿ ಓಡಿದ್ದ ಶುಕ್ರ ಪುನಃ ಆಗಸ್ಟ್ ಮೂರರಂದು ಅದರ ಪಕ್ಕವೇ ಹಾದುಹೋಗಲಿದೆ. ಹೀಗೆ ಮುಂದುವರೆದು ತಿಂಗಳ ಮಧ್ಯಕ್ಕೆ ದಿಗಂತದ ಅಂಚಿಗೆ ಸರಿದು ಕಾಣದಂತಾಗುವುದು. ಆಗಸ್ಟ್ ೧೮ರಂದು ಸೂರ್ಯನನ್ನು ಹಾದು ಆಗಸ್ಟ್ ಉತ್ತರಾರ್ಧದಿಂದ ಮುಂದೆ ಬೆಳಗಿನ ಜಾವ ಕಾಣತೊಡಗುವುದು.




ಮಂಗಳ ಗ್ರಹ ಬೆಳಗಿನ ಜಾವ ಕಾಣುತ್ತದೆ. ರೋಹಿಣಿ ಮತ್ತು ಕೃತ್ತಿಕಾಗಳ ನಡುವೆ ಅದರ ಸ್ಥಾನ ದಿನೇ ದಿನೇ ಬದಲಾಗುವುದನ್ನು ಕಾಣಬಹುದು. ತಿಂಗಳುದ್ದಕ್ಕೂ ಶನಿ ಕಾಣುವುದಿಲ್ಲ. ಬುಧ ತಿಂಗಳ ಮೊದಲಲ್ಲಿ ಬೆಳಗಿನ ಜಾವ; ತಿಂಗಳ ಕೊನೆಯಲ್ಲಿ ಸಂಜೆ ಕಾಣುತ್ತದೆ.

ಹುಣ್ಣಿಮೆಯಂದು ಚಂದ್ರ ಗ್ರಹಣವಿದೆ. ಆದರೆ ನಮಗೆ ಕಾಣುವುದಿಲ್ಲ. ಈಶಾನ್ಯ ರಾಜ್ಯ ಗಳಿಗೆ ಮುಕ್ತಾಯದ ಹಂತ ಮಾತ್ರ ಕಾಣುತ್ತದೆ.

### ಖಗೋಳ ದಿನಚರಿ

೧ ಚಂದ್ರ ರಾಹು ಬಿಂದುವಿನಲ್ಲಿ
೨ ಯುರೇನಸ್ - ಚಂದ್ರ ಸಮಾಗಮ
೩ ಭೂಮಿ-ಚಂದ್ರ ನಡುವೆ ಕನಿಷ್ಠ ಅಂತರ; ಶುಕ್ರ - ಮಘ ಸಮಾಗಮ*
೫ ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಗೆ)
೭ ಚಂದ್ರ - ಮಂಗಳ ಸಮಾಗಮ* ಗುರು ಗ್ರಹದ ಹಿನ್ನಡೆ ಮುಕ್ತಾಯ
೯ ಶುಕ್ರ - ಶನಿ ಸಮಾಗಮ*
೧೨ ಬುಧ - ಚಂದ್ರ ಸಮಾಗಮ ಪರ್ಸಿಯೈಡ್ ಉಲ್ಕಾವೃಷ್ಟಿ
೧೩ ಅಮಾವಾಸ್ಯೆ ೦೪:೩೩ಕ್ಕೆ ಚಂದ್ರ - ಶುಕ್ರ - ಶನಿ ಸಮಾಗಮ*
೧೪ ಚಂದ್ರ ಕೇತು ಬಿಂದುವಿನಲ್ಲಿ
೧೫ ಬುಧ ಗ್ರಹದ ಯುತಿ (ಸೂರ್ಯನ ನೇರಕ್ಕೆ)
೧೮ ಶುಕ್ರ ಗ್ರಹದ ಯುತಿ ಬುಧ - ಶನಿ ಸಮಾಗಮ
೧೯ ಚಂದ್ರ - ಭೂಮಿ ಗರಿಷ್ಠ ಅಂತರ
೨೦ ಚಾಂದ್ರಮಾಸದ ಪ್ರಥಮ ಪಾದ (ಚಂದ್ರಾಸ್ತ ನಡುರಾತ್ರಿಗೆ)
೨೧ ಶನಿ ಗ್ರಹದ ಯುತಿ ಗುರು - ಚಂದ್ರ ಸಮಾಗಮ*
೨೭ ಚಂದ್ರ - ನೆಪ್ಚೂನ್ ಸಮಾಗಮ
೨೮ ಹುಣ್ಣಿಮೆ ೧೬:೦೫ಕ್ಕೆ ; ಚಂದ್ರಗ್ರಹಣ ೧೩:೨೨ರಿಂದ ೧೮:೫೨ರವರೆಗೆ ಚಂದ್ರ ರಾಹು ಬಿಂದುವಿನಲ್ಲಿ
೩೧ ಚಂದ್ರ - ಭೂಮಿ ಅಂತರ ಕನಿಷ್ಠ

* ಛಾಯಾಗ್ರಹಣಕ್ಕೆ ಉತ್ತಮ ಅವಕಾಶ



*೭ನೇ ಆಗಸ್ಟ್ ಬೆಳಗಿನ ಜಾವ ಚಂದ್ರ, ಕೃತ್ತಿಕಾ, ಮಂಗಳ ಮತ್ತು ರೋಹಿಣಿ*

**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧



## ಜ್ಞಾನ ದೀಪಗಳು

*ಸಿ. ಎನ್. ಕೃಷ್ಣಮೂರ್ತಿ*

**ಪುಟ : ೨೪೪** **ಬೆಲೆ : ರೂ. ೧೨೦**

**ಭಾಗ್ಯಲಕ್ಷ್ಮಿ ಪ್ರಕಾಶನ,** ೮೭, ೩ನೇ ಅಡ್ಡರಸ್ತೆ, ೪ನೇ ಬ್ಲಾಕ್, ಬನಶಂಕರಿ ೩ನೇ ಸ್ಟೇಜ್, ೩ನೇ ಫೇಸ್, ಬೆಂಗಳೂರು - ೮೫

ಮಹಾವೀರ, ಬುದ್ಧ, ಕ್ರಿಸ್ತ, ತುಲಸೀದಾಸರು, ರಾಮಕೃಷ್ಣ ಪರಮಹಂಸರು ಹೀಗೆ ಜಗತ್ತಿಗೆ ಬೆಳಕಾದ ಮೂವತ್ತು ಮಹಾತ್ಮರ ಜೀವನ ಪರಿಚಯ ಮತ್ತು ಬೋಧನೆಗಳು ಇಲ್ಲಿವೆ. ಹಿಂದೂ, ಬೌದ್ಧ, ಜೈನ, ಕ್ರೈಸ್ತ, ಇಸ್ಲಾಂ ಹಾಗೂ ಸಿಖ್ ಧರ್ಮಗಳ ಪರಿಚಯ ಹಾಗೂ ಆಯಾ ಧರ್ಮದ ಗ್ರಂಥಗಳಲ್ಲಿರುವ ಮತ್ತು ಹಿರಿಯರ ನುಡಿಮುತ್ತುಗಳು ಇವೆ. ಕಡೆಯದಾಗಿ ಧರ್ಮ ಸಹಿಷ್ಣುತೆ ಮತ್ತು ಸಮಾನತೆಯನ್ನು ಕುರಿತು ವೈಚಾರಿಕ ಲೇಖನವಿದೆ. ಸರಳ ನೇರ ಬರಹ. ಮನುಕುಲದ ಸಾರ್ಥಕತೆಗಾಗಿ ಶ್ರಮಿಸಿದ ಮಹಾತ್ಮರ ಪರಿಚಯವನ್ನು ಎಳೆಯರು ಪಡೆಯಲು ಇದು ಉತ್ತಮ ಪುಸ್ತಕ.



## ಕಂಡದ್ದು ಕೇಳಿದ್ದು

*ಎಚ್. ಜಿ. ಸೋಮಶೇಖರ್ ರಾವ್*

**ಪುಟ : ೧೦೪** **ಬೆಲೆ : ರೂ. ೬೫**

**ಅಕ್ಷಯ ಪ್ರಕಾಶನ,** ನಂ. ೨೯, ೨ನೇ ಅಡ್ಡರಸ್ತೆ, ೩ನೇ ಮುಖ್ಯರಸ್ತೆ, ಹನುಮಂತನಗರ, ಬೆಂಗಳೂರು - ೯



೧೯೮೦ರ ಕಾಲಾವಧಿಯಲ್ಲಿ ಅಂಕಣಕಾರರಾಗಿ 'ಮೈಸೂರು ಮಿತ್ರ' ಪತ್ರಿಕೆಯಲ್ಲಿ ಬರೆದ ಲೇಖನಗಳ ಸಂಗ್ರಹ. ಪುಸ್ತಕದ ಹೆಸರೇ ತಿಳಿಸುವಂತೆ ಕಂಡ, ಕೇಳಿದ, ಅನುಭವಕ್ಕೆ ಬಂದ ದಿನನಿತ್ಯದ ಆಗುಹೋಗುಗಳು ಹಾಗೂ ಲೇಖಕರಲ್ಲಿ ಅದರಿಂದ ಮೂಡಿದ ಭಾವನೆ ಈ ಪುಸ್ತಕದ ಸಾರಾಂಶ. ೧೯೮೦ರ ಕಾಲದ ಆ ದಿನಗಳಿಗೂ, ೨೦೦೭ರ ಈ ದಿನಗಳಿಗೂ ಮನುಷ್ಯರ ಸ್ವಭಾವದಲ್ಲಿ ಏನೇನೂ ಬದಲಾವಣೆಯಾಗಿಲ್ಲ ಎಂಬುದನ್ನು ಈ ಲೇಖನಗಳಲ್ಲಿ ಕಾಣಬಹುದು. ಸುಲಭವಾಗಿ ಓದಿಮುಗಿಸಿಬಿಡುವಂತಹ ಪುಸ್ತಕ. ಇಲ್ಲಿಯ ಲೇಖನಗಳಲ್ಲಿ ಇನ್ನೂ ಆಳವಾದ, ವಿಸ್ತಾರವಾದ ವೈಚಾರಿಕ ಚರ್ಚೆಯನ್ನು ನಡೆಸಿದ್ದರೆ ಚೆನ್ನಾಗಿರುತ್ತಿತ್ತು.

## ಬಣ್ಣದ ಬದುಕಿನ ಚಿನ್ನದ ದಿನಗಳು

*ಗಣೇಶ ಅಮೀನಗಡ*

**ಪುಟ : ೧೫೪** **ಬೆಲೆ : ರೂ. ೬೦**

**ಪ್ರಸಾಧನ ಪ್ರಕಾಶನ,** ಭಾರತೀನಗರ, ಬಿಜೈ, ಮಂಗಳೂರು



ಚುರು ಚುರು ಚಳಿಯಲ್ಲಿ ಕುಳಿತು ಬೆಂಕಿ ಕಾಯಿಸಿಕೊಳ್ಳುತ್ತಾ, ಖಾರದ ಹಪ್ಪಳ ಮೆಲ್ಲುತ್ತಾ ಅಜ್ಜನ ಕಥೆ ಕೇಳುವಂತಿದೆ. ಶೀರ್ಷಿಕೆಯನ್ನು ಓದಿದಾಗ ಇದು ರಂಗಭೂಮಿಯ ಇತಿಹಾಸ ಎಂದೆನಿಸುತ್ತೆ. ಒಳಗಿರುವುದು ತೊಂಬತ್ತೂರರ ಹರೆಯದ ಏಣಗಿ ಬಾಳಪ್ಪನವರ ಜೀವನಪ್ರೀತಿ, ಕಾಯಕದಲ್ಲಿಯ ಶ್ರದ್ಧೆ, ರಂಗಭೂಮಿಯ ವೈಭವದ ಸ್ಮರಣೆ, ಆ ಕಾಲದ ಜನರ ಮುಗ್ಧತೆ, ಸಾತ್ವಿಕತೆ, ಪೌರಾಣಿಕ-ಐತಿಹಾಸಿಕ ನಾಟಕಗಳ ಬಗೆಗಿದ್ದ ಭಕ್ತಿ ಹಾಗೂ ರಂಗಭೂಮಿ ಮತ್ತು ಕಲಾವಿದರ ಬಗೆಗಿನ ಪ್ರೀತಿ. ಇಲ್ಲಿ ಪರಿವಿಡಿ ಇಲ್ಲ, ಅಧ್ಯಾಯಗಳಿಲ್ಲ, ಅಜ್ಜನ ನೆನಪು ಬಿಚ್ಚಿಕೊಂಡ ಹಾಗೆ ಅಲ್ಲಲ್ಲಿ ಪುಟ್ಟ ಶೀರ್ಷಿಕೆಗಳಷ್ಟೆ. ಘಟನೆಗಳು ನಡೆದ ಕ್ರಮದಲ್ಲೆ ಇರಬೇಕೆಂಬ ಕೃತಕ ಕಟ್ಟುಪಾಡಿಗೆ ಒಳಪಡದೆ ಸಹಜವಾಗಿ ನಿರೂಪಣೆಗೊಂಡ ಶೈಲಿ. ಪುಟಪುಟದಲ್ಲಿಯೂ ಅಜ್ಜನ ಮಾತಲ್ಲಿ ಧುಮ್ಮಿಕ್ಕುವ ಸುಂದರ ರಂಗಗೀತೆಗಳ ಸಾಲುಗಳಿವೆ. ಸ್ವಾರಸ್ಯ ಘಟನೆಗಳಿವೆ. ಕಣ್ಣಲ್ಲಿ ನೀರೂರಿಸುವ ಸಮೃದ್ಧ ಅನುಭವಗಳಿವೆ. ಶ್ರೀರಂಗರು, ಕೈಲಾಸಂ, ಗಂಗಾಧರ ಶಾಸ್ತ್ರಿಗಳು, ರಾಜಕುಮಾರ್, ಕಾರಂತರು, ಜಿ. ಜಿ. ಹೆಗಡೆ, ಮಲ್ಲಿಕಾರ್ಜುನ ಮನ್ಸೂರ ಇನ್ನೂ ಅನೇಕ ಗಿರಿಶಿಖರಗಳು ಇಲ್ಲಿ ಕಾಣಸಿಗುತ್ತಾರೆ. ನಾವೂ ಆ ಕಾಲದಲ್ಲೇ ಹುಟ್ಟಬೇಕಿತ್ತು, ಅಜ್ಜನ ನಾಟಕಗಳನ್ನು ನೋಡಬೇಕಿತ್ತು ಎಂದು ಎಳೆಯರಿಗೆ ಅನ್ನಿಸಿದರೆ ಆಶ್ಚರ್ಯವಿಲ್ಲ. ಸರಳ ಸುಂದರ ಮುಖಪುಟ ವಿನ್ಯಾಸ. ಅಜ್ಜನ ಸಾಮೀಪ್ಯಕ್ಕೆ ನಮ್ಮನ್ನು ಕರೆದೊಯ್ದ ಅಮೀನಗಡ ಅವರಿಗೂ, ಅವರನ್ನು ಈ ಕಾರ್ಯಕ್ಕೆ ಹುರಿದುಂಬಿಸಿದ ಡಾ|| ಕೆ. ವಿ. ನಾರಾಯಣ ಅವರಿಗೂ ಕೃತಜ್ಞತೆಗಳು. ಬಾಳಪ್ಪ ಅಜ್ಜನ ನೆನಪಿನ ಬುತ್ತಿಯ ರುಚಿಯನ್ನು ಮೆದ್ದವನೇ ಜಾಣ.



## ಚಾಚಾ ನೆಹರು ಮತ್ತು ಈಚಲು ಮರ

*ಈರಪ್ಪ ಎಂ. ಕಂಬಳಿ*

**ಪುಟ : xx + ೧೮೩** **ಬೆಲೆ : ರೂ. ೭೫**

**ಚಾರ್ವಾಕ ಪ್ರಕಾಶನ,** ಡಿ-೧೫೪, ಜೆ.ಬಿ.ನಗರ, ಬೆಂ. ೭೫

ಲೇಖಕರ ಮೂರನೆಯ ಪ್ರಬಂಧ ಸಂಕಲನ. 'ಹಳ್ಳಿಗಾಡು ಓಟದ ಹಮ್ಮೀರ' ಬಡ ವಿದ್ಯಾರ್ಥಿಗಳ, ಕ್ರೀಡಾಪಟುಗಳ ಪಡಿಪಾಟಲನ್ನು, ಕಂಬಳಿಯವರ ಮಾಸ್ತರಿಕೆಯ ಅನುಭವಗಳನ್ನು ಚಿತ್ರಿಸುತ್ತದೆ. ಹಳ್ಳಿಗಾಡು ಪರಿಸರದಲ್ಲಿ ಕಳೆದ ಬಾಲ್ಯದ ನೆನಪುಗಳನ್ನು, ಬಡತನದಲ್ಲಿ ಬೆಂದ ಅನುಭವಗಳನ್ನು, ಜಾತಿ ಮತಾಂಧರಿಂದ ಮನಸ್ಸಿಗಾದ ಮಾಯದ ನೋವನ್ನು 'ಅಕ್ಷರ ಮತ್ತು ನಾನು' ಹಾಗೂ 'ನನ್ನ ತೀರ್ಥರೂಪರು' ಪ್ರಬಂಧಗಳು ಕಟ್ಟಿಕೊಡುತ್ತವೆ. 'ಮೊಬೈಲುದಾಸರೂ ನಮ್ಮ ದೇಶವೂ' ಹಾಸ್ಯಭರಿತ ಪ್ರಬಂಧ. ಹಾಸ್ಯದ ಜೊತೆಯಲ್ಲಿಯೇ ಹೊಸೆದು ಹೆಣೆದಂತೆ ಮೊಬೈಲಿನ ಹಾವಳಿ, ಯುವಜನತೆ, ಸಮಾಜದ ಮೇಲಾಗುತ್ತಿರುವ, ಆಗಲಿರುವ ಅಡ್ಡ ಪರಿಣಾಮದ ಕಟುಸತ್ಯವೂ ಇದೆ. 'ಮೆಜೆಸ್ಟಿಕ್ ಮೀಮಾಂಸೆ' ೩೨ ಪುಟಗಳ ದೀರ್ಘ ಪ್ರಬಂಧ. ಬೆಂಗಳೂರೆಂಬ ಬೇತಾಳ ನಗರಿಯ ಬಗ್ಗೆ ಹೇಳಹೊರಟಾಗ ೩೨ ಪುಟಗಳೂ ಕಡಿಮೆಯೇ. ಒಟ್ಟು೧೩ ಲಲಿತ ಪ್ರಬಂಧಗಳಿವೆ. ಎಚ್. ದಂಡಪ್ಪನವರ ವಿಸ್ತಾರವಾದ ಮುನ್ನುಡಿಯೂ 'ಲಲಿತ ಪ್ರಬಂಧ' ಕುರಿತ ಒಂದು ಪ್ರಬಂಧದಂತಿದೆ.



## ಬಸವಣ್ಣ ಮತ್ತು ಅಂಬೇಡ್ಕರ್

*ಡಾ|| ಜಯದೇವಿ ಎಂ. ಗಾಯಕವಾಡ*

**ಪುಟ : xii + ೧೦೪** **ಬೆಲೆ : ರೂ. ೬೦**

ಸಿದ್ಧಲಿಂಗೇಶ್ವರ ಪ್ರಕಾಶನ, ಸರಸ್ವತಿ ಗೋದಾಮ್, ಗುಲ್ಬರ್ಗಾ - ೫೮೫ ೧೦೧

ಜಯದೇವಿಯವರೇ ಹೇಳಿಕೊಂಡಂತೆ ಅವರ ಪ್ರೀತಿಯ ಅಧ್ಯಯನದ ವಿಷಯ ಅಂಬೇಡ್ಕರ್ ಹಾಗೂ ಬಸವಣ್ಣ. ಈಗಾಗಲೇ ಹಲವು ಕಡೆ ಇವರನ್ನು ಕುರಿತು ಭಾಷಣ ಮಾಡಿದ್ದಾರೆ. ವಚನ ಸಾಹಿತ್ಯವನ್ನೂ ಅಧ್ಯಯನ ಮಾಡಿ ಉಪನ್ಯಾಸಗಳನ್ನು ನೀಡಿದ್ದಾರೆ. ಇದೀಗ ಅವರ ಅಧ್ಯಯನದ ಶ್ರಮ ಪುಸ್ತಕರೂಪದಲ್ಲಿ ಹೊರಬಂದಿದೆ. ಬಸವಣ್ಣ, ಅಂಬೇಡ್ಕರ್ ಜೀವನ ವಿಚಾರ, ಅವರ ಸಾಮಾಜಿಕ, ಆರ್ಥಿಕ, ಧಾರ್ಮಿಕ ಚಿಂತನೆಗಳು, ವಿಚಾರಗಳ ಪ್ರಸ್ತುತತೆ – ಇವು ಇಲ್ಲಿನ ಅಧ್ಯಾಯಗಳು.

## ಪುಂಸ್ತ್ರೀ

*ಡಾ|| ಪ್ರಭಾಕರ ಶಿಶಿಲ*

**ಪುಟ : ೨೩೨** **ಬೆಲೆ : ರೂ. ೧೫೦**

**ರಾಜ್ ಪ್ರಕಾಶನ,** ನಂ. ೮೩, ಕೆ.ಎಸ್.ಆರ್.ಟಿ.ಸಿ. ಲೇಔಟ್, ಹನುಮಂತನಗರ, ಬನ್ನಿಮಂಟಪ, ಮೈಸೂರು - ೧೫



ಮಹಾಭಾರತದ ಪ್ರಸಿದ್ಧ, ಅಂತೆಯೇ ವಿಶಿಷ್ಟ ಪಾತ್ರಗಳು ಅಂಬೆ ಮತ್ತು ಭೀಷ್ಮ. ಇವರೆಡನ್ನು ಕೇಂದ್ರೀಕರಿಸಿ ರಚಿಸಲಾದ ಕಾದಂಬರಿಯಿದು. ಭೀಷ್ಮ ಅಂಬೆಯನ್ನು ವಿವಾಹವಾಗಿರುತ್ತಿದ್ದರೆ ಮಹಾಭಾರತ ಬೇರೆಯೇ ಆಯಾಮವನ್ನು ಪಡೆಯುತ್ತಿತ್ತೆಂಬ ಒಳನೋಟ ಇಲ್ಲಿದೆ. ಮಹಾಭಾರತದ 'ಭೀಷ್ಮಪರ್ವ'ದ ಕೊನೆಗೆ ಭೀಷ್ಮ ಶಿಖಂಡಿಯ ಬಾಣ ಎದೆಗೆ ನಾಟಿ ತಮ್ಮ ಬಿಡದಿಯಲ್ಲಿ ಮಂಚದ ಮೇಲೆ ಮಲಗಿಕೊಂಡಿರುವಲ್ಲಿಂದ ಕಥೆ ಆರಂಭವಾಗುತ್ತದೆ. ಹದಿನೆಂಟು ಅಧ್ಯಾಯಗಳಿವೆ. ಇಂದಿನ ಭಾರತ, ಸ್ತ್ರೀ ಪ್ರಾಧಾನ್ಯತೆ, ವಾಸ್ತವವಾದ ನಿಲುವುಗಳು, ಮೌಲ್ಯವಿವೇಚನೆಗಳ ದೃಷ್ಟಿಯಲ್ಲಿ ರಚಿಸಿರುವ ಕೃತಿ. ಹೆಬ್ಬಾರರ ರೇಖಾಚಿತ್ರಗಳನ್ನು ನೆನಪಿಸುವಂತಿರುವ ದಿನೇಶ್ ಕುಕ್ಕುಜಡ್ಕ ಅವರ ಚಿತ್ರಗಳು ಪುಸ್ತಕದ ಸೊಬಗನ್ನು ಹೆಚ್ಚಿಸಿವೆ. ಸ್ವತಃ ಕಲಾವಿದರೂ, ಯಕ್ಷಗಾನ ಸಂಯೋಜಕರೂ ಆದ ಶಿಶಿಲರ ಈ ಕೃತಿಯಲ್ಲಿ ಯಕ್ಷಗಾನದ ಲವಲವಿಕೆ, ಹುಮ್ಮಸ್ಸು ಮೇಳೈಸಿವೆ. ಯಯಾತಿ, ಯುಗಾಂತ, ಪರ್ವಗಳಂತೆ ವಿಮರ್ಶೆ, ಚರ್ಚೆಯನ್ನು ಪ್ರೇರೇಪಿಸುವ ಕೃತಿ.

– **ಸಹನ,** ನಂ. ೩, 'ಕೆರೆಮನೆ' ಅಪಾರ್ಟ್‌ಮೆಂಟ್ಸ್
'ದೇವರಕೆರೆ' ಎಕ್ಸ್‌ಟೆನ್ಶನ್, ಇಸ್ರೋ ಲೇಔಟ್, ಬೆಂಗಳೂರು - ೫೬೦ ೦೭೮

# ನಮ್ಮಂತಲ್ಲದ ನಮ್ಮ ರಾಮದಾಸ್

ಲಿಂಗದೇವರು ಹಳೆಮನೆ

ಇವರು ನಮ್ಮಂತಿರಲಿಲ್ಲ. ನಮಗಿಂತ ಭಿನ್ನವಾಗಿದ್ದರು. ಆ ನಿಲುವು ಬೇರೆ, ದನಿಯೇ ಬೇರೆ, ಆ ಧೈರ್ಯವೇ ಬೇರೆ. ರಾಮದಾಸ್ ಎಂದರೆ ಪ್ರತಿಭಟನೆಯ ಪ್ರತಿರೂಪ. ಪ್ರತಿಭಟನೆಗೆಂದೇ ಹುಟ್ಟಿದವರಂತೆ ಕಾಣುತ್ತಿದ್ದರು. ಪ್ರತಿಭಟನೆಗೆಂಬಂತೇ ಧ್ವನಿಯನ್ನು ರೂಪಿಸಿಕೊಂಡಂತಿದ್ದರು. ಚಳುವಳಿ, ಪ್ರತಿಭಟನೆ ಮತ್ತು ರಾಮದಾಸ್ ಒಂದೇ ಘಟಕ. ಎಂದೆಂದೂ ಅವಿಭಾಜ್ಯ.

ರಾಮದಾಸ್ ನಮ್ಮ ಮಧ್ಯದ ಧೀಮಂತ ಹೋರಾಟಗಾರರಾಗಿದ್ದರು. ಅವರ ಬಗ್ಗೆ ಯೋಚಿಸುವಾಗಲೆಲ್ಲಾ ನನಗೆ ಬಸವಣ್ಣನವರ 'ನ್ಯಾಯ, ನಿಷ್ಠುರಿ; ದಾಕ್ಷಿಣ್ಯ ಪರ ನಾನಲ್ಲ' ಎಂಬ ವಚನದ ಸಾಲು ನೆನಪಿಗೆ ಬರುತ್ತದೆ. ಪ್ರಖರವಾದ ರಾಜಕೀಯ, ಸಾಮಾಜಿಕ ಮತ್ತು ಸಾಂಸ್ಕೃತಿಕ ಚಿಂತನೆ ಮತ್ತು ವಿಶ್ಲೇಷಣೆ ರಾಮದಾಸ್ ಅವರ ವಿಶೇಷ ಗುಣವಾಗಿತ್ತು. ಪ್ರಾಮಾಣಿಕತೆ ಮತ್ತು ಧೈರ್ಯವಂತಿಕೆ ಅವರ



ವಿಶೇಷ ಶಕ್ತಿಯಾಗಿತ್ತು. ಸಾಮಾಜಿಕ ಚಳುವಳಿ ಮತ್ತು ಹೋರಾಟದ ಸ್ವರೂಪ ಹೇಗಿರಬೇಕು ಹಾಗೂ ಆ ಚಳುವಳಿ ಮತ್ತು ಹೋರಾಟದಲ್ಲಿ ಭಾಗಿಯಾದವರ ಪಾತ್ರ ಹೇಗಿರಬೇಕು ಎಂಬುದನ್ನು ಅನೇಕ ಯುವಕ, ಯುವತಿಯರಿಗೆ ತೋರಿಸಿಕೊಟ್ಟವರು ರಾಮದಾಸ್. ಮೈಸೂರಿನಲ್ಲಿರಲಿ, ಕರ್ನಾಟಕದ ಬೇರೆ ಬೇರೆ ಭಾಗದಲ್ಲಿರಲಿ ಅನೇಕ ಯುವಕ ಯುವತಿಯರು ರಾಮದಾಸರನ್ನು ತಮ್ಮ ಆದರ್ಶವನ್ನಾಗಿ ಗುರುತಿಸಿಕೊಂಡಿದ್ದು ಈ ಕಾರಣಕ್ಕಾಗಿ.

ರಾಮದಾಸ್ ಅವರನ್ನು ಚಳುವಳಿಗಳ ನೇತಾರ ಎಂದು ಕರೆದ ಗೆಳೆಯರಿದ್ದಾರೆ. ಅದು ಸಮಾಜವಾದಿ ಚಳುವಳಿಯಿರಲಿ, ಭಾಷಾ ಚಳುವಳಿಯಿರಲಿ, ರೈತ ಚಳುವಳಿಯಿರಲಿ, ಜಾತಿ ವಿನಾಶ ಚಳುವಳಿಯಿರಲಿ, ಮಾನವ ಮಂಟಪ ಚಳುವಳಿಯಿರಲಿ ರಾಮದಾಸ್ ಮುಂಚೂಣಿಯಲ್ಲಿರುತ್ತಿದ್ದರು. ಚಳುವಳಿಗೊಂದು ನೈತಿಕ ಸ್ಥೈರ್ಯ ತುಂಬುತ್ತಿದ್ದರು. ಯಾರನ್ನೂ ಮುಂದೂಡಿ ಅಪಾಯಕ್ಕೆ ತಳ್ಳದೆ, ತಾವೇ ಮುಂದಕ್ಕೆ ನುಗ್ಗಿ ಅಪಾಯಕ್ಕೊಳಗಾಗುತ್ತಿದ್ದರು. ಆದರೆ ಅಂಥ ಘಟನೆಗಳಿಂದ ಅವರೆಂದೂ ವಿಚಲಿತರಾಗುತ್ತಿರಲಿಲ್ಲ. ಎದೆಗುಂದುತ್ತಿರಲಿಲ್ಲ. ಅಂಥ ಘಟನೆಗಳಿಂದ ಮರುಸ್ಫೂರ್ತಿ ಪಡೆದು ಮುಂದಿನ ಹೋರಾಟಗಳಿಗೆ ಇನ್ನಷ್ಟು ಹುರುಪಿನಿಂದ ಸಜ್ಜಾಗುತ್ತಿದ್ದರು.

ರಾಮದಾಸ್ ಶಿವಮೊಗ್ಗ ಜಿಲ್ಲೆಯ ಸಾಗರದವರು. ಸಾಗರ ಸಮಾಜವಾದಿ ಚಳುವಳಿಯ ಕೇಂದ್ರ ಸ್ಥಳವಾಗಿತ್ತು. ಕಾಗೋಡು ಸತ್ಯಾಗ್ರಹ, ಲೋಹಿಯಾ ಭೇಟಿ, ಗೋಪಾಲಗೌಡರ ರಾಜಕಾರಣ ಮುಂತಾದವು ರಾಮದಾಸ್ ಅವರ ಮೇಲೆ ಪ್ರಭಾವ ಬೀರಿದ್ದವು. ವಿದ್ಯಾರ್ಥಿ ದೆಸೆಯಲ್ಲೇ ಸಮಾಜವಾದಿ ಚಳುವಳಿಯ ಜೊತೆ ಗುರುತಿಸಿಕೊಂಡಿದ್ದ ರಾಮದಾಸ್ ಮುಂದೆ ಅದೇ ರೀತಿಯ ಮನೋಭಾವ ಹೊಂದಿದ್ದ ಪೂರ್ಣಚಂದ್ರ ತೇಜಸ್ವಿ, ಕಡಿದಾಳ್ ಶಾಮಣ್ಣ, ಶ್ರೀರಾಂ ಮುಂತಾದವರ ಆಪ್ತರಾದರು. ಅವರ ಜೊತೆ ಸೇರಿಕೊಂಡು ಸಮಾಜವಾದಿ ಯುವಜನ ಸಭಾ ಕೆಲಸಗಳಲ್ಲಿ ಓಡಾಡಿದರು. ಜಾತಿ ನಾಶದ ಬಗ್ಗೆ ಕಾರ್ಯಕ್ರಮ ರೂಪಿಸಿದರು. ಅಂತರಜಾತೀಯ ಮದುವೆಗಳನ್ನು ಪ್ರೋತ್ಸಾಹಿಸಿದರು. ಮುಂದೆ 'ಮಾನವ ಮಂಟಪ' ಸ್ಥಾಪಿಸಿ ಅದರ ಮೂಲಕ ಅನೇಕ ಸರಳ ಅಂತರ್ಜಾತಿ ವಿವಾಹಗಳನ್ನು ಮಾಡಿಸಿದರು. ಮಾನವ ಮಂಟಪದ ವಿಸ್ತರಣೆಯ ಬಗ್ಗೆ ತುಂಬಾ ಲವಲವಿಕೆಯಿಂದ ಮಾತಾಡುತ್ತಿದ್ದರು. ಅನೇಕ ಬಾರಿ ಅವರ ಮನೆಯ ಹಜಾರವೇ ಮದುವೆ ಮಂಟಪವಾಗಿಬಿಡುತ್ತಿತ್ತು. ಕರ್ನಾಟಕದ ಯಾವುದೋ ಮೂಲೆಯಿಂದ ಹತಾಶರಾದ ಪ್ರೇಮಿಗಳು ರಾಮದಾಸ್ ಹೆಸರು ಕೇಳಿಕೊಂಡು ಬರುತ್ತಿದ್ದರು. ಅಂಥವರಿಗೆಲ್ಲಾ ರಾಮದಾಸ್ ಆಶಾಕಿರಣವಾಗಿದ್ದರು. ಲಂಕೇಶ್ ಅವರ ಜೊತೆ ಸೇರಿ ಕರ್ನಾಟಕ ಪ್ರಗತಿರಂಗ ಸ್ಥಾಪಿಸಿದರು. ಲಂಕೇಶರ ಜೊತೆ ಇಡೀ ಕರ್ನಾಟಕ ಸುತ್ತಿ ಭಾಷಣ ಬಿಗಿದರು. ರೈತ ಚಳುವಳಿ, ದಲಿತ ಚಳುವಳಿ... ಹೀಗೆ ಚಳುವಳಿಯಿದ್ದಲ್ಲಿ ರಾಮದಾಸ್. ಇದು ರಾಮದಾಸ್ ಅವರಿಗೆ ಒದಗಿಬಂದ ಅಭಿಜಾತ ಗುಣ.

ರಾಮದಾಸ್ ಅದ್ಭುತವಾದ ಮಾತುಗಾರ. ಅವರು ಯಾವುದೇ ವಿಷಯದ ಬಗ್ಗೆ ಮಾತಾಡ ಹೊರಟರೂ ಅತ್ಯಂತ ಪ್ರಭಾವಯುತವಾಗಿ, ಪರಿಣಾಮಕಾರಿಯಾಗಿ ಹಾಗೂ ತಲಸ್ಪರ್ಶಿಯಾಗಿ ಮಾತನಾಡುತ್ತಿದ್ದರು. ಮಾತೆಂದರೆ ಎಂಥಾ ಮಾತು! ಕೇಳಿದವರು ತಲೆತೂಗಬೇಕು, ಮೆಚ್ಚಿ ಅಹುದಹುದೆನಬೇಕು. ರಾಮದಾಸ್ ಅವರನ್ನು ಇಷ್ಟಪಡದವರೂ ಕೂಡ ಅವರ ಮಾತನ್ನು ಇಷ್ಟಪಡುತ್ತಿದ್ದರು. ಸಹಜವಾಗಿ ಆಂಪ್ಲಿಫೈ ಆದ ಅವರ ದನಿ ಎಂಥವರನ್ನೂ ತನ್ನ ಕಡೆ ಆಕರ್ಷಿಸಿಬಿಡುತ್ತಿತ್ತು. ಎಷ್ಟೋ ಸಾರಿ ನಾನೂ ಅವರೂ ಒಂದೇ ವೇದಿಕೆಯನ್ನು ಹಂಚಿಕೊಂಡಾಗ ವ್ಯವಸ್ಥಾಪಕರನ್ನು ಕೇಳಿಕೊಂಡು ನಾನೇ ಮೊದಲು ಮಾತಾಡುವಂತೆ ವ್ಯವಸ್ಥೆ ಮಾಡಿಕೊಂಡದ್ದಿದೆ. ಮೌಖಿಕ ಸಂಪ್ರದಾಯದ ಎಲ್ಲಾ ಸಂಪತ್ತನ್ನು ಸೂರೆಗೊಳ್ಳುವಂತೆ ಮಾತನಾಡುತ್ತಿದ್ದ ರಾಮದಾಸ್ ಅವರನ್ನು ಕಂಡಾಗಲೆಲ್ಲಾ ಮೆಚ್ಚುಗೆ ಮತ್ತು ಅಸೂಯೆ ಎರಡೂ ಆಗುತ್ತಿದ್ದವು. ನಮ್ಮ ಮಧ್ಯದ ಬಹು ದೊಡ್ಡ ಮೌಖಿಕ ಬೋಧಕ. ಅದು ಸಾರ್ವಜನಿಕ ಸಮಾರಂಭವಿರಲಿ ಅಥವಾ ವೈಯಕ್ತಿಕ ಮಾತುಕತೆಯಿರಲಿ, ಮಾತಿನ ಪರಿಣಾಮದಲ್ಲಿ ಕಿಂಚಿತ್ತೂ ವ್ಯತ್ಯಾಸವಿರುತ್ತಿರಲಿಲ್ಲ. ಮಾತೆಂದರೆ ಅವರಿಗೆ ಒಂದು ರೀತಿಯ ಸೆಲೆಬ್ರೇಷನ್.

ರಾಮದಾಸ್ ನಿಷ್ಠುರಿ. ಕೆಲವೊಮ್ಮೆ ಅತಿ ಎಂಬುವಷ್ಟೇ ನಿಷ್ಠುರಿ. ಈ ನಿಷ್ಠುರತೆ ಮತ್ತು ಪ್ರಾಮಾಣಿಕತೆಯೇ ಅವರಿಗೆ ಒಂದು ನೈತಿಕ ಧೈರ್ಯವನ್ನು ತಂದುಕೊಟ್ಟಿದ್ದವು. ಈ ನಿಷ್ಠುರತೆಯನ್ನು ಬಹು ಹತ್ತಿರದಿಂದ ಅನುಭವಿಸಿರುವವರು ಅವರ ಕುಟುಂಬ ವರ್ಗದವರು. ಅದನ್ನು ಸಹಿಸಿಕೊಂಡು ರಾಮದಾಸ್ ಅವರ ಸಾರ್ವಜನಿಕ ಜೀವನದ ಹೋರಾಟಕ್ಕೆ ಪೂರ್ಣ ಬೆಂಬಲ ನೀಡಿದವರು ಅವರು. ರಾಮದಾಸ್ ಸ್ನೇಹಿತರಿಗೆ ಅವರ ನಿಷ್ಠುರತೆಯ ಬಗ್ಗೆ ಯಾವಾಗಲೂ ಎಚ್ಚರ ಇರುತ್ತಿತ್ತು. ತನ್ನ ಸಂಬಂಧಕ್ಕೆ ಬಂದ ಯಾರೇ ಆಗಲಿ ಈ ಎಚ್ಚರವನ್ನು ಕಾಪಾಡಿಕೊಳ್ಳಬೇಕಾದ ಅನಿವಾರ್ಯತೆಯನ್ನು ರಾಮದಾಸ್ ಸೃಷ್ಟಿಸುತ್ತಿದ್ದರು. ಒಳಗೊಂದು, ಹೊರಗೊಂದು ವ್ಯವಹಾರಗಳನ್ನು ಸೃಷ್ಟಿಸಿಕೊಂಡವರು ರಾಮದಾಸರ ಚಾಟಿ ನಾಲಿಗೆಯಿಂದ ತಪ್ಪಿಸಿಕೊಳ್ಳಲು ಸಾಧ್ಯವೇ ಇರಲಿಲ್ಲ. ಅವರ ಅತ್ಯಂತ ಆತ್ಮೀಯರೂ ಕೂಡ ರಾಮದಾಸ್ ಅವರ ಈ ಚಾಟಿಯಿಂದ ಬಳಲಿದ್ದಾರೆ.

ರಾಮದಾಸ್ ಉಪನ್ಯಾಸಕರಾಗಿ ಪಾಠ ಮಾಡಿದ್ದು ಮೈಸೂರು ವಿಶ್ವವಿದ್ಯಾಲಯದ ಯುವರಾಜ, ಮಹಾರಾಜಾ ಕಾಲೇಜುಗಳಲ್ಲಿ. ಅವರು ವಿಶ್ವವಿದ್ಯಾಲಯದ ಸೇವೆಯಲ್ಲಿದ್ದಷ್ಟೂ ಕಾಲ ವಿಶ್ವವಿದ್ಯಾಲಯದ ಯಾವುದೇ ಅನ್ಯಾಯಗಳನ್ನು ನಿರ್ಭೀತಿಯಿಂದ ಖಂಡಿಸುತ್ತಿದ್ದರು. ತಮ್ಮ ಸೇವಾ ನಿಯಮಗಳಿಗೆ ಅದರಿಂದ ತೊಂದರೆ ಬರಬಹುದೆಂಬುದರ ಬಗ್ಗೆ ಅವರಿಗೆ ಅಳುಕೇ ಇರಲಿಲ್ಲ. ಅಭಿವ್ಯಕ್ತಿ ಸ್ವಾತಂತ್ರ್ಯ, ಪ್ರಜಾಪ್ರಭುತ್ವದ ನೀತಿಯ ಬಗ್ಗೆ ಅಪಾರ ಗೌರವ ಹೊಂದಿದ್ದ

ರಾಮದಾಸ್ ಅದನ್ನು ನಿರ್ಭೀತಿಯಿಂದ ಪ್ರದರ್ಶಿಸುತ್ತಿದ್ದುದರ ಜೊತೆಗೆ ಅವುಗಳ ಸಂರಕ್ಷಣೆಗೂ ಮುಂದಾಗುತ್ತಿದ್ದರು. ಮೈಸೂರಿನ ಯಾವುದೇ ಜನಪರ ಚಳುವಳಿ ರೂಪುಗೊಳ್ಳುತ್ತಿದ್ದುದೇ ಅವರ ಮನೆಯಲ್ಲಿ. ಅವರಿಂದ ಪಾಠ ಕಲಿತ ಅನೇಕ ವಿದ್ಯಾರ್ಥಿ, ವಿದ್ಯಾರ್ಥಿನಿಯರು ಸ್ವಲ್ಪಮಟ್ಟಿಗಾದರೂ ಅವರ ಈ ಧೀಮಂತ ಗುಣಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳಲು ಮುಂದಾಗಿರುವುದು ಸಮಾಧಾನಕರ ಅಂಶ. ಆದರೆ, ನನ್ನ ದೃಷ್ಟಿಯಲ್ಲಿ ರಾಮದಾಸ್ ತರಗತಿಗಳಲ್ಲಿ ಬೋಧಿಸಿದುದಕ್ಕಿಂತ ತರಗತಿಯಿಂದ ಹೊರಗೆ ಬೋಧಿಸಿದ್ದೇ ಹೆಚ್ಚು ಮತ್ತು ಹೆಚ್ಚು ಅರ್ಥಪೂರ್ಣ ಕೂಡ. ಆ ದೃಷ್ಟಿಯಿಂದ ಅವರದು ಲೋಕಶಿಕ್ಷಣ. ಅವರೊಬ್ಬ ಲೋಕ ಗುರು.

ರಾಮದಾಸ್ ಅವರಿಗೆ ವಿಶಿಷ್ಟವಾದ ಸಂವೇದನಾ ಗುಣ ಇತ್ತು. ಅವರು ಯೋಚಿಸುತ್ತಿದ್ದ ರೀತಿಯೇ ಬೇರೆಯವರಿಗಿಂತ ಭಿನ್ನವಾಗಿರುತ್ತಿತ್ತು. ಅವರ ಅಭಿವ್ಯಕ್ತಿಯ ಸ್ವರೂಪವೂ ಬೇರೆಯವರಿಗಿಂತ ಭಿನ್ನವಾಗಿರುತ್ತಿತ್ತು. ಆದರೆ ಅವರು ತಮ್ಮ ಚಿಂತನೆಗಳನ್ನು ಬರೆಹಕ್ಕೆ ಇಳಿಸಿದ್ದು ಕಡಿಮೆ. ಬರೆದದ್ದು ಕಡಿಮೆಯಾದರೂ ಅತ್ಯಂತ ಆಕರ್ಷಕ ಬರವಣಿಗೆಯ ಶೈಲಿ ಅವರಿಗೆ ಸಿದ್ಧಿಸಿತ್ತು. ಆದರೆ ಅವರಿಗೆ ಮೌಖಿಕ ಅಭಿವ್ಯಕ್ತಿಯ ಬಗೆಗೆ ಇದ್ದಷ್ಟು ಮೋಹ ಮತ್ತು ಆಸಕ್ತಿ ಬರವಣಿಗೆಯ ಅಭಿವ್ಯಕ್ತಿಯ ಬಗ್ಗೆ ಇರಲಿಲ್ಲ. ಅವರ ಭಾಷಣಗಳು ದಾಖಲಾಗಿದ್ದರೆ, ಎಪ್ಪತ್ತರ ದಶಕದಿಂದ ಹಿಡಿದು ಇಂದಿನವರೆಗೆ ಕರ್ನಾಟಕದಲ್ಲಿ ನಡೆದ ಎಲ್ಲಾ ಜನಪರ ಚಳುವಳಿಗಳ ಒಂದು ಸಮಗ್ರ ಇತಿಹಾಸವನ್ನೇ ಕಟ್ಟಿಕೊಡುತ್ತಿದ್ದವು. ನಮಗೆ ದುರದೃಷ್ಟವಶಾತ್ ದಾಖಲಾತಿಯ ಬಗ್ಗೆ ಅಂಥ ಕಾಳಜಿಯಿಲ್ಲ. ಹಾಗಾಗಿ ರಾಮದಾಸ್ ಅವರ ಚಿಂತನೆಯ ಬಹು ಅಮೂಲ್ಯ ಅಂಶಗಳು ಮುಂದಿನ ಯುವಜನಾಂಗಕ್ಕೆ ದಕ್ಕದೇ ಹೋದವು. ಈಗಲಾದರೂ ಯಾರಾದರೂ ಮುತುವರ್ಜಿ ವಹಿಸಿ ಅವರ ಚಿಂತನೆಗಳನ್ನು ದಾಖಲಿಸಿದರೆ ಒಳ್ಳೆಯದು.

ಸಮಾಜದ ಆರೋಗ್ಯದ ಬಗ್ಗೆ ಸದಾ ಚಿಂತಿಸುತ್ತಿದ್ದ ರಾಮದಾಸ ತಮ್ಮ ಆರೋಗ್ಯದ ಬಗ್ಗೆ ಗಮನಕೊಟ್ಟಿದ್ದು ಕಡಿಮೆ. ನಮ್ಮ ಅನೇಕ ಪ್ರಮುಖ ಚಿಂತಕರು, ಲೇಖಕರು ತಮ್ಮ ಆರೋಗ್ಯದ ಬಗ್ಗೆ ನಿಗಾವಹಿಸಿದ್ದು ಕಡಿಮೆಯೇ.



ಮೈಸೂರಿನಲ್ಲಿ ನವಕರ್ನಾಟಕ ಪುಸ್ತಕ ಪ್ರದರ್ಶನವನ್ನು ಪ್ರೊ॥ ರಾಮದಾಸ್ ಉದ್ಘಾಟಿಸಿದ್ದು

ಎಷ್ಟೋ ಬಾರಿ ಅವರ ಉದಾಸೀನತೆಯೇ ಅವರಿಗೆ ಮುಳುವಾದದ್ದು ಹೆಚ್ಚು. ಲಂಕೇಶರ ನಿಧನ ರಾಮದಾಸರನ್ನು ವಿಚಲಿತಗೊಳಿಸಿತ್ತು. ಆಗ ಅವರಲ್ಲಿ ಕಂಡುಬಂದ ಹೃದಯ ಸಂಬಂಧಿ ಖಾಯಿಲೆಯ ಬಗ್ಗೆ ಅವರು ಹೆಚ್ಚು ಮುತುವರ್ಜಿ ವಹಿಸಲೇ ಇಲ್ಲ. ಅನಂತರ ಪೂರ್ಣಚಂದ್ರ ತೇಜಸ್ವಿಯವರ ಹಠಾತ್ ನಿಧನ ಅವರನ್ನು ಜರ್ಝರಿತವಾಗಿಸಿತು. ತೇಜಸ್ವಿಯವರ ಜೊತೆಗಿನ ಅವರ ಒಡನಾಟ ಸ್ನೇಹದಿಂದಾಚೆಗಿನ ಒಂದು ದಿವ್ಯಾನುಭೂತಿಯದು. ತೇಜಸ್ವಿಯವರ ನಿಧನದ ಆಘಾತದಿಂದ ಅವರು ಚೇತರಿಸಿಕೊಳ್ಳಲೇ ಇಲ್ಲ. ಅಲ್ಲಿಯವರೆಗೆ ಅವರು ಅದುಮಿಟ್ಟುಕೊಂಡು ಗೆಲುವು ಸಾಧಿಸಿಕೊಂಡಿದ್ದ ದೇಹದ ವ್ಯಾಧಿಗಳೆಲ್ಲಾ ಇದ್ದಕ್ಕಿದ್ದಂತೆ ಅವರನ್ನು ಅಮರಿಕೊಂಡವು. ಆಗ ಅವರಿಗೆ ಸಾವಿನ ಭಯ ಕಾಡತೊಡಗಿತು. ನನಗೆ ಸಾವಿಗಿಂತ ಸಾವಿನ ಭಯವೇ ಹೆಚ್ಚು ಕಾಡುತ್ತದೆ ಎಂದು ತಮ್ಮ ಮಾಮೂಲು ನಗೆಚಾಟಿಯಲ್ಲೇ ಅವರು ಹೇಳುತ್ತಿದ್ದರು. ಕಡೆಗೂ ಜೂನ್ 19ರಂದು ಅವರು ಸಾವಿನ ಭಯವನ್ನು ಮೀರಿ ಸಾವಿನ ಮನೆಗೆ ನಡೆದುಬಿಟ್ಟರು.

ರಾಮದಾಸ್ ನಿಧನದಿಂದ ಸಾಮಾಜಿಕ ಹೋರಾಟದ ಬಹುದೊಡ್ಡ ದನಿಯೊಂದು ಸ್ಥಗಿತವಾಗಿದೆ, ನಿಜ; ಆದರೆ ರಾಮದಾಸ್ ಅವರು ಹುಟ್ಟುಹಾಕಿದ ಸಾವಿರಾರು ದನಿಗಳು ಇಂದು ಕರ್ನಾಟಕದಾದ್ಯಂತ ಇವೆ. ಆ ದನಿಗಳೆಲ್ಲಾ ಇಂದು ರಾಮದಾಸ್ ಪಡೆದಿದ್ದ ನಿಷ್ಠುರತೆ, ಪ್ರಾಮಾಣಿಕತೆ ಮತ್ತು ಧೈರ್ಯಗಳನ್ನು ಸಾಂದ್ರಗೊಳಿಸಿಕೊಂಡು ಅವರಂತೆ ಅಭಿವ್ಯಕ್ತಿಸಬೇಕಾಗಿದೆ. ಅವರು ಕನಸುಕಂಡ 'ಮಾನವ ಮಂಟಪ'ದ ಚಟುವಟಿಕೆಗಳಿಗೆ ವ್ಯಾಪಕ ಪ್ರಚಾರ ಕೊಡಬೇಕಿದೆ. ಇಷ್ಟಾದರೂ ರಾಮದಾಸ್ ನಿಧನ ಪ್ರಗತಿಪರ ಹೋರಾಟದ ಹಾದಿಯಲ್ಲಿ ಒಂದು ದೊಡ್ಡ ಶೂನ್ಯವನ್ನು ಸೃಷ್ಟಿಸಿದೆ ಎಂಬುದನ್ನು ಒಪ್ಪಿಕೊಳ್ಳಲೇಬೇಕು.

ಅವರನ್ನು ನೆನಪಿಸಿಕೊಳ್ಳುವಾಗಲೆಲ್ಲಾ ವಿ.ಸೀ.ಯವರ ಕವನದ ಸಾಲುಗಳು ನನ್ನ ಕಣ್ಣಮುಂದೆ ಮತ್ತೆ ಮತ್ತೆ ಬರುತ್ತಲೇ ಇರುತ್ತವೆ. ಆ ಸಾಲುಗಳು ಹೀಗಿವೆ :

ಮಣಿಯದಿಹ ಮನವೊಂದು ಸಾಧಿಸುವ ಹಟವೊಂದು
ನಿಜದ ನೇರಕೆ ನಡೆದ ನಿಶ್ಚಲತೆಯೊಂದು
ಅನ್ಯಾಯಕೆಂದೆಂದು ಬಾಗದೆಚ್ಚರವೊಂದು
ಮರುಕಕ್ಕೆ ಪ್ರೇಮಕ್ಕೆ ಚಿರತೆರೆದ ಎದೆಯೊಂದು.

ಪ್ರೊ. ಕೆ. ರಾಮದಾಸ್ ಹಾಗಿದ್ದರು.

**ಲಿಂಗದೇವರು ಹಳೆಮನೆ**
ಎಲ್-೭೮, ಮೇಲ್ಮಹಡಿ, ೧ನೇ ಫೇಸ್, ಕುವೆಂಪುನಗರ, ಮೈಸೂರು-೨೩

# ಮಾತೃಭಾಷೆಯಾಗಿ ಕನ್ನಡ ಬೋಧನೆ ಮತ್ತು ವ್ಯಾಕರಣ

ಸಾಮಾನ್ಯವಾಗಿ ವ್ಯಾಕರಣವು ಒಂದು ಕಾಲಾವಧಿಯಲ್ಲಿ ಬಳಕೆಯಲ್ಲಿರುವ ಭಾಷೆಯ ರಚನೆಯನ್ನು ವಿವರಿಸುತ್ತದೆ. ಅದು ಭಾಷೆಯ ಧ್ವನಿ, ಪದಪುಂಜಗಳು, ವಾಕ್ಯಗಳು ಹಾಗೂ ಅವುಗಳ ಆಂತರಿಕ ಸಂಬಂಧಗಳ ವ್ಯವಸ್ಥೆಯ ವಿಶ್ಲೇಷಣೆ ಮತ್ತು ವಿವರಣೆಯಾಗಿರುತ್ತದೆ. ಇಂದು ನಾವು ಕನ್ನಡಕ್ಕಾಗಿ ಸಿದ್ಧಪಡಿಸಿಕೊಂಡಿರುವ ಹಾಗೂ ಬೋಧನೆಗೋಸ್ಕರ ಬಳಸುತ್ತಿರುವ ಬಹುಪಾಲು ಕನ್ನಡ ವ್ಯಾಕರಣಗಳು ಕನ್ನಡ ರಚನೆಯನ್ನು ಹಿಡಿದಿಡಲು ಸಂಸ್ಕೃತ, ಆಂಗ್ಲ ಮುಂತಾದ ವ್ಯಾಕರಣ ಪರಂಪರೆಗಳ ಚೌಕಟ್ಟನ್ನು ಬಳಸುತ್ತವೆ. ಆದುದರಿಂದ ಅವಕ್ಕೆ ಕನ್ನಡದ ಜಾಯಮಾನವನ್ನು ವಿವರಿಸಲು ಆಗುತ್ತಿಲ್ಲ. ಹೀಗಾಗಿ, ಇತರ ಭಾಷೆಗಳ ಕನ್ನಡಿಯಲ್ಲಿ ಕನ್ನಡವನ್ನು ನೋಡಿ, ಕನ್ನಡಕ್ಕೆ ಅಗತ್ಯವಿಲ್ಲದ ವ್ಯಾಕರಣ ಪರಿಕಲ್ಪನೆಗಳನ್ನು ಒದಗಿಸಿ ಅದನ್ನು ವಿರೂಪಗೊಳಿಸಿರುವುದು ಕಂಡುಬರುತ್ತದೆ ಎಂದು ಡಾ|| ಡಿ. ಎನ್. ಶಂಕರಭಟ್ ಅವರು ತಮ್ಮ 'ಕನ್ನಡ ಶಬ್ದ ರಚನೆ' ಮತ್ತು 'ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ' ಎಂಬ ಪುಸ್ತಕಗಳಲ್ಲಿ ಸವಿಸ್ತಾರವಾಗಿ ಚರ್ಚಿಸಿದ್ದಾರೆ.

ವ್ಯಾಕರಣ ನಿಯಮಗಳನ್ನು ನಿಯಂತ್ರಿಸಬೇಕು ಎಂದು ಹೇಳುವುದೂ ಸರಿಯಲ್ಲ. ಕಾಲಕ್ರಮದಲ್ಲಿ ವ್ಯಾಕರಣವು ಸೂತ್ರೀಕರಿಸಿದ ಭಾಷೆ ಗ್ರಂಥಸ್ಥವಾಗಿಯೇ ಉಳಿದುಬಿಡುತ್ತದೆ. ಬಳಕೆಯಲ್ಲಿರುವ ಭಾಷೆಯ ರೂಪಗಳಿಂದ ಬೇರೆ ರೂಪಗಳು ರಚನೆಗೊಂಡು ಸೂತ್ರೀಕೃತವಾಗಬೇಕು ಎಂಬುದಕ್ಕೆ ಭಾರತೀಯ ಭಾಷೆಗಳಲ್ಲಿಯೇ ಉದಾಹರಣೆಗಳಿವೆ. ಇದು ವ್ಯಾಕರಣಕ್ಕೆ ಸಂಬಂಧಿಸಿದಂತೆ ಒಂದು ಆಯಾಮವಾದರೆ ಇದಕ್ಕೆ ಬೋಧನೆಯ ಇನ್ನೊಂದು ಆಯಾಮವೂ ಇದೆ.

ಬಳಕೆಯಲ್ಲಿರುವ ಭಾಷೆಯು ಕೇವಲ ಬಳಕೆಯ ಕಾರಣಗಳಿಂದಾಗಿಯೇ ಅಲ್ಲದೆ ತನ್ನ ಮೇಲೆ ಉಂಟಾಗುವ ಪ್ರಭಾವ ಇತ್ಯಾದಿಗಳಿಂದಾಗಿ ತಕ್ಕಂತೆ ಬದಲಾಗುತ್ತಿರುತ್ತದೆ. ಆ ಬದಲಾವಣೆಗಳೂ ಮನಬಂದಂತೆ ಆಗುವುದಿಲ್ಲ. ಕ್ರಮವಾಗಿಯೇ ಆಗುತ್ತಿರುತ್ತವೆ. ಉದಾಹರಣೆಗೆ, ಪ > ಹ, ಳ, ಲ್ > ಳ, ರ, ಲ್ > ರ ಎಂಬ ಬದಲಾವಣೆಗಳನ್ನು ನೋಡಬಹುದು. ಎಂದೋ ಸೂತ್ರೀಕರಿಸಿದ ನಿಯಮಗಳ ಪ್ರಕಾರ ಇಂದು ಕನ್ನಡದ ಅಲ್ಪಪ್ರಾಣ ಮತ್ತು ಮಹಾಪ್ರಾಣಗಳ ಬಳಕೆಯಲ್ಲಿ (ಉದಾಹರಣೆಗೆ ಕತೆ-ಕಥೆ) ಆಗುತ್ತಿರುವ ವ್ಯತ್ಯಯವನ್ನು ದೋಷಗಳು ಎಂದು ಹೇಳುವುದು ಸರಿ ಕಾಣದು. ಎಲ್ಲೆಲ್ಲಿ ಅಲ್ಪಪ್ರಾಣ ಮತ್ತು ಮಹಾಪ್ರಾಣಗಳ ಅದಲುಬದಲು ಬಳಕೆಯಾದಾಗ ಅರ್ಥವ್ಯತ್ಯಾಸಕ್ಕೆ ಎಡೆಯಾಗುವುದಿಲ್ಲವೋ ಅಲ್ಲಲ್ಲಿ ಭಾಷಾದೋಷ ಆಗಿದೆ ಎನ್ನುವಂತಿಲ್ಲ. ಅದು ಭಾಷೆಯಲ್ಲಿ ಆಗುತ್ತಿರುವ ಬದಲಾವಣೆಗಳ ದಿಕ್ಸೂಚಿ.

ಈಗ ನಮ್ಮ ಪರಿಸ್ಥಿತಿಯಲ್ಲಿ ವ್ಯಾಕರಣಗಳಿಗೊಂದು ಪರಂಪರೆಯಿರುವಂತೆ, ವ್ಯಾಕರಣ ಬೋಧನೆಗೂ ಒಂದು ಪರಂಪರೆಯಿದೆ. ಅದು ಅನ್ಯಭಾಷಾ ಕಲಿಕೆಯ ಪರಂಪರೆ. ಸಂಸ್ಕೃತ ದಿನಬಳಕೆಯ ಆಡುನುಡಿಯಲ್ಲ. ಅದನ್ನು ದಿನನಿತ್ಯದ ವ್ಯವಹಾರದಲ್ಲಿ ಬಳಸುವುದಿಲ್ಲ. ಆ ಭಾಷೆಯನ್ನು, ಅದರ ಬಳಕೆಯನ್ನು ತಿಳಿದುಕೊಳ್ಳಲು, ವ್ಯಾಕರಣದ ನಿಯಮಗಳನ್ನು ತಿಳಿದುಕೊಳ್ಳುವುದು ಅಗತ್ಯವಾಗಬಹುದು. ನಿಯಮವೆಂದರೆ ಅದನ್ನು ಬರೇ ತಿಳಿದರೆ ಸಾಲದು, ಅಗತ್ಯಬಿದ್ದಾಗ ಅದನ್ನು ನೆನಪಿನಿಂದ ತೆಗೆದು ಬಳಸಲು ಬರಬೇಕು. ಆದುದರಿಂದ ಸಂಸ್ಕೃತ ವ್ಯಾಕರಣದ ನಿಯಮಗಳನ್ನು ಕಂಠಪಾಠ ಮಾಡುವ ಅಭ್ಯಾಸ ಬೆಳೆದುಬಂದಿತು. ಹಾಗೆಯೆ ಆಂಗ್ಲ ಭಾಷೆಯ ಕಲಿಕೆಗೆ ನಮ್ಮಲ್ಲಿ ಸುಮಾರು ೧೦೦ಕ್ಕೂ ಹೆಚ್ಚು ವರ್ಷಗಳ ಇತಿಹಾಸವಿದೆ. ಅದನ್ನು ಮೊದಲು ಬೋಧಿಸಿದವರು ಆಂಗ್ಲರು. ಅನಂತರ ಅವರಿಂದ ಈ ಭಾಷೆಯನ್ನು ಕಲಿತ ಭಾರತೀಯರು ಇತರ ಭಾರತೀಯ ಭಾಷಿಗರಿಗೆ ಬೋಧಿಸಿದರು.

ಭಾರತೀಯರು ತಮ್ಮ ಮಾತೃಭಾಷೆಯ ಕಲಿಕೆಯ ಜೊತೆಗೆ ಆಂಗ್ಲಭಾಷೆಯನ್ನೂ ಕಲಿತರು. ಆಂಗ್ಲಭಾಷೆಯು ಅವರ ಮಾತೃಭಾಷೆಯಾಗಿರಲಿಲ್ಲ. ಅದು ಅವರ ದೈನಂದಿನ ಅಗತ್ಯಗಳನ್ನು ಪೂರೈಸಿಕೊಳ್ಳಲು ಬಳಸಿಕೊಳ್ಳಬೇಕಾದ ಭಾಷೆಯಾಗಿರಲಿಲ್ಲ. ಇಂತಹ ಸಂದರ್ಭದಲ್ಲಿ, ವ್ಯಾಪಕವಾಗಿ ತಮ್ಮ ಪರಿಸರದಲ್ಲಿ ಬಳಕೆಯಲ್ಲಿ ಇಲ್ಲದೆ ಕೆಲವೇ ಕೆಲವು ಅಂದರೆ – ಆಡಳಿತ, ನ್ಯಾಯಾಂಗ, ಮುಂತಾದ ಮಿತ ಆವರಣಗಳಲ್ಲಿ ಬಳಕೆಯಲ್ಲಿದ್ದ ಭಾಷೆಯನ್ನು ಬೋಧಿಸಲು ಮತ್ತು ಕಲಿಯಲು ಆಂಗ್ಲ ಭಾಷೆಯ ವ್ಯಾಕರಣದ ಮೊರೆಹೋಗಬೇಕಾಯಿತು. ಈ ಸಂದರ್ಭದಲ್ಲಿ, ವ್ಯಾಕರಣ ಬೋಧನೆ ಭಾಷಾ ಬೋಧನೆಯ ಅಂಗವಾಗಿತ್ತು. ಬಹುಶಃ ಅದೇ ಹಿನ್ನೆಲೆಯನ್ನು ಅನುಸರಿಸಿ ಮಾತೃಭಾಷಾ ಬೋಧನೆಯಲ್ಲಿಯೂ ಭಾಷಾ ಬೋಧನೆಯ ಅಂಗವಾಗಿ ವ್ಯಾಕರಣವನ್ನು ಕಲಿಸುವ ಪರಿಪಾಠ ಬೆಳೆದುಬಂದಿದೆ ಎನ್ನಿಸುತ್ತದೆ. ಇದು ನಮ್ಮ ವ್ಯಾಕರಣ ಬೋಧನೆಯ ಪರಂಪರೆ.




**ವ್ಯಾಕರಣದ ಬೋಧನೆ ಭಾಷಾ ಬೋಧನೆ ಅಲ್ಲ, ಅದು ಭಾಷೆಯ ಕಲಿಕೆಗೆ ಸಹಾಯ ಮಾಡಬಹುದು ಅಷ್ಟೆ. ಭಾಷೆಯನ್ನು, ಅದರ ಬಳಕೆಯನ್ನು ವಿದ್ಯಾರ್ಥಿಗಳು ಕಲಿಯಬೇಕೇ ಹೊರತು ಅದರ ವ್ಯಾಕರಣ ನಿಯಮಗಳು ಅಥವಾ ನಿಯಮಗಳ ಉದಾಹರಣೆಗಳನ್ನಲ್ಲ. ಸಾಂಪ್ರದಾಯಿಕವಾಗಿಯಾಗಲಿ, ಕ್ರಿಯಾತ್ಮಕವಾಗಿಯಾಗಲಿ, ಕಲಿಸಿದ ವ್ಯಾಕರಣದಲ್ಲಿ ಯಾವ ಬದಲಾವಣೆಯೂ ಕಂಡುಬರಲಿಲ್ಲ. ಹೀಗೆ ವ್ಯಾಕರಣ ಕಲಿತವರ ಭಾಷಾ ಬಳಕೆಯಲ್ಲೂ ಯಾವ ಬದಲಾವಣೆಯೂ ಆಗಲಿಲ್ಲ ಎನ್ನಿಸುತ್ತದೆ. ಎಲ್ಲ ಸಂದರ್ಭಗಳಲ್ಲಿಯೂ ಸೂತ್ರ ಮತ್ತು ಉದಾಹರಣೆಗೆ ಒತ್ತುಕೊಟ್ಟಿದುದರಿಂದಲೂ ಅವಕ್ಕೂ ಭಾಷೆಯ ವ್ಯಾವಹಾರಿಕ ಬಳಕೆಗೂ ಸಂಪರ್ಕವು ಏರ್ಪಡದೆ ಇದ್ದುದರಿಂದಲೂ, ಅದರ ಯಾವುದೇ ಪ್ರಾಯೋಗಿಕ ಉಪಯೋಗ ಕಲಿಯುವವರಿಗೆ ಕಾಣದೆ ಇದ್ದುದರಿಂದ ವ್ಯಾಕರಣ ಬೋಧನೆ ಭಾಷಾ ಬೋಧನೆಯಿಂದ ಪ್ರತ್ಯೇಕವಾಗಿಯೇ ಉಳಿಯಿತು. ವಿದ್ಯಾರ್ಥಿಗಳಿಗೆ ಅರಗದ ಕಬ್ಬಿಣದ ಕಡಲೆಯಾಯಿತು. ಅಧ್ಯಾಪಕರಿಗೆ ಕಿರಿಕಿರಿ ಹಾಗೂ ತರ್ಕದ ವಿಷಯವೂ ಆಯಿತು.**

**ಡಾ|| ಭ. ಮಲ್ಲಿಕಾರ್ಜುನ**

ಈಗ ಮಾತೃಭಾಷಾ ಕಲಿಕೆಗೆ ಸಂಬಂಧಪಟ್ಟ ಕೆಲವು ವಿಷಯಗಳನ್ನು ಚರ್ಚೆ ಮಾಡುವುದು ಒಳಿತು. ಮಕ್ಕಳು ತಮ್ಮ ಒಳಗ ಮತ್ತು ಪರಿಸರದಲ್ಲಿ ನಡೆಸುವ ಮಾತುಕತೆಯ ಮೂಲಕ ಅತ್ಯಂತ ಸಹಜವಾಗಿ ಬಳಕೆಯಲ್ಲಿರುವ ಮಾತೃಭಾಷೆಯನ್ನು ಮತ್ತು ಅದರ ಬಳಕೆಯ ಅಲಿಖಿತ ನಿಯಮಗಳನ್ನು ತಮ್ಮ ಬೆಳವಣಿಗೆಯ ಅಂಗವಾಗಿ ಅಂತರ್ಗತ ಮಾಡಿಕೊಳ್ಳುತ್ತಾರೆ. ಇದರಲ್ಲಿ ಯಾವ ಅನಾನುಕೂಲವೂ ಇಲ್ಲ ಇಲ್ಲಿ ಭಾಷಾ ಕಲಿಕೆಯು, ಮಗು ಸಾಮಾಜಿಕವಾಗುವ ಕ್ರಿಯೆಯ ಅಂದರೆ ಸಮಾಜದ ಒಂದು ಭಾಗವಾಗುವ ಕ್ರಿಯೆಯ ಅಂಗವಾಗಿದೆ. ಬೋಧನೆ ಇರುವುದಿಲ್ಲ, ಕಲಿಕೆ ಮಾತ್ರ ನಡೆಯುತ್ತಿರುತ್ತದೆ. ಇದು ಕಲಿಯುತ್ತಿದ್ದೇನೆ ಎಂಬ ಅರಿವು ಇಲ್ಲದೆ ನಡೆಯುತ್ತಿರುವ ಕ್ರಿಯೆಯಾಗಿದೆ. ಯಾರೂ ಸಾಮಾಜಿಕ ಪರಿಸರದಲ್ಲಿ ವ್ಯಾಕರಣವನ್ನಿಟ್ಟುಕೊಂಡು ಮಾತೃಭಾಷೆಯನ್ನು ಹೇಳಿಕೊಡುವುದಿಲ್ಲ. ಶಾಲೆಗೆ ಬರುವ, ಅಂದರೆ, ಮಗು ವಿದ್ಯಾರ್ಥಿಯಾಗುವಾಗ ೫-೬ ವರ್ಷಗಳ ವಯಸ್ಸಿನ ಹೊತ್ತಿಗೆ ಆಡುಮಾತಿನ ರೂಪಗಳ ಬಳಕೆಯ ಪರಿಚಯ ಚೆನ್ನಾಗಿಯೇ ಇರುತ್ತದೆ. ಕನ್ನಡದಲ್ಲಿ ಸಹಜವಾಗಿ ಮಾತನಾಡಿದರೆ ಅರ್ಥವಾಗುವುದು ಮತ್ತು ತಿಳಿದ ವಿಷಯಗಳ ಬಗ್ಗೆ ಪ್ರಶ್ನಿಸಿದರೆ ಉತ್ತರಿಸಲು ಬರುತ್ತಿರುತ್ತದೆ. ಅಕಸ್ಮಾತ್ ಉತ್ತರಿಸಲಿಲ್ಲ ಎಂದರೆ ಅದಕ್ಕೆ ಭಾಷೆಯ ಅರಿವಿನ ಕೊರತೆಯಲ್ಲದೆ ಬೇರೇನೋ ಕೊರತೆ ಇರುತ್ತದೆ ಎಂದು ಹೇಳಬಹುದು.

ಶಾಲೆಗಳಲ್ಲಿ ಭಾಷಾ ಕಲಿಕೆಯ ಪ್ರಧಾನ ಸ್ರೋತ ವಾಕ್ಯಬಂಧಗಳನ್ನು ಅರ್ಥಮಾಡಿಕೊಂಡು, ಪದಸಂಪತ್ತಿಯನ್ನು ವೃದ್ಧಿಗೊಳಿಸಿಕೊಂಡು, ಉಚ್ಚಾರಣೆಯನ್ನು ಸ್ಪಷ್ಟಗೊಳಿಸಿಕೊಂಡು ಭಾಷೆಯನ್ನು ದೋಷರಹಿತವಾಗಿ, ನಿಖರವಾಗಿ ಮತ್ತು ಪರಿಣಾಮಕಾರಿಯಾಗಿ ಬಳಸುವ ಸಾಮರ್ಥ್ಯವನ್ನು ಹೆಚ್ಚಿಸುವುದು ಇತ್ಯಾದಿ ಎಂದು ಪಠ್ಯಕ್ರಮ ಹೇಳುತ್ತದೆ.

ನಾವು ಮಕ್ಕಳ ಭಾಷಾ ಕಲಿಕೆಯನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ, ಶಾಲೆಗೆ ಬರಲಾರಂಭಿಸಿದ ನಂತರ ಅಲ್ಲಿ ಕಲಿಯಬೇಕಾಗಿರುವ ಭಾಷಾ ಅಂಶಗಳು – ಭಾಷೆಯ ಶಿಷ್ಟರೂಪಗಳು, ಆಡುಮಾತಿನ ಬರಹ ರೂಪ, ಹೆಚ್ಚಿನ ಪದಸಂಪತ್ತು, ಮಾತೃಭಾಷೆಯನ್ನು ಔಪಚಾರಿಕ ಸಂದರ್ಭಗಳಲ್ಲಿ ಬಳಸುವ ರೀತಿನೀತಿಗಳು ಇತ್ಯಾದಿ. ಇವನ್ನು ಆಗುಮಾಡುವುದಕೋಸ್ಕರ ಪಠ್ಯಪುಸ್ತಕಗಳು ಪ್ರಧಾನವಾಗಿ ಗದ್ಯ, ಪದ್ಯರೂಪದ ಭಾಷಾ ಬಳಕೆಯ ಮಾದರಿಗಳನ್ನು ಆಯಾ ವಯೋಮಾನಕ್ಕೆ ಹೊಂದುವ ಸಾಹಿತ್ಯದ ತುಣುಕುಗಳನ್ನು ಒಳಗೊಂಡಿರುತ್ತವೆ. ಭಾಷೆಯ ಈ ಅಂಶಗಳನ್ನು ಬೋಧಿಸುವುದಕ್ಕಿಂತ ಇಂದು ಶಾಲೆಗಳಲ್ಲಿ ಭಾಷಾ ರಚನೆಯನ್ನು, ವ್ಯಾಕರಣ ಅಂಶಗಳನ್ನು ಬೋಧಿಸಲಾಗುತ್ತಿದೆ. ವ್ಯಾಕರಣದಲ್ಲಿ - ಸ್ವರ; ವ್ಯಂಜನ; ಯೋಗವಾಹಕ; ವರ್ಣಮಾಲೆಯ ಒಟ್ಟು ಅಕ್ಷರಗಳು; ಹ್ರಸ್ವ, ದೀರ್ಘ, ಪ್ಲುತ; ಅಲ್ಪಪ್ರಾಣ; ಅನುನಾಸಿಕ; ವರ್ಗೀಯ ಅವರ್ಗೀಯ ವ್ಯಂಜನಗಳು; ಗುಣಿತಾಕ್ಷರಗಳು; ಸಜಾತಿ-ವಿಜಾತಿಯ ಸಂಯುಕ್ತಾಕ್ಷರಗಳು; ಲೋಪ ಸಂಧಿ, ಆಗಮ ಸಂಧಿ, ಆದೇಶ ಸಂಧಿ; ಪ್ರಕೃತಿಭಾವ; ಸವರ್ಣದೀರ್ಘ ಸಂಧಿ; ಗುಣ ಸಂಧಿ, ವೃದ್ಧಿ ಸಂಧಿ, ಯಣ್ ಸಂಧಿ, ಶ್ಚುತ್ವ ಸಂಧಿ, ಜಶ್ತ್ವ ಸಂಧಿ, ಅನುನಾಸಿಕ ಸಂಧಿ; ತತ್ಸಮ-ತದ್ಭವಗಳು; ನಾಮಪ್ರಕೃತಿ, ಪದ, ನಾಮಪದ, ವಿಭಕ್ತಿ ಪ್ರತ್ಯಯ; ನಾಮಪ್ರಕೃತಿ ಭೇದ; ವಸ್ತುವಾಚನ, ಗುಣವಾಚನ, ಸಂಖ್ಯಾವಾಚನ, ಪರಿಮಾಣವಾಚನ; ಸರ್ವನಾಮ, ಭಾವನಾಮ; ಕ್ರಿಯಾಪದ, ವಿಧ್ಯರ್ಥಕ ಕ್ರಿಯಾಪದಗಳು, ನಿಷೇಧಾರ್ಥಕ ಕ್ರಿಯಾಪದಗಳು, ಸಂಭಾವನಾರ್ಥಕ ಕ್ರಿಯಾಪದಗಳು; ವರ್ತಮಾನ ಕಾಲ, ಭೂತಕಾಲ, ಭವಿಷ್ಯತ್‌ಕಾಲಗಳು; ಕಾಲಪಲ್ಲಟ; ಅವ್ಯಯಗಳು; ಕರ್ತರಿ ಮತ್ತು ಕರ್ಮಣಿ ಪ್ರಯೋಗ ಇತ್ಯಾದಿ ಇರುತ್ತವೆ.

ಛಂದಸ್ಸಿನಲ್ಲಿ – ಪ್ರಾಸ, ಗಣ,ಮಾತ್ರೆ,ಗುರು, ಲಘು; ಕಂದಪದ್ಯ; ಆರು ಷಟ್ಪದಿಗಳು; ಉತ್ಸಾಹ ರಗಳೆ, ಮಂದಾನಿಲ ರಗಳೆ, ಕಂದ, ಉತ್ಪಲಮಾಲಾ ವೃತ್ತ, ಆಧುನಿಕ ಛಂದಸ್ಸು; ಚಂಪಮಾಲಾ ವೃತ್ತ, ಶಾರ್ದೂಲವಿಕ್ರೀಡಿತ ವೃತ್ತ, ಮತ್ತೇಭವಿಕ್ರೀಡಿತ ವೃತ್ತ, ಸ್ರಗ್ಧರಾವೃತ್ತ, ಮಹಾಸ್ರಗ್ಧರಾ ವೃತ್ತಗಳನ್ನು ಬೋಧಿಸಲಾಗುತ್ತದೆ. ಅಲಂಕಾರದಲ್ಲಿ ಉಪಮಾಲಂಕಾರ, ಶಬ್ದಾಲಂಕಾರ, ಅರ್ಥಾಲಂಕಾರ(ವಿವರಣೆ), ರೂಪಕಾಲಂಕಾರ, ದೃಷ್ಟಾಂತಾಲಂಕಾರ, ಉತ್ಪ್ರೇಕ್ಷಾಲಂಕಾರ; ಶ್ಲೇಷ; ದೃಷ್ಟಾಂತ ಇತ್ಯಾದಿಗಳನ್ನು ಬೋಧಿಸಲಾಗುತ್ತದೆ.

ಇವನ್ನು ಎರಡು ರೀತಿಯಲ್ಲಿ ಬೋಧಿಸುವ ರೂಢಿಯಿದೆ. ಮೊದಲನೆಯದು ರೀತಿ – ನಿಯಮಗಳನ್ನು ಹೇಳಿ, ಆ ನಿಯಮವನ್ನು ಸಮರ್ಥಿಸಲು ಉದಾಹರಣೆಗಳನ್ನು ಪರಿಚಯಿಸುವುದು ಮತ್ತು ಆ ನಿಯಮಕ್ಕೆ ಇರುವ ಅಪವಾದಗಳನ್ನು ಹೇಳುವುದು. ಎರಡನೆಯ ರೀತಿ – ಒಂದೇ ನಿಯಮವನ್ನು ಪಾಲಿಸುವ ಹಲವಾರು ಉದಾಹರಣೆಗಳನ್ನು ಪರಿಚಯಿಸಿ ಅವುಗಳ ಸಹಾಯದಿಂದ ನಿಯಮವೇನು ಎಂದು ಅರ್ಥಮಾಡಿಸಿ ಹೇಳುವುದು.

ಮಾದರಿ ಯಾವುದೇ ಇರಲಿ, ಶಾಲೆಗಳಲ್ಲಿ ವ್ಯಾಕರಣ ಬೋಧನೆಯನ್ನು ಭಾಷಾ ಬೋಧನೆಯ ಘಟಕವನ್ನಾಗಿಸಿದಾಗ ವ್ಯಾಕರಣವನ್ನು ಶುದ್ಧ ವ್ಯಾಕರಣವನ್ನಾಗಿಯೇ ಕಲಿಸಲಾಗುತ್ತದೆ. ಅದೇ ವ್ಯಾಕರಣ ಅಂಶಗಳ ಬೋಧನೆಯನ್ನು ಪಾಠಗಳಿಗೆ ಲಗತ್ತಿಸಿ ಅಲ್ಲಲ್ಲಿ ಕೆಲವು ಬದಲಾವಣೆಗಳನ್ನು ಮಾಡಿ ಕ್ರಿಯಾತ್ಮಕ ವ್ಯಾಕರಣವೆಂದು ಕಲಿಸಲಾರಂಭಿಸಲಾಯಿತು. ಇದರಿಂದಾಗಿ ವ್ಯಾಕರಣ ಮತ್ತು ಅದರ ಬೋಧನೆಯಲ್ಲಿ ಕ್ರಾಂತಿಕಾರಿ ಬದಲಾವಣೆ ಆಯಿತು ಎಂದು ನಂಬಲಾಯಿತು.

ವ್ಯಾಕರಣದ ಬೋಧನೆ ಭಾಷಾ ಬೋಧನೆ ಅಲ್ಲ, ಅದು ಭಾಷೆಯ ಕಲಿಕೆಗೆ ಸಹಾಯ ಮಾಡಬಹುದು ಅಷ್ಟೆ. ಭಾಷೆಯನ್ನು, ಅದರ ಬಳಕೆಯನ್ನು ವಿದ್ಯಾರ್ಥಿಗಳು ಕಲಿಯಬೇಕೇ ಹೊರತು ಅದರ ವ್ಯಾಕರಣ ನಿಯಮಗಳು ಅಥವಾ ನಿಯಮಗಳ ಉದಾಹರಣೆಗಳನ್ನಲ್ಲ. ಸಾಂಪ್ರದಾಯಿಕವಾಗಿಯಾಗಲಿ, ಕ್ರಿಯಾತ್ಮಕವಾಗಿಯಾಗಲಿ, ಕಲಿಸಿದ ವ್ಯಾಕರಣದಲ್ಲಿ ಯಾವ ಬದಲಾವಣೆಯೂ ಕಂಡುಬರಲಿಲ್ಲ. ಹೀಗೆ ವ್ಯಾಕರಣ ಕಲಿತವರ ಭಾಷಾ ಬಳಕೆಯಲ್ಲೂ ಯಾವ ಬದಲಾವಣೆಯೂ ಆಗಲಿಲ್ಲ ಎನ್ನಿಸುತ್ತದೆ. ಎಲ್ಲ ಸಂದರ್ಭಗಳಲ್ಲಿಯೂ ಸೂತ್ರ ಮತ್ತು ಉದಾಹರಣೆಗೆ ಒತ್ತುಕೊಟ್ಟಿದ್ದುದರಿಂದಲೂ ಅವಕ್ಕೂ ಭಾಷೆಯ ವ್ಯಾವಹಾರಿಕ ಬಳಕೆಗೂ ಸಂಪರ್ಕವು ಏರ್ಪಡದೆ ಇದ್ದುದರಿಂದಲೂ, ಅದರ ಯಾವುದೇ ಪ್ರಾಯೋಗಿಕ ಉಪಯೋಗ ಕಲಿಯುವವರಿಗೆ ಕಾಣದೆ ಇದ್ದುದರಿಂದ ವ್ಯಾಕರಣ ಬೋಧನೆ ಭಾಷಾ ಬೋಧನೆಯಿಂದ ಪ್ರತ್ಯೇಕವಾಗಿಯೇ ಉಳಿಯಿತು. ವಿದ್ಯಾರ್ಥಿಗಳಿಗೆ ಅರಗದ ಕಬ್ಬಿಣದ ಕಡಲೆಯಾಯಿತು. ಅಧ್ಯಾಪಕರಿಗೆ ಕಿರಿಕಿರಿ ಹಾಗೂ ತರ್ಕದ ವಿಷಯವೂ ಆಯಿತು.

ಈಗ ನಾವು ಶಾಲೆಗಳಲ್ಲಿ ಕಲಿಸುತ್ತಿರುವ ವ್ಯಾಕರಣಕ್ಕೂ , ಮಾತೃಭಾಷೆಯ ಕಲಿಕೆಯ ಸಂದರ್ಭದಲ್ಲಿ ವ್ಯಾಕರಣದ ಹೆಸರಿನಲ್ಲಿ ಕಲಿಯಬೇಕಾಗಿರುವ ವಿಷಯಗಳಿಗೂ ವ್ಯತ್ಯಾಸವಿದೆ. ಭಾಷೆಯ ರಚನೆಗೆ ಸಂಬಂಧಪಟ್ಟಂತೆ ಶಾಲೆಗಳಲ್ಲಿ ಮಾತೃಭಾಷಾ ಬೋಧನೆಯ ಸಂದರ್ಭದಲ್ಲಿ ಕಲಿಸಬೇಕಾಗಿರುವ ವಿಷಯಗಳು :

೧. ಧ್ವನಿ ಮತ್ತು ಅಕ್ಷರಗಳಿಗಿರುವ ಸಂಬಂಧ.
೨. ಮನೆ ಭಾಷೆ ಮತ್ತು ಶಾಲೆಯಲ್ಲಿ ಬಳಕೆಯಾಗುತ್ತಿರುವ ಭಾಷೆಗಳ ನಡುವಿನ ವ್ಯತ್ಯಾಸದಿಂದಾಗುವ ಭಾಷಾದೋಷಗಳು ಯಾವುವು ಮತ್ತು ಅವನ್ನು ತಿದ್ದಿಕೊಳ್ಳುವ ರೀತಿ ಯಾವುವು.
೩. ಭಾಷೆಯ ಅರೆಕಲಿಕೆಯಿಂದ ಆಗುವ ದೋಷಗಳ ನಿವಾರಣೋಪಾಯಗಳು.
೪. ಲೇಖನ ಚಿಹ್ನೆಗಳ ಅರ್ಥ ಮತ್ತು ಅವುಗಳನ್ನು ಅರ್ಥಪೂರ್ಣವಾಗಿ ಬಳಸುವ ವಿಧಾನ.
೫. ಶುದ್ಧ ಮತ್ತು ದೋಷರಹಿತ ಮಾತು ಮತ್ತು ಬರವಣಿಗೆ.
೬. ಔಪಚಾರಿಕ ಸಂದರ್ಭಗಳಲ್ಲಿ ಭಾಷೆಯನ್ನು ಬಳಸುವಾಗ ಅನುಸರಿಸಬೇಕಾದ ಅಲಿಖಿತ ನಿಯಮಗಳು.
೭. ಗಾದೆ,ನುಡಿಗಟ್ಟುಗಳ ಬಳಕೆ.
೮. ಉತ್ತಮ ಮಾತು ಹಾಗೂ ಬರವಣಿಗೆಯ ಶೈಲಿ ಇತ್ಯಾದಿ.

ಈ ವಿಷಯಗಳನ್ನು ಕಲಿಸಿದರೆ ದೋಷರಹಿತ ಮಾತು ಮತ್ತು ಬರವಣಿಗೆಯನ್ನು ವಿದ್ಯಾರ್ಥಿಗಳಿಂದ ನಿರೀಕ್ಷಿಸಬಹುದು. ಭಾಷೆಯನ್ನು ಕಲಿಸಲು ಬಳಸುವ ಸಾಹಿತ್ಯದ ತುಣುಕುಗಳು, ಸಾಹಿತ್ಯದ ಸೊಗಡು, ಬೇರೆ ಬೇರೆ ಬರಹಗಾರರು ಭಾಷೆಯನ್ನು ವಿವಿಧ ರೀತಿಯಲ್ಲಿ ಬಳಸುವ ಪರಿ ಮುಂತಾದ ವಿಷಯಗಳನ್ನು ಪರಿಚಯ ಮಾಡಿಕೊಡುತ್ತವೆ. ಪದವಿ ಮತ್ತು ಸ್ನಾತಕೋತ್ತರ ತರಗತಿಗಳಲ್ಲಿ ಸಾಹಿತ್ಯವನ್ನು ಸಾಹಿತ್ಯೋದ್ದೇಶದಿಂದಲೇ ಬೋಧಿಸುವುದರಿಂದ ವ್ಯಾಕರಣ ಪರಂಪರೆಯ ಪರಿಚಯ ಮತ್ತು ಆಯಾ ಕಾಲದಲ್ಲಿ ನಡೆಸಿರುವ ಭಾಷಾ ವಿಶ್ಲೇಷಣೆ ಸಾಹಿತ್ಯ ಬೋಧನೆಯ ಅಂಗವಾಗುತ್ತದೆ. ಇವರಿಗೆ ಇದೆಲ್ಲದರ ಪರಿಚಯ ಅಗತ್ಯ.

ಇಂದು ಕನ್ನಡವನ್ನು ಕೇವಲ ಕನ್ನಡಿಗರಿಗೆ ಮಾತ್ರವಲ್ಲ, ಅನ್ಯಭಾಷಿಕರಿಗೂ ಕಲಿಸುವ ವ್ಯವಸ್ಥೆ ಇದೆ. ಆ ಸಂದರ್ಭಗಳಲ್ಲಿಯೂ ವ್ಯಾಕರಣ ಅಥವಾ ಮುಖ್ಯ ವ್ಯಾಕರಣಾಂಶಗಳ ಬೋಧನೆ ಅಗತ್ಯವಾಗುತ್ತದೆ. ಇಲ್ಲಿ ಕಲಿಸುವ ವ್ಯಾಕರಣದ ಅಂಶಗಳು ಅವನ್ನು ಸಮರ್ಥವಾಗಿ ಅರ್ಥಮಾಡಿಕೊಂಡು ಅಳವಡಿಸಿಕೊಳ್ಳುವವರಿಗೆ ಮಾತ್ರ ಉಪಯೋಗವಾಗುತವೆ.

ಡಾ॥ ಭ. ಮಲ್ಲಿಕಾರ್ಜುನ
ಭಾರತೀಯ ಭಾಷೆಗಳ ಕೇಂದ್ರ ಸಂಸ್ಥೆ, ಮಾನಸಗಂಗೋತ್ರಿ
ಮೈಸೂರು - ೫೭೦ ೦೦೬

# ಮಧ್ಯಕಾಲೀನ ಭಾರತದಲ್ಲಿ ದಲಿತರ ಅಸ್ತಿತ್ವ

**ಪ್ರೊ॥ ಶಿವರಾಮಯ್ಯ**

ಊರು ಎಂದರೆ ಹೊಲಗೇರಿ ಇರುವುದು, ನಗರವೆಂದರೆ ಕೊಳೆಗೇರಿಯಿರುವುದು ಸಾಮಾನ್ಯ. ಇಲ್ಲಿ ವಾಸ ಮಾಡುವ ಸಹಮಾನವರನ್ನು ಹಿಂದೆ ಅಸ್ಪೃಶ್ಯರೆಂದೂ ಈಚೆಗೆ ದಲಿತರೆಂದೂ ಕರೆಯಲಾಗುತ್ತಿದೆ. ಆದ್ದರಿಂದ 'ದಲಿತ' ಶಬ್ದಕ್ಕೆ ಪರ್ಯಾಯವಾಗಿ 'ಅಸ್ಪೃಶ್ಯ' ಎಂಬ ಶಬ್ದವನ್ನೇ ಈ ಲೇಖನದಲ್ಲಿ ಬಳಸಲಾಗುತ್ತದೆ. ಪ್ರಾಚೀನ ಕಾಲದಲ್ಲಿ 'ಸ್ಪೃಶ್ಯರು' ಮತ್ತು 'ಅಸ್ಪೃಶ್ಯರು' ಎಂಬ ಎರಡು ಪದಗಳು ಚಾಲ್ತಿಯಲ್ಲಿದ್ದವು. ಅಸ್ಪೃಶ್ಯರು ಯಾರು ಎಂಬ ಬಗ್ಗೆ ಅನೇಕ ವ್ಯಾಖ್ಯಾನಗಳಿವೆ. ಸಂಕ್ಷಿಪ್ತವಾಗಿ ಅಸ್ಪೃಶ್ಯ ಎಂದರೆ ಅನಕ್ಷರಸ್ಥ ಮತ್ತು ಅವಮಾನಕ್ಕೊಳಗಾದ ಜಾತಿಯಲ್ಲಿ ಹುಟ್ಟಿದ ವ್ಯಕ್ತಿ. ಯಾರು ಸಾಂಸ್ಕೃತಿಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ, ಧಾರ್ಮಿಕವಾಗಿ ದಮನಕ್ಕೊಳಗಾಗಿದ್ದಾನೆಯೋ ಅವನೇ ಅಸ್ಪೃಶ್ಯ. ಡಾ॥ ಬಾಬಾಸಾಹೇಬ್ ಅಂಬೇಡ್ಕರ್ ಶ್ರುತಪಡಿಸಿರುವಂತೆ ಅಸ್ಪೃಶ್ಯನೆಂದರೆ ಒಬ್ಬ ವ್ಯಕ್ತಿ ವಿಚಾರದಲ್ಲಿ ಹಿಂದೂವೊಬ್ಬನ ಅಂತರಂಗದಲ್ಲಿ ಮೂಡಿದ ತಿರಸ್ಕಾರದ ಬಾಹ್ಯ ಸ್ವರೂಪವಾಗಿರುತ್ತಾನೆ. ಎಲ್ಲೆಲ್ಲಿ ಈ ತಿರಸ್ಕಾರ ಉಂಟೋ ಅಲ್ಲೆಲ್ಲ ಅಸ್ಪೃಶ್ಯತೆ ತಾನೇ ತಾನಾಗಿರುತ್ತದೆ.

ಅಸ್ಪೃಶ್ಯರನ್ನು ಹೊಲೆಯ, ಮಾದಿಗ, ಪಂಚಮ, ಪರೆಯಾ, ಚಂಡಾಲ, ಸಮಗಾರ, ಚಮ್ಮಾರ, ಹರಿಜನ, ಆದಿಕರ್ನಾಟಕ, ಆದಿದ್ರಾವಿಡ ಇತ್ಯಾದಿ ಅನೇಕ ಪರ್ಯಾಯ ಶಬ್ದಗಳಿಂದ ಕರೆಯಲಾಗುತ್ತದೆ. ಹಿಂದೂ ಸಮಾಜವು ಒಂದು ಬೃಹತ್ ಮನೆ ಇದ್ದಂತೆ. ''ಇದರಲ್ಲಿರುವ ಜನಸಮೂಹಗಳು ಅಸಂಖ್ಯಾತ ಜಾತಿಗಳಲ್ಲಿ ಹರಿದು ಹಂಚಿಹೋಗಿವೆ'' ಎಂಬ ಅಂಬೇಡ್ಕರ್ ಅವರ ಮಾತು ನಿಜ. ಹಿಂದೂ ದೇಶದಲ್ಲಿ ವೈಶಿಷ್ಟ್ಯ ಇರುವುದೇ ಇಲ್ಲಿ, ಜಾತಿ ಪದ್ಧತಿ ಮತ್ತು ಅಸ್ಪೃಶ್ಯತೆ ಒಂದರೊಳಗೊಂದು ತಳಕು ಹಾಕಿಕೊಂಡ ನಾಗರಹೆಣೆಯಾಟದಲ್ಲಿ.

ಅಸ್ಪೃಶ್ಯತೆಯ ಉಗಮ ಎಂದಾಯಿತು ? ಹೇಗಾಯಿತು ? ಯಾಕಾಯಿತು ? ಇವು ತೀವ್ರ ಕುತೂಹಲಕಾರಿಯೂ ವಿಷಾದನೀಯವೂ ಆದ ಪ್ರಶ್ನೆಗಳು.

ವೇದ (ಕ್ರಿ.ಪೂ. ೧೫೦೦-೧೦೦೦)ಗಳಲ್ಲಿ ಬ್ರಹ್ಮ , ಕ್ಷತ್ರಿಯ, ವೈಶ್ಯ ಹಾಗೂ ಶೂದ್ರರೆಂಬ ನಾಲ್ಕು ವರ್ಣಗಳು ಮೊದಲು ಕಾಣಿಸಿಕೊಂಡವು. ಹಾಗೆಯೆ ಸೃಷ್ಟಿಕರ್ತನ ಮುಖದಿಂದ ಬ್ರಾಹ್ಮಣರೂ, ಭುಜದಿಂದ ಕ್ಷತ್ರಿಯರೂ, ತೊಡೆಯಿಂದ ವೈಶ್ಯರೂ, ಪಾದಗಳಿಂದ ಶೂದ್ರರೂ ಜನಿಸಿದರೆಂಬ ಪ್ರತೀತಿಯಿದೆ.

ವೃತ್ತಿ ಆಧಾರದಿಂದ ಹೇಳುವುದಾದರೆ, ಅಧ್ಯಯನ ಅಧ್ಯಾಪನ ನಿರತನು ಬ್ರಾಹ್ಮಣ; ರಕ್ಷಣೆ ಮಾಡುವಾತನು ಕ್ಷತ್ರಿಯ; ವ್ಯವಸಾಯ, ವ್ಯಾಪಾರ ನಿರತನು ವೈಶ್ಯ ಹಾಗೂ ಈ ಮೂರು ವರ್ಗಗಳ ಸೇವಾನಿರತನು ಶೂದ್ರ. ಋಗ್ವೇದದಲ್ಲಿ ಆರ್ಯ ಮತ್ತು ದಸ್ಯು ಎಂಬ ಎರಡು ಶಬ್ದಗಳಿದ್ದು 'ಆರ್ಯ' ಶ್ರೇಷ್ಠನೆಂದೂ, 'ದಸ್ಯು' ಅಶ್ರೇಷ್ಠ ಮೂಲನಿವಾಸಿಯೆಂದೂ ಪರಿಗಣಿಸಲಾಗಿದೆ. ಮೇಲಿನ ನಾಲ್ಕು ವರ್ಣಗಳಿಂದ ಅನೇಕ ಮಿಶ್ರವರ್ಣಗಳೂ ಮಿಶ್ರ ಜಾತಿಗಳೂ ಹುಟ್ಟಿಕೊಂಡವು. ಒಟ್ಟಾರೆ ವರ್ಣಸಂಕರವೇ ಜಾತಿಗಳ ಹುಟ್ಟಿಗೆ ಮೂಲ ಕಾರಣವೆಂದು ಸ್ಥೂಲವಾಗಿ ಹೇಳಬಹುದು.

ಹಿಂದೂ ಸಮಾಜದ ಬಗ್ಗೆ ಆಳ ಅಧ್ಯಯನಶೀಲರಾಗಿದ್ದ ಡಾ॥ ಅಂಬೇಡ್ಕರ್ ಹೇಳುವ ಹಾಗೆ ಇದರ ಸಂರಚನೆ ತುಂಬ ಸಂಕೀರ್ಣವಾದದ್ದು. ಹಿಂದೂಗಳ ಸಾಮಾಜಿಕ ಸಂರಚನೆಯ ಒಂದು ರೇಖಾಚಿತ್ರವನ್ನು ಅವರು ಹೀಗೆ ಬಿಡಿಸುತ್ತಾರೆ:

ಹಿಂದೂಗಳು

- ಜಾತಿ ಹಿಂದೂಗಳು (ಸವರ್ಣ ಹಿಂದೂ)
  - ಮೊದಲನೆಯ ವರ್ಗ
    ಮೇಲುಜಾತಿ : ದ್ವಿಜರು (ತ್ರೈವರ್ಣಿಕರು), ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಎಂಬ ಮೂರು ವರ್ಣಗಳಿಂದ ಉಂಟಾದ ಜಾತಿಗಳು
  - ಎರಡನೆಯ ವರ್ಗ
    ಕೆಳಜಾತಿ : ನಾಲ್ಕನೆಯ ವರ್ಣವಾದ ಶೂದ್ರರಿಂದ ಉಂಟಾದ ಜಾತಿಗಳು
- ಜಾತಿಹೀನ ಹಿಂದೂಗಳು (ಅವರ್ಣ ಹಿಂದೂ)
  - ಮೂರನೆಯ ವರ್ಗ
    ೧. ಆದಿಮ ಬುಡಕಟ್ಟುಗಳು
    ೨. ಅಪರಾಧಿ ಬುಡಕಟ್ಟುಗಳು
  - ನಾಲ್ಕನೆಯ ವರ್ಗ
    ಅಸ್ಪೃಶ್ಯರು



(ಡಾ॥ ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು, ಸಂಪುಟ ೨೯-೧೬೮.)

ಚಂಡಾಲರ ಉಲ್ಲೇಖ ಮೊದಲು ಕಾಣಿಸಿಕೊಂಡದ್ದು ಯಜುರ್ವೇದದಲ್ಲಿ. ಛಾಂದೋಗ್ಯೋಪನಿಷತ್ತಿನ ಪ್ರಕಾರ ಚಂಡಾಲರು ನಾಯಿ, ಹಂದಿಗಳಿಗಿಂತ ತೀರ ತುಚ್ಛವಾದವರು. ಡಾ॥ ಅಂಬೇಡ್ಕರ್ ಅವರ ಪ್ರಕಾರ ವಿದೇಶಗಳಿಂದ ಭಾರತಕ್ಕೆ ಬಂದ ಆಕ್ರಮಣಕಾರರು ದಮನ ಮಾಡಿದ ದೇಶೀಯ ಜನರೇ ಈಗಿನ ಅಸ್ಪೃಶ್ಯರಂತೆ. ಆದ್ದರಿಂದ ಅಸ್ಪೃಶ್ಯರೇ ಇಲ್ಲಿನ ಮೂಲನಿವಾಸಿಗಳಾಗಿರುತ್ತಾರೆ. ಇವರ ಸ್ಥಿತಿ-ಗತಿ ತೀರಾ ಶೋಚನೀಯ. ಅವರು ಊರ ಹೊರಗೆ, ಅದೂ ದಕ್ಷಿಣ ದಿಕ್ಕಿನಲ್ಲಿ ವಾಸಿಸಬೇಕು; ಈ ದಿಕ್ಕು ಕೂಡ ಅಮಂಗಲಕಾರಿ ಆದ್ದರಿಂದ. ಗ್ರಾಮೀಣ ಭಾರತದ ಪರಿಸ್ಥಿತಿ ಈಗಲೂ ಹೀಗೇ ಇದೆ. ಈ ಭೌಗೋಳಿಕ ಪ್ರತ್ಯೇಕತೆ ಸದಾಕಾಲಕ್ಕೂ ಇದ್ದದ್ದೇ.

ಅವರು ಭಿಕ್ಷೆಗೆ ಅಥವಾ ಕೆಲಸಕ್ಕೆ ಮಾತ್ರ ಊರೊಳಕ್ಕೆ ಬರಬೇಕು. ಅವರನ್ನು ಯಾರೂ ಮುಟ್ಟಬಾರದು. ಒಂದು ವೇಳೆ ಮುಟ್ಟಿಸಿಕೊಂಡರೂ ಸಚೇಲ ಸ್ನಾನ ಮಾಡಬೇಕು. ಗೃಹಸ್ಥರು ತಮ್ಮ ಊಟವಾದ ಮೇಲೆ ನಾಯಿ ಕಾಗೆಗಳಿಗೆ ಎಸೆಯುವಾಗ ಇವರಿಗೂ ಅನ್ನ ಎಸೆಯಬೇಕು; ಚಂಡಾಲರು ಕಸಗುಡಿಸಲು ಬೆಳಿಗ್ಗೆ ಹೊತ್ತು ಮಾತ್ರ ಬರಬೇಕು; ತನ್ನ ಕೊರಳಿಗೆ ಕುಡಿಕೆಯೊಂದನ್ನು ಕಟ್ಟಿಕೊಂಡು, ಎಂಜಲನ್ನು ಅದರೊಳಕ್ಕೆ ಮಾತ್ರ ಉಗಿಯಬೇಕು. ಅಸ್ಪೃಶ್ಯರ ನೆರಳು ಹಿಂದೂಗಳಿಗೆ ಸೋಂಕಬಾರದು. ತಾವು ಬರುತ್ತಿರುವುದನ್ನು ಸೂಚಿಸಲು ಸದ್ದುಗದ್ದಲ ಮಾಡುತ್ತಿರಬೇಕು. ಉದಾಹರಣೆಗೆ, ದ್ವಾರಕಾ ಪಟ್ಟಣದಲ್ಲಿ 'ಕಂಬ, ಕಂಬ' ಎಂಬ ಶಬ್ದವೂ, ಮದರಾಸು ಪ್ರಾಂತ್ಯದ ಚೆರುಮಾನ್‌ರು 'ಓ ವೋ' ಎಂದೂ ಪಾಲ್‌ಘಾಟ್‌ನಲ್ಲಿ 'ಅಂಬ್ರಾಣಿ ಅಂಬ್ರಾಣಿ' ಎಂದೂ ಸದ್ದು ಮಾಡುತ್ತಿದ್ದರು.

ಥರ್ಸ್ಟನ್ ತನ್ನ 'ಟ್ರೈಬ್ಸ್ ಅಂಡ್ ಕ್ಯಾಸ್ಟ್ಸ್ ಇನ್ ಸದರನ್ ಇಂಡಿಯಾ' ಎಂಬ ಕೃತಿಯಲ್ಲಿ ಬರೆಯುವ ಇಂತಹ ಕೆಲವು ಸಂಗತಿಗಳು ತೀರ ಹೃದಯವಿದ್ರಾವಕವಾಗಿವೆ.

ಡಾ॥ ಅಂಬೇಡ್ಕರ್ ತಮ್ಮ ಬರಹಗಳು ಮತ್ತು ಭಾಷಣಗಳು ಕೃತಿ (ಸಂಪುಟ ೫, ೨೧೧-೨೧೫)ಯಲ್ಲಿ ಮಲಬಾರ್ ಮ್ಯಾನ್ಯುಯಲ್ (೧೯೨೮) ಆಧಾರದಿಂದ ತೆಗೆದುಕೊಂಡಿರುವ ಮಾಹಿತಿಗಳ ಪ್ರಕಾರ, ಅಸ್ಪೃಶ್ಯರಿಗಿಂತ ಇನ್ನೂ ಹೀನಾಯವಾದ ಬದುಕು ಸಾಗಿಸುವ ಎರಡು ಬಗೆಯ ಜನ (ನಾಯಡಿ)ರಿದ್ದರು. ಅವರನ್ನು ದೂರಾಶೌಚಕಾರಿಗಳು ಮತ್ತು ದೃಶ್ಯಾಶೌಚಕಾರಿಗಳು ಎಂದು ಕರೆಯಲಾಗುತ್ತಿತ್ತು. ಇವರಲ್ಲಿ ಮೊದಲನೇ ಗುಂಪಿನ ಜನರು ನಿರ್ದಿಷ್ಟ ದೂರದಿಂದ ಈಚೆ ಬಂದರೆ ಮೈಲಿಗೆಯನ್ನುಂಟುಮಾಡುವವರಾಗಿದ್ದರೆ, ಎರಡನೇ ಗುಂಪಿನ ಜನ ಕಣ್ಣಿಗೆ ಬಿದ್ದರೂ ಮೈಲಿಗೆಯನ್ನುಂಟುಮಾಡುವವರಾಗಿದ್ದಾರೆ. ಇಂಥವರ ಸಂಕಷ್ಟಗಳು ಎಂಥವಿರಬೇಕು ? ಹೇಗೆ ಅವರು ತಮ್ಮ ಬದುಕನ್ನು ತಳ್ಳುತ್ತಿರಬಹುದು ? ಅವರು ಹತ್ತಿರ ಬರುವುದೂ ಕಣ್ಣಿಗೆ ಬೀಳುವುದೂ ನಿಷಿದ್ಧವಾಗಿರುವಾಗ ಅವರು ದುಡಿಯಲು ಯಾವ ಕೆಲಸ ಸಿಕ್ಕೀತು ? ಭಿಕ್ಷೆ ಬೇಡುವುದು ಅಥವಾ ನಾಯಿ ಮಾಂಸವನ್ನು ತಿನ್ನುವುದು ಇಂಥವಲ್ಲದೇ ಅವರು ಇನ್ನೇನು ಮಾಡಲು ಸಾಧ್ಯ ? ನಿಶ್ಚಿತವಾಗಿಯೂ ಜಗತ್ತಿನ ಯಾವುದೇ ಒಂದು ನಾಗರಿಕತೆ ಇದಕ್ಕಿಂತ ಕ್ರೌರ್ಯದ ಆರೋಪಕ್ಕೆ ಗುರಿಯಾಗಲಾರದು – ಹೀಗೆಂದು ಡಾ॥ ಅಂಬೇಡ್ಕರ್ ಪ್ರತಿಕ್ರಿಯಿಸುತ್ತಾರೆ. (ಬರಹಗಳು-ಭಾಷಣಗಳು, ಪು. ೨೧೨)

ಮೇಲೆ ಹೇಳಿದ ಅಸ್ಪೃಸ್ಯತೆಯ ಆಚರಣೆ ಕಳೆದ ಶತಮಾನದ ಆರಂಭಕ್ಕೆ ಕಂಡುಬರುತ್ತಿದ್ದ ಒಂದು ನಿದರ್ಶನ. ಇದು ೨೧ನೆಯ ಶತಮಾನದಲ್ಲಿ ಕೂಡ ಯಾವ ಸ್ವರೂಪದಲ್ಲಿದೆ ಎಂಬುದನ್ನು ಅರಿಯಲು ಒಂದು ನಿದರ್ಶನ ಹೇಳಬೇಕಾಗಿದೆ. ನ್ಯಾಷನಲ್ ಜಿಯಾಗ್ರಫಿಕ್ ಸಂಸ್ಥೆಯವರು ಎರಡು ವರ್ಷದ ಹಿಂದೆ ಇಂಡಿಯಾದಲ್ಲಿ ಈ ಬಗ್ಗೆ ಒಂದು ಸಮೀಕ್ಷೆ ನಡೆಸಿದರು. ಆಗ ಉತ್ತರ ಭಾರತದ ಒಂದು ನಗರದಲ್ಲಿ ಗಟಾರವೊಂದರ ಮ್ಯಾನ್‌ಹೋಲ್ ಕಟ್ಟಿಕೊಂಡಿತ್ತು. ಭಂಗಿಯೊಬ್ಬನು ಅದರಲ್ಲಿಳಿದು, ಆ ಹೇಲು ಉಚ್ಚೆ ಕೊಚ್ಚೆಯಲ್ಲಿ ಮುಳುಗಿ, ಅದನ್ನು ಕ್ಲೀನ್ ಮಾಡಿ ಮೇಲೆ ಬಂದ. ವಿಪರ್ಯಾಸವೆಂದರೆ ಹಾಗೆ ಮೇಲೆ ಬಂದ ಭಂಗಿಯ ತಲೆಯ ಮೇಲೆ ಒಂದು ಕೊಡ

## ಪಯಣದ ನಡುವೆ...



ನಸುಬೆಳಕ ಹಾದಿಯಲಿ ಮಂಜು, ಮಲ್ಲಿಗೆ ಅರಳು
ಹುಲ್ಲು, ಗರಿಕೆ, ಕಾಡುಹೂಗಳ ಗಲ್ಲ ಸವರುತ್ತ
ಅವಳ ಸೆರಗ ಸಿಹಿನಿದ್ದೆಯ ಹನಿಹನಿಗಳಲಿ ತೂಗುತ್ತ
ಬಯಕೆ ಏಣಿಯ ಹತ್ತಿ ಬೆಳಕಂತೆ ಆವರಿಸಿ
'ಬಂದು ಬಿಟ್ಟೆಯಾ ಮಗನೆ ' ಬಾ ನೋಡು ಈ ಊರ

ಮಣ್ಣ ಮರೆತ ಕಂಗಳಲಿ ಬಿಸಿಬಿಸಿ ಮೊಸಳೆ ಕಣ್ಣೀರು
ಮುಳ್ಳು ಬೆಳೆವ ಹಾಳು ಗುಡಿಯಲ್ಲಿ ಹಿಂಡು ಬಾವಲಿ ದಂಡು
ಕುಸಿದ ಕುಸುರಿಯ ಬಾಗಿಲು, ರುಂಡ ಕಳಕೊಂಡ ಮೂರ್ತಿ
ಮುಪ್ಪು ಮುಟ್ಟಿದ ಕಥೆಯ ಮುಟ್ಟಿ ಮಿಡಿಯುವ ಹಕ್ಕಿ ॥

ಉರಿವ ಉಯ್ಯಾಲೆಯಲ್ಲಿ ಮಸಣದಾ ಚಿತೆ ಬೆಂದು
ಒಂಟಿ ಗೋಡೆಯ ಹಿಂದೆ ಗಂಡ ಕಳಕೊಂಡವಳ ನೆರಳು ।

ಉಸಿರೊಳಗೆ ಹುಡಿ ಸೇರಿ, ಹಸುರೆಲ್ಲಾ ಕೆಂಪಾದರೂ
ಊರಾಚೆಯಲ್ಲಿ ಗುಡ್ಡ ಕೊರೆವ ಯಂತ್ರ ಕೆನೆಯುತ್ತಿದೆ ।

ನದಿ ಏರಿ ನೆಲ ನುಂಗಿ ಕಂದಮ್ಮನ ಬಿಸಿ ಅನ್ನಕೂ ನಕ್ಷತ್ರ
ಬಸಿರಿಗೇ ಬರ ಬಡಿದು ಮುರಿದು ಬಿದ್ದಿದೆ ಬೆತ್ತ ॥
ಹಿತಬಯಸೋ ನಾಲಿಗೆಯ ನಾದ ಕಿವಿ ತಟ್ಟಿದರೂ
ಖಾಲಿ ಆಕಾಶದ ಬೆಳ್ಳಿ ಚುಕ್ಕಿಯ ಬೆಳಕ ದಾಟಿ
ನಿರಾಶ್ರಿತರ ಟೆಂಟೊಳಗೆ ಸೂರ್ಯ ನಿಂತಾನೋ ನಿಲ್ಲನೋ...

ಶಿವಕುಮಾರ್ ಕಂಪ್ಲಿ
ಕೇರಾಫ್ ಸೋಮಶೇಖರಪ್ಪ, ನಿವೃತ್ತ ಪೋಸ್ಟ್ ಮಾಸ್ಟರ್, ೧ನೇ ವಾರ್ಡ್
ಆಜಾದ್ ನಗರ, ಕೂಡ್ಲಿಗಿ, ಬಳ್ಳಾರಿ ಜಿಲ್ಲೆ - ೫೮೩ ೧೩೫



ನೀರು ಹಾಕುವುದಕ್ಕೂ ಸವರ್ಣೀಯರು ಹೇಸಿಕೊಂಡರು. ಇಂಥ ಹಲವಾರು ಪ್ರಸಂಗಗಳು ಆ ನ್ಯಾಷನಲ್ ಜಿಯಾಗ್ರಫಿಕ್ ಸಂಚಿಕೆಯಲ್ಲಿ ವರದಿಯಾಗಿದ್ದವು.

ಈ ಸಂದರ್ಭದಲ್ಲಿ ನನ್ನ ಸ್ವಾನುಭವದ ಕೆಲವು ಪ್ರಸಂಗಗಳನ್ನು ಇಲ್ಲಿ ದಾಖಲಿಸಬಹುದು. ಈಗ್ಗೆ ನಾಲ್ಕು ವರ್ಷಗಳ ಹಿಂದೆ ನಾನೂ ಕೆಲವು ಸ್ನೇಹಿತರೂ ಬೆಳಗಾಂನ ನೇಕಾರರ ಸಮಸ್ಯೆಯ ಅಧ್ಯಯನಕ್ಕೆಂದು ಹೋಗಿದ್ದೆವು. ಆಗ್ಗೆ ಆ ನಗರದ ಗಲ್ಲಿಯೊಂದರಲ್ಲಿ ಕಂಡ ದಲಿತನೊಬ್ಬನ ಬದುಕಿನ ಚಿತ್ರವನ್ನು ನಾನೆಂದೂ ಮರೆಯಲಾರದವನಾಗಿದ್ದೇನೆ. ಒಬ್ಬ ವಯಸ್ಸಾದ ವ್ಯಕ್ತಿ ಸತ್ತ ದನ-ಎಮ್ಮೆಗಳ ಹಸಿ ಚರ್ಮವನ್ನು ಹದಗೊಳಿಸುತ್ತಿದ್ದ. ಸಿಮೆಂಟ್ ತೊಟ್ಟಿಗೆ ಏನೋ ದ್ರಾವಣವನ್ನು ಹಾಕಿ, ಒಂದೆಡೆ ಚರ್ಮಗಳನ್ನು ತಂದು ನೆನೆಹಾಕಿದ್ದ. ಆ ತೊಟ್ಟಿಯ ಸುತ್ತಲೂ ಉಪ್ಪು ಸವರಿದ ಚರ್ಮಗಳಿಗೆ ಕ್ಲಿಪ್‌ಹಾಕಿ ನೇತುಹಾಕಿದ್ದ. ನಡುವೆ ಆ ತೊಟ್ಟಿಯಿಂದ ಒಂದೊಂದೇ ಚರ್ಮಗಳನ್ನು ಬರಿಗೈಯಲ್ಲಿ ಹಿಡಿದು ಉಜ್ಜಿ ಎರೆದು ಕ್ಲೀನ್ ಮಾಡುತ್ತಿದ್ದ. ದಿನಕ್ಕೆ ೧೦೦ರಿಂದ ೨೦೦ರವರೆಗೆ ದುಡಿಯುವುದಾಗಿ ಹೇಳಿದ. ಅವನ ಕೈಕಾಲು ಬೆರಳು ಸಂದುಗಳೆಲ್ಲಾ ಬೆಳ್ಳಗೆ ಸೆಲೆತುಕೊಂಡಿರುವುದು ಕಂಡುಬರುತ್ತಿತ್ತು. ವಂಶಪಾರಂಪರ್ಯವಾಗಿ ಅವನು ಇದೇ ವೃತ್ತಿಯನ್ನು ಮಾಡುತ್ತಿದ್ದಾನಂತೆ. ನಮಗೆ ಅಲ್ಲಿ ಒಂದು ಕ್ಷಣ ನಿಲ್ಲಲೂ ಆಗದೆ ವಾಕರಿಕೆ ಬರುತ್ತಿತ್ತು. ಇನ್ನು ಈ ಭವ್ಯ ಭಾರತದ ರೈಲ್ವೆ ಸ್ಟೇಷನ್ ಟ್ರ್ಯಾಕ್‌ಗಳಲ್ಲಿ ಇಳಿದು ಅವುಗಳನ್ನು ಶುದ್ಧೀಕರಿಸುವ ಝಾಡಮಾಲಿಗಳ ಗತಿ-ಸ್ಥಿತಿಯನ್ನು ಯಾರು ತಾನೇ ಕಂಡಿಲ್ಲ? ಒಟ್ಟಾರೆ, ದೇಶ ಕಾಲ ಯಾವುದೇ ಇರಲಿ ಅಸ್ಪೃಶ್ಯರ ಹೃದಯವಿದ್ರಾವಕ ಬದುಕು ಮಾತ್ರ ಹಾಗೇ ಇದೆ. ಅವರದು ಕಾಲ ದೇಶ ಸ್ಥಗಿತಗೊಂಡ ಶೂನ್ಯ ಇತಿಹಾಸ.

ಡಾ|| ಅಂಬೇಡ್ಕರ್, ಇದೇ ನಾಗರಿಕತೆ ಅಥವಾ ನರಕ ನ್ಯಾಯವನ್ನು ಬಿಂಬಿಸುವ, ೨೫ನೇ ಫೆಬ್ರವರಿ ೧೯೩೮ರ ಬಾಂಬೇ ಕ್ರಾನಿಕಲ್ ಆಧರಿಸಿ, ಮತ್ತೊಂದು ಪಾಶವೀ ದೌರ್ಜನ್ಯದ ಪ್ರಸಂಗವನ್ನು ಉಲ್ಲೇಖಿಸುತ್ತಾರೆ. ದಾಮು ಮತ್ತು ಲಕ್ಷ್ಮಣ ಎಂಬ ಸೋದರರು ಮರಾಠ ಜನರ ಭಜನಾ ಮೇಳದಲ್ಲಿ ತಲೆಮರೆಸಿಕೊಂಡು ಸೇರಿದ್ದು ಅವರ ತಪ್ಪಾಯಿತು. ಅವರು ಅಸ್ಪೃಶ್ಯರೆಂದು ತಿಳಿದ ಮೇಲೆ ಈ ಸವರ್ಣೀಯ ಭಜನಾ ತಂಡದವರು ಅವರ ಮೇಲೆ ಹೀನಾಯವಾದ ದೌರ್ಜನ್ಯ ನಡೆಸಿದರು. ಅವರ ಎಡಮೀಸೆ ಮತ್ತು ಬಲಹುಬ್ಬುಗಳನ್ನು ನುಣ್ಣಗೆ ಬೋಳಿಸಿ, ಬೆತ್ತಲೆಗೊಳಿಸಿ ಮೈತುಂಬ ಮಸಿ ಬಳಿದು, ಹರಿದ ಬೂಟುಗಳ ಮಾಲೆ ಹಾಕಿ 'ಮೇಲು ಜಾತಿಯವರನ್ನು ಮುಟ್ಟಿದುದಕ್ಕೆ ಇದೇ ಶಿಕ್ಷೆ' ಎಂದು ಬರೆದು, ನಗರದ ಬೀದಿ ಬೀದಿಗಳಲ್ಲಿ ತಮ್ಮಟೆ ಬಡಿದು ಸಾರುತ್ತಾ ಮೆರವಣಿಗೆ ತೆಗೆದರು. ಅವರು ಪೊಲೀಸರಿಗೆ ದೂರು ಕೊಟ್ಟಾಗ, ಆಪಾದಿತರು ಶಿಕ್ಷೆ ಕೊಟ್ಟದ್ದು ನಿಜವೆಂದೂ ದಾಮು-ಲಕ್ಷ್ಮಣರು ಮೊದಲೇ ಶಿಕ್ಷೆಗೆ ಒಪ್ಪಿಕೊಂಡಿದ್ದರು ಎಂದೂ ಹೇಳಿದರು. ಮುಂದೆ ವಿವರಣೆ ಬೇಕಿಲ್ಲ ಜೀವಭಯದಿಂದ ಅವರು ಇಂಥ ಅವಮಾನ ಶಿಕ್ಷೆಗೆ ಒಪ್ಪಿದ್ದರು. (ಕಂಬಾಲಪಲ್ಲಿಯ ಸಾಕ್ಷಿದಾರ ದಲಿತರು ಕೋರ್ಟಿನಲ್ಲಿ ಹಾಸ್ಟೈಲ್ ಆಗಿ, ಸವರ್ಣೀಯ ಅಪರಾಧಿಗಳು ಈಚೆಗೆ ಬಿಡುಗಡೆಯಾದ ಘಟನೆ ನೆನಪಾಗುತ್ತದೆ.)

ಈ ಬಗೆಯ ಅನೇಕಾನೇಕ ಪ್ರಸಂಗಗಳನ್ನು ಅಂಬೇಡ್ಕರ್ ಅವರ ಕೃತಿಯಲ್ಲಿ ಕಾಣಬಹುದು. ಸವರ್ಣೀಯ ಹಿಂದೂಗಳು ನಿರ್ಮಿಸಿರುವ ಜಾತಿ ವ್ಯವಸ್ಥೆಯ ಸೌಧದ ಪಾಯದಡಿಯಲ್ಲಿ ಸಿಕ್ಕಿ ಅಪ್ಪಚ್ಚಿಯಾಗಿರುವ ದಲಿತರ ಅಸಹಾಯಕ ಯಾತನಾಮಯ ಚಿತ್ರ ಕಣ್ಣಿಗೆ ಕಟ್ಟುತ್ತದೆ. ಅಸ್ಪೃಶ್ಯತೆ ಎಂಬುದು ಜಾತಿ ವ್ಯವಸ್ಥೆಯ ಅವಿಭಾಜ್ಯ ಅಂಗವಾಗಿ ಅನಾದಿಕಾಲದಿಂದಲೂ ಇಲ್ಲಿ ಚಾಲ್ತಿಯಲ್ಲಿದೆ. ವೃತ್ತಿ ವಿಂಗಡಣೆ ಗುಣಕರ್ಮಾನುಸಾರವೆಂದು ಹೇಳಿಕೊಳ್ಳುವ ಹಿಂದೂಗಳು ಹುಟ್ಟು ಹಾಕಿದ ಈ ವ್ಯವಸ್ಥೆ ಮನುಕುಲ ತಲೆ ತಗ್ಗಿಸುವಷ್ಟು ಕರಾಳವೂ, ಮಾನವ ವಿರೋಧಿಯೂ ಆಗಿದೆಯಷ್ಟೆ. ಇಂಥ ಪಾಶವೀ ಕ್ರೌರ್ಯದ ವಿರುದ್ಧ ಮೊಟ್ಟಮೊದಲ ಬಾರಿಗೆ ಬಂಡೆದ್ದವನು ಗೌತಮ ಬುದ್ಧ. ಇಹದಲ್ಲಾಗಲೀ, ಪರದಲ್ಲಾಗಲೀ ವ್ಯಕ್ತಿ ವಿಕಸನಕ್ಕೆ ಜಾತಿ ಮತ್ತು ವರ್ಣ ಎಷ್ಟು ಮಾತ್ರವೂ ಕಾರಣವಲ್ಲವೆಂದು ಬೌದ್ಧ ದರ್ಶನ ಸಾರಿತು. ಆದರೆ ಬುದ್ಧನ ಬೋಧನೆಗಳು ಸಹ ಬೃಹತ್ ಭಾರತದ ಜಾತಿ ವ್ಯವಸ್ಥೆಯ ಮಹಾಸೌಧವನ್ನು ಉರುಳಿಸದಾಯಿತು. ಆದರೂ ಅದರ ತಳಪಾಯ ಸ್ವಲ್ಪ ಕಂಪಿಸಲು ಶುರುವಾಯಿತು ಆಗ. ಅಷ್ಟರಲ್ಲಿ ಎಚ್ಚೆತ್ತುಕೊಂಡ ಬ್ರಾಹ್ಮಣ ವರ್ಗ, ಬುದ್ಧನು ವಿಷ್ಣುವಿನ ಅವತಾರವೆಂದು ಹೇಳಿ ಅವನನ್ನೇ ಹೈಜಾಕ್ ಮಾಡಿಕೊಂಡುಬಿಟ್ಟಿತು.

ಬುದ್ಧನ ತರುವಾಯ ಬಂದ ಭಕ್ತಿಪಂಥವು ಜಾತಿ ಪದ್ಧತಿಯನ್ನು ಮೂಲೋತ್ಪಾಟನ ಮಾಡಲು ತನ್ನ ಶಕ್ತಿ ಮೀರಿ ಪ್ರಯತ್ನಿಸಿತು. ಮಾನವರೆಲ್ಲ ಸರಿಸಮಾನರೆಂದು ಸಾರಿದ ಭಕ್ತಿ ಚಳುವಳಿ ಯಜ್ಞ ಯಾಗಾದಿಗಳನ್ನು ಖಂಡಿಸಿ, ಮೂಢನಂಬಿಕೆ, ಅಂಧಶ್ರದ್ಧೆ ಕಂದಾಚಾರ, ಜಾತಿ ಪದ್ಧತಿ ಇತ್ಯಾದಿಗಳ ವಿರುದ್ಧ ಸಮರ ಸಾರಿತು. ಗುಡಿ-ಗೋಪುರಗಳಲ್ಲಿ ಕೀಲಿಸಿಹೋಗಿದ್ದ ದೇವರನ್ನು ಭಕ್ತಿಧ್ಯಾನಗಳ ಮೂಲಕ ತಮ್ಮ ಆತ್ಮಸಂಗಾಟಕ್ಕೆ ತಂದುಕೊಂಡದ್ದು ಭಕ್ತಿಪಂಥದ ಒಂದು ಮಹಾನ್ ಸಾಧನೆ. ಸಂಗೀತಾದಿ ಕಲೆಗಳ ಮೂಲಕ ದೀನದಲಿತರೂ ದೈವ ಸಾಕ್ಷಾತ್ಕಾರ ಪಡೆಯಬಹುದೆಂದು ಭಕ್ತಿ ಚಳುವಳಿ ನಂಬಿತು. ಅಸ್ಪೃಶ್ಯರಿಗೆ ದೇವಾಲಯ ಪ್ರವೇಶ ದೊರೆಯದಿದ್ದರೂ ಆತ್ಮವಿಶ್ರಾಂತಿಗೆ ಅವಕಾಶ ಕಲ್ಪಿಸಿತು. ಹೀಗೇ ಸೂಫಿ-ದತ್ತ-ದಾಸಪಂಥಗಳೂ ದೀನಾನಾಥ ದಲಿತರ ಬಳಿಗೆ ಹೋಗಿ ಸಂತೈಸಿದವು.

ಶತಶತಮಾನಗಳ ದೀರ್ಘ ಇತಿಹಾಸವಿರುವ ಅಸ್ಪೃಶ್ಯರ ಅಸ್ತಿತ್ವದ ಬಗ್ಗೆ ಕನ್ನಡ ಮಧ್ಯಕಾಲೀನ ಸಾಹಿತ್ಯವು ಹೇಗೆ ಪ್ರತಿಕ್ರಿಯಿಸಿತು ಎಂಬ ವಿಚಾರ ತೀವ್ರ ಕುತೂಹಲಕರವಾಗಿದೆ. ಈ ಕಾಲಾವಧಿಯನ್ನು ಕ್ರಿ.ಶ. ೧೦ರಿಂದ ೧೫ರವರೆಗೆ ಎಂದು ಗುರುತಿಸಿಕೊಳ್ಳಲಾಗಿದೆ. ಆದರೆ ಇದೆಲ್ಲ ಅಧ್ಯಯನದ ಸೌಕರ್ಯಕ್ಕಾಗಿ ಮಾತ್ರ. ಈ ಕಾಲಘಟ್ಟದಲ್ಲಿ ರಚಿಸಲ್ಪಟ್ಟ ಕೆಲವು ಸಾಹಿತ್ಯಕೃತಿಗಳು ಅಸ್ಪೃಶ್ಯರ ಅಸ್ತಿತ್ವದ ಬಗ್ಗೆ ಅನೇಕ ಮಹತ್ವದ ಮಾಹಿತಿಗಳನ್ನು ಹೊರಹಾಕುತ್ತವೆ. ಶೈವಭಕ್ತಿ ಚಳುವಳಿಯು ತಮಿಳುನಾಡಿನಿಂದ ಕರ್ನಾಟಕಕ್ಕೆ ಪ್ರವೇಶಿಸಿತು. ಈ ಅವಧಿಯಲ್ಲಿ ಇಲ್ಲಿ ಆಳುತ್ತಿದ್ದ ದೊರೆ ಚಾಲುಕ್ಯರ ಆರನೇ ವಿಕ್ರಮಾದಿತ್ಯ. ಅವನ ಆಸ್ಥಾನದಲ್ಲಿ ಅಧಿಕಾರಿಗಳಾಗಿ ಇದ್ದವರು ಕೊಂಡಗುಳಿ ಕೇಶಿರಾಜ ಮತ್ತು ತೆಲುಗು ಬೊಮ್ಮಣ್ಣ ಎಂಬ ಶೈವ ಭಕ್ತರು. ಅಂದಿನ ಚಾತುರ್ವರ್ಣ್ಯದ ಅಸಮಾನತೆಯ ವಿರುದ್ಧ ಅವರು ಬಂಡೆದ್ದು ಅಧಿಕಾರ ತ್ಯಜಿಸಿ, ಶಿವಭಕ್ತರಾದ ಅಸ್ಪೃಶ್ಯರ ಬಳಿಗೆ ಹೊರಟುಹೋಗುತ್ತಾರೆ. ಅಸ್ಪೃಶ್ಯರ ಬಗೆಗಿನ ಇವರ ಪ್ರೇಮ ಮುಂದೆ ವೀರಶೈವ ವಚನಕಾರರಿಗೆ ಸ್ಫೂರ್ತಿ ಸೆಲೆಯಾಯಿತು.

ಇವರಿಬ್ಬರ ಜೀವಿತ ವಿಚಾರಗಳ ಒಟ್ಟು ಸಾರಾಂಶವೆಂದರೆ, ವೀರಶೈವ ಧರ್ಮವು ಅಸ್ಪೃಶ್ಯರಾದವರ ಬಗ್ಗೆ ಮೊಟ್ಟಮೊದಲ ಬಾರಿಗೆ ಒಲವು ತೋರಿದ್ದು ಮತ್ತು ಆಪ್ತವಾಗಿ ನಡೆಸಿಕೊಂಡದ್ದು.

ಕನ್ನಡ ವಚನ ಚಳುವಳಿಯ ಆಶೋತ್ತರಗಳು ವಚನ ಸಾಹಿತ್ಯದಲ್ಲಿ ಅನನ್ಯವಾಗಿ ಪ್ರಕಟಗೊಂಡವು. ಈ ಸಾಹಿತ್ಯ ಕೆಳವರ್ಗದವರ ಜೊತೆ ಆತ್ಮೀಯ ಸಂವಾದ ನಡೆಸಿತು. ಇದರಿಂದ ಸ್ಫೂರ್ತಿಗೊಂಡ ಕೆಳವರ್ಗದ ಭಕ್ತರು ಇದೇ ಮೊದಲು ಎಂಬಂತೆ ಆತ್ಮವಿಶ್ವಾಸದಿಂದ, ಆತ್ಮಪ್ರತ್ಯಯದಿಂದ ಸವರ್ಣೀಯರ ವಿರುದ್ಧ ಬಂಡೆದ್ದರು. ಆಗ ಕರ್ನಾಟಕದಲ್ಲಿ ಒಮ್ಮಿಂದೊಮ್ಮೆಗೇ ಸಾಮಾಜಿಕ-ಆರ್ಥಿಕ-ಧಾರ್ಮಿಕ-ರಾಜಕೀಯ ಕ್ಷೇತ್ರಗಳಲ್ಲಿ ಅಭೂತಪೂರ್ವ ಪಲ್ಲಟಗಳು ಕಾಣಿಸಿಕೊಂಡವು. ಆದರೆ ಕಲ್ಯಾಣ ಕ್ರಾಂತಿಯಲ್ಲಿ ತಣ್ಣಗಾದವು.

ಇದಕ್ಕೂ ಮೊದಲು ಆದಿಕವಿ ಪಂಪನೇ ಕುಲಶ್ರೇಷ್ಠತೆಯನ್ನು ಅಲ್ಲಗಳೆದು 'ಮಾನವ ಕುಲವೆಲ್ಲಂ ತಾನೊಂದೆವಲಂ' ಎಂದು ನಾಂದಿ ಹಾಡಿದ. ಪಂಪನ ಕರ್ಣ ವಿಪ್ರಶ್ರೇಷ್ಠರಿಗೆ ನಿಮ್ಮ ಕುಲ ನಿಮಗೆ ವ್ಯಾಕುಲವನ್ನುಂಟುಮಾಡುತ್ತದೆ ಎಂದು ಭವಿಷ್ಯ ನುಡಿದಿದ್ದ. ಬಹಿಷ್ಕೃತ ಭಾರತದ ಕರ್ಣ ರಸಾಯನವೇ ಪಂಪಭಾರತ. ಜಾತಿ ಭಾರತದಲ್ಲಿ ಹೀಗೆ ಸೊಳ್ ಪಡೆಯಲು ಹೊರಟ ಆದಿಕವಿ ಪಂಪನ ಸೊಳ್ ನುಡಿಗಳು ವಚನ ಸಾಹಿತ್ಯಕ್ಕೆ ಉಚಿತ ವೇದಿಕೆಯನ್ನು ಸಜ್ಜುಗೊಳಿಸಿದವು. ವಚನ ಚಳುವಳಿಯಲ್ಲಿ ವಿಪ್ರ ಮೊದಲುಗೊಂಡು ಅಂತ್ಯಜನವರೆಗೆ ಅಂಗದ ಮೇಲೆ ಲಿಂಗ ತಳೆದವರೆಲ್ಲಾ

ಒಂದೇ ಕುಲದವರಾದರು. ಹುಟ್ಟಿನ ಶ್ರೇಷ್ಠತೆಯನ್ನು ಪುಡಿಗುಟ್ಟಿ ಭಕ್ತಿ ಪಾರಮ್ಯದ ಮಂದಾರವನ್ನು ಅರಳಿಸಿದವರು ವಚನಕಾರರು. ಹಾರುವ ಕುಲಜನಾದ ಬಸವಣ್ಣ ತನ್ನ ಕುಲಶ್ರೇಷ್ಠತೆಯನ್ನು ಅಪಮೌಲ್ಯೀಕರಣಕ್ಕೊಳಪಡಿಸಿ ಅಸ್ಪೃಶ್ಯರೊಂದಿಗೆ ಆಪ್ತತೆಯನ್ನು ಗಳಿಸಿಕೊಳ್ಳಲು ತನ್ನ ಜೀವಿತವನ್ನೇ ಪಣಕ್ಕಿಟ್ಟ.

ಚೆನ್ನಯ್ಯನ ಮನೆಯ ದಾಸಿಯ ಮಗನು
ಕಕ್ಕಯ್ಯನ ಮನೆಯ ದಾಸಿಯ ಮಗಳು
ಇವರಿಬ್ಬರು ಹೊಲದಲ್ಲಿ ಬೆರಣಿಗೆ ಹೋಗಿ ಸಂಗವ ಮಾಡಿದರು
ಇವರಿಬ್ಬರಿಗೆ ಹುಟ್ಟಿದ ಮಗ ನಾನು

– ಎಂದು ಹೇಳುವ ಮೂಲಕ ಬಸವಣ್ಣ ಜಾತಿ ಹಿಂದೂಗಳ ಎಂದಿನ ಪಾವಿತ್ರ್ಯಭಂಗ ಮಾಡಿ ಪ್ರತಿಸಂಸ್ಕೃತಿಯೊಂದರ ನಿರ್ಮಾಣಕ್ಕೆ ಕಾತರನಾದ. ಹೀಗೆ ಮೇಲು-ಕೀಳು ಎಂಬ ಜನ್ಮಾಧಾರಿತ ತಾರತಮ್ಯವನ್ನು ನಿರಾಕರಿಸಿದ ವಚನ ಚಳುವಳಿ ಕರ್ನಾಟಕದ ಮಟ್ಟಿಗೆ ಅಸ್ಪೃಶ್ಯರ ಪ್ರಥಮ ಆಂದೋಲನವೆನ್ನಬಹುದು.

ಅಸ್ಪೃಶ್ಯತೆಯ ಆಚರಣೆಯ ವಿರುದ್ಧ ಬಸವಣ್ಣನಿಗಿಂತ ತೀಕ್ಷ್ಣವಾಗಿ ಗದರಿಸಿ ಪ್ರತಿಕ್ರಿಯಿಸಿದವನೆಂದರೆ ಅಲ್ಲಮಪ್ರಭು. ಹಿಂದಣ ಪರಂಪರೆಯಲ್ಲಿನ ನ್ಯೂನತೆಯನ್ನು ಕುರಿತ ಅಲ್ಲಮನ ಆರೋಪ ಹೀಗಿದೆ :

ವೇದವೆಂಬುದು ಓದಿನ ಮಾತು
ಶಾಸ್ತ್ರವೆಂಬುದು ಸಂತೆಯ ಸುದ್ದಿ
ಪುರಾಣವೆಂಬುದು ಪುಂಡರ ಗೋಷ್ಠಿ
ತರ್ಕವೆಂಬುದು ತಗರ ಹೋರಟೆ
ಭಕ್ತಿಯೆಂಬುದು ತೋರುಂಬ ಲಾಭ
ಗುಹೇಶ್ವರನೆಂಬುದು ಮೀಱಿದ ಘನವು.

ಇಂತಹ ಕ್ಷುದ್ರ ಜನರ ಕುಬ್ಜ ಬಾಹುಗಳಿಗೆ ಗುಹೇಶ್ವರನು ನಿಲುಕುವನೇ ? ಡಾ॥ ಎಲ್. ಬಸವರಾಜು ಅವರು ತಮ್ಮ ಸಂಪಾದಿತ ಕೃತಿ 'ಅಲ್ಲಮನ ವಚನಗಳು' ಪುಸ್ತಕದ ಪೀಠಿಕೆಯಲ್ಲಿ ಅವನ ಧಾತು-ಧೋರಣೆಯ ಬಗ್ಗೆ ಪ್ರಸ್ತಾಪಿಸುತ್ತಾ ಆತ ಈ ಲೋಕದ 'ವಿದ್ರಾವಕ ದೃಶ್ಯವನ್ನು ಕಂಡು ಬೆಂಕಿಯಾಗಿ, ಜ್ಞಾನಿಗಳೆನಿಸಿಕೊಂಡವರ ಕಾಲಿಗೆ ಕೆಂಡವಾದನು, ದಲಿತರೆನಿಸಿಕೊಂಡವರ ಕೈಗೆ ಉರಿಯುವ ಪಂಜಾದನು' ಎಂದು ಉಚಿತೋಚಿತವಾಗಿ ಗ್ರಹಿಸುತ್ತಾರೆ.

ವಚನಕಾರರ ಪ್ರಕಾರ, ಅಸ್ಪೃಶ್ಯ ಶಿವಭಕ್ತ ಬ್ರಾಹ್ಮಣನಿಗಿಂತ ಶ್ರೇಷ್ಠ. ಕೆಳವರ್ಗದ ವಚನಕಾರ್ತಿ ಕಾಳವ್ವೆ ಅಸ್ಪೃಶ್ಯರ ಆಹಾರ ಪದ್ಧತಿಯು ಬ್ರಾಹ್ಮಣರ ಆಹಾರ ಪದ್ಧತಿಗಿಂತ ಯಾವ ರೀತಿಯಲ್ಲೂ ಕೀಳಲ್ಲವೆಂದು ಸಮರ್ಥಿಸಿಕೊಳ್ಳುತ್ತಾಳೆ. ಹೀಗೆ ಜಾತಿ ವ್ಯವಸ್ಥೆಯ ವಿರುದ್ಧ ದಂಗೆ ಏಳುವ ಕಾಳವ್ವೆ ಹೊಲೆಮಾದಿಗರ ಆತ್ಮವಿಶ್ವಾಸದ ಪ್ರತೀಕವಾಗುತ್ತಾಳೆ. ಸದ್ಯಕ್ಕೆ ಲಭ್ಯವಿರುವ ಸುಮಾರು ೨೦೦ ಜನ ಕೆಳವರ್ಗದ ವಚನಕಾರರಲ್ಲಿ ಅಸ್ಪೃಶ್ಯ ವರ್ಗಕ್ಕೆ ಸೇರಿದವರ ಸಂಖ್ಯೆ ತೀರ ಕಡಿಮೆಯೇ. ಅವರಲ್ಲಿ ಮುಖ್ಯರಾದವರೆಂದರೆ, ಮಾದಾರ ಚೆನ್ನಯ್ಯ, ದೋಹರ ಕಕ್ಕಯ್ಯ, ಉರಿಲಿಂಗ ಪೆದ್ದಿ, ಮಾದಾರ ಧೂಳಯ್ಯ, ಕಾಳವ್ವ, ಬಹುರೂಪಿ ಚೌಡಯ್ಯ, ಅಮ್ಮಿದೇವಯ್ಯ, ಢಕ್ಕೆಯ ಬೊಮ್ಮಣ್ಣ, ನಗೆಯ ಮಾರಿತಂದೆ, ಅಂಬಿಗರ ಚೌಡಯ್ಯ, ಕಲಕೇತಿ ಬೊಮ್ಮಯ್ಯ, ಭಿಕಾರಿ ಭೀಮಯ್ಯ, ವೀರ ಗೊಲ್ಲಾಳ, ಒಕ್ಕಲಿಗ ಮುದ್ದಣ್ಣ, ಕುರುಗಾಹಿ ರಾಮಣ್ಣ, ಕಂಬದ ಮಾರಿತಂದೆ, ಹೆಂಡದ ಮಾರಯ್ಯ. ಇವರೆಲ್ಲರೂ ಸವರ್ಣೀಯ ಸಮಾಜದ ಅಂಕುಡೊಂಕು, ಓರೆಕೋರೆ, ದೋಷ-ದುಷ್ಟ ಬುದ್ಧಿಗಳನ್ನು ನಿಷ್ಠುರವಾಗಿ, ನಿರ್ಭಯವಾಗಿ ಖಂಡಿಸುತ್ತಾರೆ.

ರಗಳೆಯ ಕವಿಯೆಂದೇ ಪ್ರಸಿದ್ಧನಾದ ಹರಿಹರ ವಚನಕಾರರಿಗೆ ತೀರ ಹತ್ತಿರದವನು. ಅಸ್ಪೃಶ್ಯ ಶಿವಭಕ್ತರ ಬಗ್ಗೆ ಈತ ಇನ್ನಷ್ಟು ಆಪ್ತವಾಗಿ ಉತ್ಸಾಹಭರಿತನಾಗಿ ಬರೆಯುತ್ತಾನೆ. ಇವನಿಗೆ ಡಾಂಭಿಕ ಶಿವಭಕ್ತರಿಗಿಂತ ಸಂಬೋಳಿ ನಾಗಿದೇವನಂತಹ ಅಸ್ಪೃಶ್ಯ ಶಿವಭಕ್ತನ ಮೇಲೆ ಹೆಚ್ಚು ಒಲವು; ಕರಿಕಾಲ ಚೋಳರಾಜನ ಆಡಂಬರದ ಭಕ್ತಿಗಿಂತ ಅಸ್ಪೃಶ್ಯ ಚೆನ್ನಯ್ಯನ ಗುಪ್ತ ಭಕ್ತಿ ಇವನಿಗೆ ಬಲು ಇಷ್ಟ. ಒಟ್ಟಿನಲ್ಲಿ ಶಿವ ಒಲಿದಾತನೇ ಸತ್ಕುಲಜನೆಂದು ವಚನಕಾರರ ಸೆರಗಿಡಿದ ಈತ ಭಕ್ತಿ ಉತ್ಸಾಹದಿಂದ ಮೇರೆ ಮೀರುತ್ತಾನೆ. ಹಾಗೆಯೇ ಅನ್ಯಮತೀಯ ಭವಿಗಳ ಮೇಲೆ ಕೆಂಡದ ಮಳೆಯಾಗಿ ಸುರಿಯುತ್ತಾನೆ. ಭವಿ ಬ್ರಾಹ್ಮಣನಿಗಿಂತ ಭಕ್ತ ಹೊಲೆಯನನ್ನು ವೀರಾವೇಶದಿಂದ ಪವಾಡಗಳ ಸಮೇತ ಕೊಂಡಾಡುವ ಹರಿಹರ, ಅಂಥವರಿಗೆ ಸೂಕ್ತ ಸದ್ಗತಿ ಕಾಣಿಸುತ್ತಾನೆ. ಅಲ್ಲದೆ ಹೊಲೆಮಾದಿಗರ ಜೀವನಪದ್ಧತಿ, ಆಹಾರಾಭ್ಯಾಸ ಕ್ರಮ, ಮಾಡುವ ಉದ್ಯೋಗ, ಆಡುವ ಭಾಷೆ – ಈ ಎಲ್ಲವನ್ನೂ ಕಿಂಚಿತ್ ಮುಜುಗರವಿಲ್ಲದೆ ಆತ ನಿರೂಪಿಸುತ್ತಾನೆ. ಆದರೆ ಭಕ್ತಿ-ಪವಾಡಗಳ ತೆರೆಮರೆಯಲ್ಲಿ ಅಸ್ಪೃಶ್ಯರ ಕರಾಳ ವಾಸ್ತವ ಚಿತ್ರಗಳನ್ನು ಮರೆಮಾಚಿಬಿಡುತ್ತಾನೆ.

ವಚನಕಾರರಾಗಲೀ, ಹರಿಹರನಾಗಲೀ ಶಿವಭಕ್ತರಾದ ಹೊಲೆಯರ ಬಗ್ಗೆ ಆವೇಶ ಭರಿತರಾಗಿ ಮಾತನಾಡುವವರೇ ಹೊರತು ಶಿವಭಕ್ತರಲ್ಲದ ಅಸ್ಪೃಶ್ಯರ ಬಗ್ಗೆ ಅಷ್ಟೇನೂ ಉತ್ಸಾಹ ತೋರುವುದಿಲ್ಲ. ಪ್ರೊ॥ ರಂಗಾರೆಡ್ಡಿ ಕೋಡಿರಾಂಪುರ ಅವರು ಗ್ರಹಿಸಿರುವಂತೆ ಇದು ಅವರ ಚಿಂತನಾಕ್ರಮದ ಮಿತಿಯೇ ಎನ್ನಬಹುದು (ಕನ್ನಡ ಸಾಹಿತ್ಯದಲ್ಲಿ ಅಸ್ಪೃಶ್ಯತೆಯ ಪರಿಕಲ್ಪನೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಪುಟ ೧೮೪). ನಮ್ಮ ಇಂದಿನ ಧರ್ಮ ರಾಜಕಾರಣದ ಹಿನ್ನೆಲೆಯಲ್ಲಿ ಈ ಮಾತನ್ನು ಸ್ವಲ್ಪ ಸಮೀಕರಿಸಿ ನೋಡಬಹುದು. ಇವತ್ತು ಲಿಂಗಾಯತ ಮತವೆಂಬುದು ಅಲ್ಲಮಪ್ರಭು ಖಂಡಿಸುವಂತೆ ಭಕ್ತಿ ತೋರುಂಬ ಲಾಭವಾಗಿಬಿಟ್ಟಿದೆ. ಸಹಪಂಕ್ತಿ ಭೋಜನ, ಅಂತರಜಾತಿ ವಿವಾಹ ಈ ಸಂಬಂಧವಾಗಿ ಇವತ್ತಿನ ಲಿಂಗವಂತ ಜನ ಆಚರಿಸುವ ಅಸ್ಪೃಶ್ಯತೆ ಯಾರಿಗಾದರೂ ಅಸಹ್ಯ ತರಿಸುತ್ತದೆ. ಕೆಲವು ವೀರಶೈವ ಜಗದ್ಗುರುಗಳೂ ಕೂಡ ಸಂಘಪರಿವಾರದವರು ಹಮ್ಮಿಕೊಳ್ಳುವ ವಿರಾಟ್ ಹಿಂದೂ ಉತ್ಸವಗಳಲ್ಲಿ ಲಜ್ಜೆಗೇಡಿಗಳಾಗಿ ಭಾಗವಹಿಸುತ್ತಿರುವುದು ಬಸವಾದಿ ಶಿವಶರಣರಿಗೆ ಮಾಡುವ ಅಪಚಾರವೆಂದು ಹೇಳದೆ ವಿಧಿಯಿಲ್ಲ. ಇದನ್ನೆಲ್ಲ ಇಲ್ಲಿ ಪ್ರಸ್ತಾಪಿಸಿದ್ದಕ್ಕೆ ಕಾರಣ ಇಷ್ಟೇ : ಬಸವಣ್ಣ, ಅಲ್ಲಮರಂಥ ಶಿವಶರಣರ ಬಗ್ಗೆಯೇ ಮಡಿವಾಳ ಮಾಚಯ್ಯ, ಅಂಬಿಗರ ಚೌಡಯ್ಯ ಮುಂತಾದವರು ''ಇವರ ವಿಚಾರ ಜ್ಞಾನದಿರವಲ್ಲದೆ ಕ್ರಿಯಾಪರವಲ್ಲ''ವೆಂದು ಕಟುವಾಗಿ ವಿಮರ್ಶಿಸುತ್ತಾರೆ; ಅಲ್ಲಮನನ್ನು ಮಹೇಂದ್ರಜಾಲಕ ಎಂಬುದಾಗಿ ಟೀಕಿಸಿದ್ದಾರೆ.

**ಸವೆತ**

ಮರದ ತೊಗಟೆಯ ತುಂಬ
ಗೆದ್ದಲುಗಳ ಕವಚ
ಹೊರಗಿನ ಯುದ್ಧ ರಕ್ಷಣೆಗಲ್ಲ
ಒಳಗೇ ತರಿದು ಹೋಗುವ ಕದನ

ವಾಸುದೇವ ನಾಡಿಗ್
ಜವಾಹರ್ ನವೋದಯ ವಿದ್ಯಾಲಯ
ಏನಿಗದಲೆ, ಚಿಂತಾಮಣಿ, ಕೋಲಾರ

ಮಧ್ಯಯುಗ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಅಸ್ಪೃಶ್ಯರ ಜೀವಂತ ಸವಾಲುಗಳನ್ನು ಕೃತಿಯೊಳಕ್ಕೆ ಬರಮಾಡಿಕೊಂಡು ನ್ಯಾಯೋಚಿತವಾಗಿ ಹಾಗೂ ತರ್ಕಬದ್ಧವಾಗಿ ಅಸ್ಪೃಶ್ಯರ ಪರ ನಿಂತು ವಕಾಲತ್ತು ವಹಿಸಿ ಬರೆದ ಕವಿಯೆಂದರೆ ರಾಘವಾಂಕ ಮಾತ್ರ. ಅಲ್ಲಮಪ್ರಭು ನಿರ್ವಚಿಸಿರುವಂತೆ ಹರಿಶ್ಚಂದ್ರ ಕಾವ್ಯ 'ಹಿಂದಣ ಅನಂತವನು, ಮುಂದಣ ಅನಂತವನು, ಒಂದು ದಿನ ಒಳಕೊಂಡಿತ್ತು ನೋಡಾ' ಎಂಬಂತಿದ್ದು ಅಸ್ಪೃಶ್ಯರ ಸಂಕಷ್ಟಗಳನ್ನು ಹೊತ್ತುನಿಂತ ನಾದಬಿಂದು ಕಳಾಸ್ವರೂಪಿಯಾಗಿದೆ. ಅಸ್ಪೃಶ್ಯತೆ ಆಚರಣೆ ನೆನ್ನೆ ಮೊನ್ನೆಯದಲ್ಲ ; ನಾಳೆ ನಾಡಿದ್ದರಲ್ಲಿ ಹೋಗಬಹುದಾದುದಲ್ಲ ; ಊರು ಇರುವವರೆಗೆ ಹೊಲಗೇರಿ ಇರತಕ್ಕದ್ದೇ ಎಂಬುದನ್ನು ಪ್ರತಿಮಿಸಿ ಹೇಳುತ್ತದೆ ಹರಿಶ್ಚಂದ್ರ ಕಾವ್ಯ. ಎಂದರೆ ಅಸ್ಪೃಶ್ಯತೆಯ ಆಚರಣೆಯ ಬಗ್ಗೆ ಮನುಕುಲ ಅನಾದಿಕಾಲದಿಂದಲೂ ಅನುಸರಿಸಿಕೊಂಡು ಬರುತ್ತಿರುವ ಧಾಟಿ-ಧೋರಣೆಯ ವಾಸ್ತವ ಚಿತ್ರ ಈ ಕಾವ್ಯದಲ್ಲಿ ಸಜೀವವಾಗಿದೆ, ಸಚಿತ್ರವಾಗಿದೆ, ಸವರ್ಣವಾಗಿದೆ.

ಅಸ್ಪೃಶ್ಯತೆಯ ಆಚರಣೆಯ ಬಗ್ಗೆ ವಚನಕಾರರ ಧೋರಣೆ ಕೇವಲ ಮೇಲುವರ್ಗದ ಒಂದು ಸಂವಾದ ರೂಪದಲ್ಲಿದ್ದರೆ, ಹರಿಶ್ಚಂದ್ರ ಕಾವ್ಯದಲ್ಲಿ ಬರುವ ಅಸ್ಪೃಶ್ಯರ ಸವಾಲುಗಳು ಮಾರ್ಮಿಕವಾಗಿವೆ. ಸಾಮಾಜಿಕವಾಗಿ ಈ ಸವಾಲುಗಳು ಎಲ್ಲ ಕಾಲಕ್ಕೂ ಪ್ರಸ್ತುತವಾಗುವಂತಿವೆ. ಈ ಹಿನ್ನೆಲೆಯಲ್ಲಿ ಹರಿಶ್ಚಂದ್ರ ಕಾವ್ಯದ ಎರಡು ಮುಖ್ಯ ಪ್ರಸಂಗಗಳನ್ನು ನಾವಿಲ್ಲಿ ಪರಿಶೀಲನೆಗೆ ಎತ್ತಿಕೊಳ್ಳಬಹುದು. ಒಂದು ಹರಿಶ್ಚಂದ್ರ ಮತ್ತು ಗಾನರಾಣಿಯರ ಪ್ರಸಂಗ; ಇನ್ನೊಂದು, ಹರಿಶ್ಚಂದ್ರ ಮತ್ತು ವೀರಬಾಹು ಅವರ ಪ್ರಸಂಗ. ಇದರಲ್ಲಿ ಮೊದಲನೆಯದು ಅಸ್ಪೃಶ್ಯತೆಯ ಆಚರಣೆಯ ವಿರುದ್ಧ ಥಿಯರಿಟಿಕಲ್ ಆದ ಸವಾಲು-ಜವಾಬು ಸ್ವರೂಪದಲ್ಲಿದ್ದರೆ, ಎರಡನೆಯದು ಅಸ್ಪೃಶ್ಯತೆಯ ಆಚರಣೆಯ ವಿರುದ್ಧ ಪ್ರಾಕ್ಟಿಕಲ್ ಆಗಿ ತಿರುಗಿಬಿದ್ದು ಅದನ್ನು ಬಗ್ಗಿಸುವ ಒಗ್ಗಿಸುವ ಪ್ರಕ್ರಿಯೆಯಾಗಿದೆ.

ಬೇಟೆಯಿಂದ ಆಯಾಸಗೊಂಡಿದ್ದ ಹರಿಶ್ಚಂದ್ರ ರಾಜನನ್ನು ಹೊಲತಿ ಹುಡುಗಿಯರು ತಮ್ಮ ಗಾನ ನರ್ತನಗಳಿಂದ ಮುದಗೊಳಿಸುತ್ತಾರಷ್ಟೆ. ಪ್ರತಿಯಾಗಿ ಅವರಿಗೆ ಉಡುಗೊರೆಯನ್ನು ಕೊಡಲು ಹೋದಾಗ, ಅವರು ಬೇಡುವುದು ಮುತ್ತಿನ ಸತ್ತಿಗೆಯನ್ನು. ''ಅದು ಅರಸುತನದ ಲಾಂಛನ, ಕೊಡಲು ಸಾಧ್ಯವಿಲ್ಲ'' ಎಂದಾಗ ''ಹೋಗಲಿ ಮದುವೆಯಾಗು'' ಎನ್ನುತ್ತಾರೆ. ಆಗ ಸಹಜವಾಗಿಯೇ ರಘುಕುಲದ ಶ್ರೇಷ್ಠತೆ ಹರಿಶ್ಚಂದ್ರನಲ್ಲಿ ಗರಿಗೆದರುತ್ತದೆ. ತನ್ನದು ಶ್ರೇಷ್ಠ ಕ್ಷತ್ರಿಯ ಕುಲ, ಅದನ್ನು ಕೆಡಿಸಲಾಗದು ಎಂದು ಅವರ ಪ್ರಸ್ತಾವವನ್ನು ತಿರಸ್ಕರಿಸುತ್ತಾನೆ. ಆದರೆ ಅವರು ಜಗ್ಗುವವರಲ್ಲ ''ರೂಪು ಜವ್ವನವಿರಲು ಕುಲದ ಮಾತೇಕೆ''ಎಂದು ಪ್ರಶ್ನಿಸುತ್ತಾರೆ. ''ಇಷ್ಟಕ್ಕು ಬಚ್ಚಲುದಕಂ ತಿಳಿದಡಾರ ಮೀಹಕ್ಕೆ ಯೋಗ್ಯಂ'' ಎಂದು ಅಸಹ್ಯಪಟ್ಟುಕೊಂಡ ರಾಜ, ಈ 'ಮಾತು ತಾ ಹೊಲೆ'ಯೆಂದು ಜರೆದಾಡುತ್ತಾನೆ. ಆದರೆ ಆ ಹೊಲತಿಯರು ಸಾಮಾನ್ಯ ಗಟ್ಟಿಗಿತ್ತಿಯರಲ್ಲ! ಆಶ್ಚರ್ಯಕರ ಸವಾಲುಗಳನ್ನೇ ಎಸೆಯುತ್ತಾರೆ ಆಧುನಿಕ ವಕೀಲರಂತೆ :

*ಹಾಡನೊಲಿದಾಲಿಸಿದ ಕಿವಿಗೆ ಹೊಲೆಯಿಲ್ಲ, ಮಾ*
*ತಾಡಿ ಹೊಗಳಿದ ಬಾಯ್ಗೆ ಹೊಲೆಯಿಲ್ಲ, ರೂಪನೆರೆ*
*ನೋಡಿದ ವಿಲೋಚನಕೆ ಹೊಲೆಯಿಲ್ಲ, ಮೆಯ್‌ಮುಡಿಗಳಿಂ ಸುಳಿವ*
*ತಂಗಾಳಿಯಿಂ*
*ತೀಡುವ ಸುಗಂಧಮಂ ವಾಸಿಸಿದ ನಾಸಿಕಕೆ*
*ನಾಡೆ ಹೊಲೆಯಿಲ್ಲ, ಸೋಂಕಿಂಗೆ ಹೊಲೆಯುಂಟಾಯ್ತೆ ?*
*ಕೂಡಿರ್ದ ಪಂಚೇಂದ್ರಿಯಂಗಳೊಳು ನಾಲ್ಕಧಮವೊಂದಧಿಕವೇ*
– ಎಂದರು ॥

ಕಾಲ-ದೇಶ-ಕ್ರಿಯೆಗಳು ಒಮ್ಮೆಗೆ ಸ್ಥಗಿತಗೊಂಡ ಅಮೃತೋಪಮ ಕ್ಷಣ ಇದು. ಸತ್ಕುಲಶೀಲ ಸೂರ್ಯವಂಶದ ದೊರೆ ಎದುರು ಸ್ತ್ರೀಯರು, ಅದೂ ಹೊಲತಿಯರು ನಿಂತು ಮಾತನಾಡಿದ ಇಂಥ ಪಂಥಾಹ್ವಾನ ಇತಿಹಾಸದಲ್ಲಿ ಇದೇ ಮೊದಲ ಸಲ ಘಟಿಸಿದ್ದು. ಹೀಗೆ ಹೊಲತಿಯರು ಬಂದು ಪ್ರಭುತ್ವದ ಎದುರು ಮಾತಾಡಿದ್ದು ''ಬಂದ ಕಾಲಗುಣವೋ ನಿಂದ ನೆಲದ ಗುಣವೋ ?'' ನಂಬಲಿಕ್ಕೇ ಆಗದು. ಆದರೂ ನಿಜ. ಆ ಹೊಲತಿಯರು ರಾಜನನ್ನು ''ಕೂಡಿರ್ದ ಪಂಚೇಂದ್ರಿಯಂಗಳೊಳು ನಾಲ್ಕಧಮವೊಂದಧಿಕವೇ'' ಎಂದು ಘಟ್ಟಿಸಿ ಕೇಳುವುದು ತೀರ ವಾಸ್ತವವೂ, ತರ್ಕಬದ್ಧವೂ ನ್ಯಾಯೋಚಿತವೂ ಆಗಿದೆ.

ಆದರೆ ಈ ಸನ್ನಿವೇಶದಲ್ಲಿ ಕ್ಷತ್ರಿಯ ಕುಲಶ್ರೇಷ್ಠನು ವ್ಯಕ್ತಪಡಿಸುವ ಅಸ್ಪೃಶ್ಯತಾ ಆಚರಣೆ ಘನ ಘೋರವೂ ಕಟು ಕ್ರೌರ್ಯವೂ ಹೀನ ಮನಸ್ಸಿನ ದ್ಯೋತಕವೂ ಆಗಿದೆ :



*ಏಗೆಯ್ದಡಂ ಕುಲಜರಧಮ ಸತಿಯರ ನೋಡ*
*ಲಾಗದು, ಅಱಿಯದೆ ಪಾಪದಿಂ ನೋಡಿದಡೆ ನುಡಿಸ*
*ಲಾಗದು, ಎಂತಕ್ಕೆ ನುಡಿಸಿದಡೆ ಮನ್ನಿಸಲಾಗದು, ಅನುಗೆಟ್ಟು ಮನ್ನಿಸಿದಡೆ*
*ಮೇಗೇನುವಂ ಕರೆದುಕೊಡಲಾಗದು, ಇತ್ತಡೆ ಅವ*
*ರೇಗೈಯ್ಯಲೊಪ್ಪದು. ಎನಗಿಂದು ನೀವಂಗನೆಯ*
*ರಾಗಿಪ್ಪೆವೆಂದಿರ್ದೆ ಸಲ್ಲದು, ಒಡತಿಯರಪ್ಪೆವು ಎನಲು ತೀರದೆ ?* – ಎಂದನು.

ಇದಿಷ್ಟೂ ಮೇಲೆ ಹೇಳಿದ ಧರ್ಮಶಾಸನಕಾರರ ಕಟ್ಟಳೆಗೆ ಚಾಚೂ ತಪ್ಪದಂತೆ ಅದನ್ನು ಅನುಷ್ಠಾನಕ್ಕೆ ತರುವ ವಿಧಾನವಾಗಿದೆ. ಹಿಂದೆ ಉಲ್ಲೇಖಿಸಿದ 'ದೂರಾ ಶೌಚಕಾರಿ' ಹಾಗೂ 'ದೃಶ್ಯಾ ಶೌಚಕಾರಿ'ಗಳ ಬಗೆಗಿರುವ ಕಟ್ಟುಕಟ್ಟಳೆಗಳನ್ನು ಸಮೀಕರಿಸಿಕೊಂಡು ನೋಡಬಹುದು.

ಹೀಗೆ ರಾಜನು ಹೊಲತಿಯರನ್ನು ಕಡೆಗಣಿಸಿ ಜರೆದಾಡಿದಾಗ ಅವರು ಅಷ್ಟಕ್ಕೇನೂ ಬಗ್ಗುವ ಗಿರಾಕಿಗಳಾಗಿರಲಿಲ್ಲ. ''ಎಳಸಿ, ಮೆಚ್ಚಿಸಿ, ಮರುಳ್ಗೊಳಿಸಿ, ಮತ್ತೊಲ್ಲನವನಿಪನೆಂದು, ಮೊರೆಯಿಡುತ್ತ ಇಳೆಯೊಳಗೆ ಸಾರುತ್ತ ದೂರುತ್ತ ಬಪ್ಪೆವು'' ಎಂದು ಆಧುನಿಕ ಅಸ್ಪೃಶ್ಯತೆ ಆಚರಣೆಯ ತಳತಂತ್ರದ ಬೆದರಿಕೆ ಒಡ್ಡುತ್ತಾರೆ. ದೇವನೂರು ಮಹಾದೇವರ ಕುಸುಮಬಾಲೆಯ ದಲಿತ ಪಾತ್ರಗಳು ಹೂಡುವ ತಳತಂತ್ರಗಳ ಮಿಂಚು ಹರಿಶ್ಚಂದ್ರ ಕಾವ್ಯದಲ್ಲಿ ಈ ಮೊದಲೇ ಹೊಳೆದು ಬಿಟ್ಟಂತೆ ಕಾಣುತ್ತದೆ. ಇನ್ನು ಹೇಳುವುದೇನಿದೆ ? ತರ್ಕಬದ್ಧವಾಗಿ, ನ್ಯಾಯೋಚಿತವಾಗಿ ಉತ್ತರಿಸಲಾರದ ಜನ ಕೈ ಮುಂದು ಮಾಡುವಂತೆ, ನಿರುತ್ತರನಾದ ಹರಿಶ್ಚಂದ್ರ ತನ್ನ ಮಂತ್ರಿಯನ್ನೂ ಜೊತೆಗೂಡಿಕೊಂಡು ಆ ಮಾಯದಬಲೆಯರನ್ನು ಹೊಡೆದೋಡಿಸಿಬಿಡುತ್ತಾನಷ್ಟೆ.

ಹರಿಶ್ಚಂದ್ರ ಕಾವ್ಯದ ಇನ್ನೊಂದು ಪ್ರಸಂಗ, ಹರಿಶ್ಚಂದ್ರ ಮತ್ತು ವೀರಬಾಹು ಇವರಿಗೆ ಸಂಬಂಧಿಸಿದ್ದು. ರಾಘವಾಂಕ ಕವಿ ಹೊಲತಿಯರ ಪ್ರಸಂಗದಲ್ಲಿ ಕುಲಶ್ರೇಷ್ಠತೆಯನ್ನು ಥಿಯರಿಟಿಕಲ್‌ಆಗಿ ಪ್ರಶ್ನಿಸಿ ನಿರುತ್ತರಗೊಳಿಸಿದರೆ, ವೀರಬಾಹುವಿನ ಪ್ರಸಂಗದಲ್ಲಿ ಅದನ್ನು ಪ್ರಾಕ್ಟಿಕಲ್ ಆಗಿ ಬಗ್ಗಿಸಿ ಮಗ್ಗಲು ಮುರಿಯುತ್ತಾನೆ. ಮೊದಲನೆಯದರಲ್ಲಿ ಕುಲ ಮದ, ಧನ ಮದ, ಅಧಿಕಾರ ಮದಗಳು ಒಟ್ಟಾಗಿ ಹೆಣ್ಣುಮಕ್ಕಳನ್ನು, ಅದೂ ಅಸ್ಪೃಶ್ಯ ಸ್ತ್ರೀಯರನ್ನು ಹೇಗೆ ನಡೆಸಿಕೊಡುತ್ತವೆ ಎಂಬುದರತ್ತ ಬೊಟ್ಟು ಮಾಡಿ ತೋರಿಸಿದರೆ, ಎರಡನೆಯದರಲ್ಲಿ ಈ ಮೂರು ಮದಗಳಳಿದ ಮೇಲೆ ಮನುಷ್ಯ ಹೇಗೆ ಅಪ್ಪಟ ಮನುಷ್ಯನಾಗಿ ಪ್ರಕಾಶಿಸುತ್ತಾನೆ ಎಂಬುದನ್ನು ನಿರ್ಲಿಪ್ತತೆಯಿಂದ ಚಿತ್ರಿಸಿ ತೋರಿಸುತ್ತಾನೆ.

ಹರಿಶ್ಚಂದ್ರ-ವೀರಬಾಹುವಿನ ಪ್ರಸಂಗದಲ್ಲಿ ನಾವು ಮುಖ್ಯವಾಗಿ ಗಮನಿಸ ಬೇಕಾದದ್ದು ವೀರಬಾಹು ವಾಸವಾಗಿದ್ದ ಮನೆ ಆವರಣ-ಪರಿಸರ. ಅದನ್ನು ಕುರಿತು ರಾಘವಾಂಕ ಸುಮಾರು ಎಂಟುನೂರು ವರ್ಷಗಳ ಹಿಂದೆ ಬಿಡಿಸಿ, ಹಿಡಿದಿರುವ ಅಸ್ಪೃಶ್ಯರ ಮನೆಯ ಡಾಕ್ಯುಮೆಂಟರಿ ಚಿತ್ರ ಇಂತಿದೆ ನೋಡಿ :

*ಹೊರಗೆ ಹಾಸಿದ ಹಸಿಯ ತೊಗಲ ಹೊದೆಯ, ಮಾಣ*
*ದೊಱಲಿ ಕೂಗಿಡುವ ನಾನಾ ಪ್ರಾಣಿ ವರ್ಗಮಂ*
*ಕೋಱುವ ಕೊಚ್ಚುವ ತಱುವ ಮುಱುವ ಕಾಸುವ ಕಡಿವ ಸೀಳ್ವ*
*ಹರಹುವ ಹಿಂಡುವ*
*ಹಱಿಯದ ಒಣಗಿಲುಗರಳ ಹಿಳಲ ತೋರಣದ ಚ*
*ಟ್ಟಱಿದ ಗೋಡೆಗಳ ರಕುತದ ಹೇಸಿಗೆಯನು ನೇ*
*ಸಱುಗುಲನಕಾಳಿಜಂ ಕಂಟಣಿಸಬೇಕೆಂದು ನೆರಹಿದದಂ*
*ನಿಳಯದೊಳಗೆ.*

ಅಸ್ಪೃಶ್ಯರು ಇಂಥ ಪ್ರತ್ಯೇಕ ಭೌಗೋಳಿಕ ಪರಿಸರದಲ್ಲಿ ನಾಯಿ ಹಂದಿಗಳಿಗಿಂತ ಕಡೆಯಾಗಿ ಬದುಕು ಸಾಗಿಸುತ್ತಿದ್ದಾರೆ ಎಂದು ಡಾ॥ ಅಂಬೇಡ್ಕರ್ ಹೇಳಿರುವುದನ್ನು ನಾವಿಲ್ಲಿ ಸ್ಮರಿಸಿಕೊಳ್ಳಬಹುದು. ಇಂಥ ಭಯಂಕರ ಪರಿಸರದಲ್ಲಿ ವೀರಬಾಹು ಹೇಗಿದ್ದನೆಂದರೆ :

*ಹಲವೆಲುವಿನೆಕ್ಕೆಗಳ ಬಿಗಿದು ಬೀವಂ ನೇಯ್ದು*
*ನುಲಿಯ ಹಂದೊಗಲ ಹಾಸಿನೊಳು ಮಂಚದ*
*ಮೇಲೆ*

ಹೊಲೆಯನೋಲಗಪಿತ್ತು ನರಕಪಾಲದೊಳು
ತೀವಿದ ಹಸಿಯ ಗೋಮಾಂಸವ
ಮೆಲುತ ಮದ್ಯವನೀಂಟುತಿರ್ಪ ಪತಿಯಂ ಕಂಡು
ನೆಲದಲ್ಲಿ ಕುಳ್ಳಿರ್ದ ರವಿಕುಲನ ಹೆಗಲಮೇ
ಲೆಲೆಲೆ ನೀಡಿದನು ಕಾಲಂ ಕಾಲನೊಂದೆರಡು
ಕುಲಗಿರಿಯ ಭಾರವೆನಲು.

ಮನುಧರ್ಮಶಾಸ್ತ್ರದ ಪ್ರಕಾರ ಅಸ್ಪೃಶ್ಯರು ಬಾಹ್ಯರು. ಅಂದರೆ ಅವರನ್ನು ಚಾತುರ್ವರ್ಣ್ಯದ ಛಾಯೆಯ ಹೊರಗಿನವರು ಎಂದು ಹೆಸರಿಸಲಾಗಿದೆ. ಈ ಕೀಳುಜಾತಿಯವರ ಉಗಮದ ಪ್ರಶ್ನೆ ತುಂಬಾ ಸಂಕೀರ್ಣವಾದುದು. ಅಂಬೇಡ್ಕರ್ ಅವರು ಹೇಳುವಂತೆ, ಹಿಂದೂಗಳ ಪ್ರಾಚೀನ ಧರ್ಮಶಾಸ್ತ್ರಗಳ ಪ್ರಕಾರ, ಈ ಕೀಳುಜಾತಿಯವರು ಚಾತುರ್ವರ್ಣ್ಯ ಪದ್ಧತಿಯಲ್ಲಿ ಸೇರಿದ ನಾಲ್ಕು ವರ್ಣಗಳಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರ ನಡುವಿನ ಅಂತರ್ವಿವಾಹಗಳಿಂದ ಸಂಜಾತರಾದ ಸಂತತಿಯವರು. ಈ ಕೀಳುಜಾತಿಯವರ ಜೀವನ ನಿಯಮಗಳಿಗೆ ಸಂಬಂಧಿಸಿದ ಕೆಲವು ನಿರ್ದೇಶನ ಸೂತ್ರಗಳು ಹೀಗಿವೆ (ಆಧಾರ, ಮನುಧರ್ಮಶಾಸ್ತ್ರ) :




ಇವರು ಚಾತುರ್ವರ್ಣ್ಯಕ್ಕೆ ಬಾಹ್ಯರು, ಎಂದರೆ ದಸ್ಯುಗಳು. ಇವರ ವಾಸ ಮರಗಳ ಕೆಳಗೆ, ಸ್ಮಶಾನಗಳ ಬಳಿ, ಕಾಡು ಬೆಟ್ಟ ಗುಡ್ಡಗಳಲ್ಲಿ, ಅವಕ್ಕೆ ಕೆಲವು ಗುರುತುಗಳಿರಬೇಕು ಮತ್ತು ತಮ್ಮ ಹೊಟ್ಟೆ ಹೊರೆಯಲು ತಮ್ಮದೇ ಆದ ವಿಲಕ್ಷಣ ಕಸುಬುಗಳನ್ನು ಆಶ್ರಯಿಸಬೇಕು. ಆದರೆ ಚಂಡಾಲರು ಮತ್ತು ಶ್ವಪಚರ ವಾಸಸ್ಥಾನವು ಹಳ್ಳಿಯಿಂದ ಹೊರಗಿರಬೇಕು. ಅವರನ್ನು ಅಪಾತ್ರರನ್ನಾಗಿಸಬೇಕು. ಅವರ ಸಂಪತ್ತೆಂದರೆ ನಾಯಿಗಳು, ಕತ್ತೆಗಳು. ಸತ್ತವರ ಬಟ್ಟೆಗಳು ಅವರ ಉಡುಪು; ಅವರು ಊಟ ಮಾಡಬೇಕಾದ್ದು ಚೂರಾದ ಮಡಿಕೆ ಕುಡಿಕೆಗಳಲ್ಲಿ, ಕಪ್ಪು ಕಬ್ಬಿಣವೇ ಅವರ ಆಭರಣಗಳು. ಅವರು ಸದಾಕಾಲವೂ ಒಂದೆಡೆಯಿಂದ ಇನ್ನೊಂದೆಡೆಗೆ ಅಲೆದಾಡುತ್ತಿರಬೇಕು. ಅವರಿಗೆ ಆರ್ಯರಲ್ಲದವರು ಒಡೆದ ಪಾತ್ರೆಗಳಲ್ಲಿ ಆಹಾರ ಕೊಡಬೇಕು. ದಿನದ ವೇಳೆಯಲ್ಲಿ ಕೆಲಸಕ್ಕೆ ಹೋಗುವಾಗ ರಾಜಾಜ್ಞೆಯಂತೆ ತನ್ನ ಗುರುತುಗಳನ್ನು ಹಾಕಿಕೊಂಡೇ ಹೋಗಬೇಕು ಮತ್ತು ಸಂಬಂಧಿಗಳಿಲ್ಲದವರ ಹೆಣಗಳನ್ನು ಎತ್ತುವುದು ಅವರ ಕೆಲಸ. ಕಾನೂನಿನ ಅನ್ವಯ ರಾಜಾಜ್ಞೆಯಂತೆ ಅಪರಾಧಿಗಳನ್ನು ಕಡಿದು ಹಾಕುವುದು ಅವರ ಯಾವತ್ತಿನ ಕೆಲಸ. ಅಂತಹ ಅಪರಾಧಿಗಳ ಬಟ್ಟೆಗಳು, ಹಾಸಿಗೆ, ಆಭರಣ ಇತ್ಯಾದಿಗಳನ್ನು ಅವರು ತಮಗೇ ಇಟ್ಟುಕೊಳ್ಳಬಹುದು. ಕೀಳುಜಾತಿಗಳಿಗೆ ಸೇರಿದ ಹೆಂಗಸೊಬ್ಬಳೊಡನೆ ಸಂಬಂಧವಿರಿಸಿಕೊಂಡವನನ್ನು ಮರಣದಂಡನೆಗೆ ಗುರಿ ಮಾಡಬೇಕು. ಈ ಚಂಡಾಲ ಅಥವಾ ಇತರ ಕೀಳುಜಾತಿಯವರು ಯಾರಾದರೂ ಉದ್ದೇಶಪೂರ್ವಕವಾಗಿ (ದ್ವಿಜರನ್ನು) ಮುಟ್ಟಿ ಮೈಲಿಗೆ ಮಾಡಿದರೆ ಅಂಥವರನ್ನು ಮರಣದಂಡನೆಗೆ ಗುರಿ ಮಾಡಬೇಕು – ಇತ್ಯಾದಿ.

ಹೀಗೆ ಪ್ರಾಚೀನ ಧರ್ಮಶಾಸ್ತ್ರಕಾರರು ಮಾಡಿದ ಅನುಶಾಸನಗಳು ಹರಿಶ್ಚಂದ್ರ ಕಾವ್ಯದಲ್ಲಿ ಯಥಾವತ್ತಾಗಿ ಕಾರ್ಯರೂಪದಲ್ಲಿ ಅನುಷ್ಠಾನಗೊಂಡಿರುತ್ತವೆ. ಅದಕ್ಕಾಗಿ ಹರಿಶ್ಚಂದ್ರ ಮತ್ತು ವೀರಬಾಹುವಿನ ಪ್ರಸಂಗದ ಒಂದೆರಡು ಪದ್ಯಗಳನ್ನು ಇಲ್ಲಿ ಪರಾಮರ್ಶಿಸಬಹುದು. ಸುಡುಗಾಡಿನ ಕಾವಲುಗಾರನ ಕರ್ತವ್ಯಗಳು ಮತ್ತು ಅವನ ಸಂಬಳ ಸಾರಿಗೆಯನ್ನು ನಿಗದಿಮಾಡಿರುವ ಪದ್ಯಗಳು ಹೀಗಿವೆ :

ಸುಡುಗಾಡ ಕಾಹವೇಂದೇನದಱ ಪಂಥಮಂ
ನುಡಿದು ಪೇಳೆನೆ, ಸುಡುವ ನೆಲದೆಱೆಗೆ ಹಾಗ, ಹೆಣ
ದುಡಿಗೆಯಂ ತಂದೆನಗೆ ಕೊಡುವುದು, ಆ ತಲೆಯಕ್ಕಿಯ ನಿನ್ನ ಸಂಬಳಕ್ಕೆ
ಪಡಿಯಾಗಿ ಕೊಂಡುಂಬುದು, ಅಳುಪದಿರು, ಹುಸಿಯದಿರು
ಬಿಡದಿರೆಂದುಡುಗೆರೆಯ, ವೀಳೆಯದ ಕೂಡೆ ತಾ
ಪಿಡಿದ ಸಂಬಳಿ ಗೋಲ ಮುದ್ರೆಗೊಟ್ಟಂ ವನಧಿಮುದ್ರಿತ ಧರಾಧಿಪತಿಗೆ.

ಹೀಗೆ ತನ್ನ ಸಹಾಯಕ ಕಾವಲುಗಾರನಿಗೆ ತನ್ನ ಕರ್ತವ್ಯ ಹಾಗೂ ಸಂಬಳವನ್ನು ಗೊತ್ತುಪಡಿಸಿದ ವೀರಬಾಹು ಸಂಬಳಿಗೋಲ ಮುದ್ರೆಯನ್ನು ಕೊಟ್ಟು ಅಧಿಕಾರ ವಹಿಸಿಕೊಡುತ್ತಾನೆ. ಮುಂದೆ ಅವನು ಹೇಗೆ ತನ್ನ ಕರ್ತವ್ಯವನ್ನು ನಿರ್ವಹಿಸಬೇಕೆಂಬುದನ್ನು ಹೀಗೆ ತಿಳಿಸುತ್ತಾನೆ :

ಹೆಸರ ಹೇಳುತ್ತ ಸಾರುತ್ತ ಮೈಗುಱುಹ ತೋ
ಱಿಸುತ ಪುರದೊಳಗೆಯ್ದೆ ಜನವಱಿಯೆ
ಹಱೆಯ ಮೊಳ
ಗಿಸುತ ಮೆಱೆಯುತ್ತ ಹೋಗೇಳೆಂದು ಕಳುಪೆ
ಪೊರಮಟ್ಟನೆಲ್ಲವ ಮಾಡುತ
ನಸುಕುಸಿದ ದೇಹ ಕಂಕರಿಗೋಲ ನಿಱಿದು ಬಾ
ರಿಸುತ ಕೈವಿಡದೆ 'ಸಂಬಳಿ ಸಂಬಳಿ' ಎಂದೆಂದು
ಕೊಸರುತಿಹ ಬಾಯ್ವೆರಸಿ ಬೀದಿ ಬೀದಿಯೊಳು
ಸುಳಿದಂ ಸತ್ಯಸಂಪನ್ನನು.

ಮೇಲೆ ಮಲಬಾರ್ ಕ್ರಾನಿಕಲ್ (೧೯೨೮) ಹಾಗೂ ಧರ್ಮಶಾಸ್ತ್ರಕಾರರ ಬಗ್ಗೆ ಅಂಬೇಡ್ಕರ್ ಉಲ್ಲೇಖಿಸಿಕೊಟ್ಟಿರುವ ಅನುಶಾಸನಗಳನ್ನು ಈ ಪದ್ಯಗಳ ಪಠ್ಯದೊಂದಿಗೆ ಸಮೀಕರಿಸಿಕೊಂಡು ನೋಡಬಹುದು.

ಹೀಗೆ ಮಧ್ಯಕಾಲೀನ ಭಾರತದ ದಲಿತರ ಅಸ್ತಿತ್ವವನ್ನು ರಾಘವಾಂಕನಂತೆ ಯಥಾವತ್ತಾಗಿ ಚಿತ್ರಿಸಿರುವ ಕವಿ ಕನ್ನಡ ಸಾಹಿತ್ಯ ಸಂದರ್ಭದಲ್ಲಿ, ಅಂತೆಯೇ ಭಾರತೀಯ ಸಂದರ್ಭದಲ್ಲಿ ಕೂಡ ಇನ್ನೊಬ್ಬನಿರಲಾರನು. ಆದರೂ ಹೀಗೆ ಕೀಳ್ದು ಜನ ಬದುಕಬೇಕೆಂದು ಮನುಜರ ಮೇಲೆ, ಸಾವವರ ಮೇಲೆ, ಕಡುವವರ ಮೇಲೆ ಸತ್‌ಕಾವ್ಯ ರಚನೆ ಮಾಡಿದ್ದು ಅವರ ಸೋದರಮಾವ ಹರಿಹರನ ದೃಷ್ಟಿಗೆ ಹೇಗೆ ಅಪರಾಧವಾಗಿ ಕಂಡಿತೋ ? ಆತ ಪೂರ್ವಗ್ರಹ ಪೀಡಿತನಾಗಿ, ಹೀಗೆ ಕಾವ್ಯರಚನೆ ಮಾಡಿದ್ದು ತಪ್ಪೆಂದು ಭಾವಿಸಿ, ತನ್ನ ಪಾದುಕೆಗಳಿಂದ ಅಳಿಯನ ಕಪೋಲಮೋಕ್ಷ ಮಾಡಲು ಅವನ ಹಲ್ಲು ಬಿದ್ದುಹೋದವೆಂಬ ಪ್ರತೀತಿಯಿದೆ. ಈ ದಂತಕತೆಯ ಸತ್ಯಾಸತ್ಯತೆ ಏನೇ ಇರಲಿ, ರಾಘವಾಂಕ "ಅತಿ ಹುಸಿವಯತಿ ಹೊಲಯ, ಹುಸಿದಿಹ ಹೊಲಯನುನ್ನತಯತಿವರನು" ಎಂದು ಜಾತಿ ಹಿಂದೂ ದರ್ಶನಗಳ ವಿರುದ್ಧ ಪುನರ್‌ಮೌಲೀಕರಣಕ್ಕೆ ತೊಡಗಿದ್ದು ಮಾತ್ರ ಲೋಕೋತ್ತರವೆಂಬಂತಿದೆ. ಹರಿಶ್ಚಂದ್ರ ಕಾವ್ಯದಂತಹ ಪ್ರತಿಮಾತ್ಮಕ ಕೃತಿ ಇಂಗ್ಲಿಷಿಗೆ ಭಾಷಾಂತರಗೊಂಡು, ಡಾ॥ ಅಂಬೇಡ್ಕರ್ ಅಂಥವರ ದೃಷ್ಟಿಗೆ ಅದು ಬಿದ್ದಿದ್ದರೆ ಅವರೆಷ್ಟು ಮೆಚ್ಚಿಕೊಳ್ಳುತ್ತಿದ್ದರೊ !

ಕಡೆಯದಾಗಿ, ಡಾ॥ ಬಾಬಾಸಾಹೇಬ್ ಅಂಬೇಡ್ಕರ್ ಅವರು ಉವಾಚಿಸಿರುವಂತೆ ಈ ನೆಲದಲ್ಲಿ ಅಸ್ಪೃಶ್ಯತೆಯ ಆಚರಣೆಗೆ ಧರ್ಮಶಾಸ್ತ್ರಗಳ ಅನುಮತಿ ಹಾಗೂ ಕಾನೂನಿನ ಒಪ್ಪಿಗೆ – ಇವೆರಡೂ ಕೂಡ ಕಾರಣವಾಗಿದ್ದವು. ಮಿಂಟೋ ಮಾರ್ಲೆಯ ಪ್ರಗತಿಪರ ಸುಧಾರಣೆಗಳು ಜಾರಿಗೆ ಬರುವವರೆಗೂ ಈ ದೇಶದಲ್ಲಿ ಪ್ರಾಚೀನ ಜಾತಿ ಪದ್ಧತಿ ತಾನೇ ತಾನಾಗಿತ್ತು. ಆದರೆ ಪ್ರಾಚೀನ ರೋಮ್‌ನಲ್ಲಿ ಇದಕ್ಕೆ ಬದಲಾಗಿ ಗುಲಾಮ ಪದ್ಧತಿ ರೂಢಿಯಲ್ಲಿದ್ದು, ಅದಕ್ಕೆ ಕಾನೂನಿನ ಒಪ್ಪಿಗೆಯಿದ್ದರೂ ಆಚರಣೆಗೆ ಧರ್ಮಸಮ್ಮತಿ ಇರಲಿಲ್ಲ. ಆದ್ದರಿಂದ ಅಲ್ಲಿ ಗುಲಾಮ ಪದ್ಧತಿ ಯಶಸ್ವಿಯಾಗಿ ಚಾಲನೆಯಾಗಲಿಲ್ಲ. ಈ ನಿಟ್ಟಿನಲ್ಲಿ ಡಾ॥ ಅಂಬೇಡ್ಕರ್ ಅವರ ಬರಹಗಳು ಮತ್ತು ಭಾಷಣಗಳು ಕೃತಿಯ ೫ ಮತ್ತು ೯ನೇ ಸಂಪುಟಗಳನ್ನು ಅಧ್ಯಯನ ಮಾಡುವುದು ಅಗತ್ಯ.



ಪ್ರೊ॥ ಶಿವರಾಮಯ್ಯ
ನಂ. ೧೭೨, ಐಸೆಕ್ ರಸ್ತೆ, ಟೀಚರ್ಸ್ ಕಾಲೋನಿ
ನಾಗರಬಾವಿ
ಬೆಂಗಳೂರು - ೫೬೦ ೦೭೨

# ರಾಷ್ಟ್ರೀಯತೆ, ಹಿಂದೂತ್ವ ಮತ್ತು ಸಂಸ್ಕೃತಿ

**ಎಲ್ಲಾ ಬಗೆಯ ಕೋಮುವಾದಗಳೂ ಸಮಾನವಾಗಿ ಕೆಟ್ಟವು ಮತ್ತು ಕೇಡು ತರುವಂಥವು. ಅದು ಹಿಂದೂ ಕೋಮುವಾದವಿರಲಿ ಮುಸ್ಲಿಂ ಕೋಮುವಾದವಿರಲಿ ಅಥವಾ ಯಹೂದಿಗಳ ಕೋಮುವಾದವೇ ಇರಲಿ, ಎಲ್ಲವೂ ಸಮಾನವಾಗಿ ಅಪಾಯಕಾರಿ ಆಗಿರುತ್ತವೆ. ಆದರೆ ಬಹುಸಂಖ್ಯಾತರ ಕೋಮುವಾದ ಇದೆಯಲ್ಲ, ಅದು ಹೆಚ್ಚು ಅಪಾಯಕಾರಿ ಮತ್ತು ವಿಧ್ವಂಸಕ. ಹಾಗಾಗಿ ಆ ದೃಷ್ಟಿಯಿಂದ ಅಲ್ಪಸಂಖ್ಯಾತರ ಕೋಮುವಾದ ಸಹ್ಯ ಎನ್ನಬೇಕಾಗುತ್ತದೆ. ರಾಷ್ಟ್ರೀಯತೆಯ ಪರಿಕಲ್ಪನೆಯ ಕುರಿತು ಮಾತನಾಡಿದ ಅಚಿನ್ ರಾಜನೊಬ್ಬನ ಆಡಳಿತೆಯಲ್ಲಿ ರಾಷ್ಟ್ರೀಯತೆಯ ಕಲ್ಪನೆ ಹೆಚ್ಚು ಎದ್ದು ಕಾಣುವ, ಅಗತ್ಯವಾಗಿ ಒಗ್ಗೂಡಿಸಬಲ್ಲ ಭಾವನೆಯಾಗಿರುತ್ತದೆ; ಆದರೆ ಪ್ರಜಾಪ್ರಭುತ್ವದ ಪರಿಕಲ್ಪನೆಯಲ್ಲಿ ರಾಷ್ಟ್ರೀಯತೆ ಎಂಬುದು ಇಲ್ಲಿ ಸಮಷ್ಟಿಯ ಹಿತಕ್ಕಾಗಿ ಎನ್ನುವ ಒಂದು ಪರಿಕಲ್ಪನೆಯಾಗಿರುತ್ತದೆ ಎನ್ನುತ್ತಾರೆ. ಅಚಿನ್ ವನಾಯಕ್‌ರ ಉಪನ್ಯಾಸವೊಂದರ ಸಂಕ್ಷಿಪ್ತ ವರದಿ ಇಲ್ಲಿದೆ.**

**ನರೇಂದ್ರ ಪೈ**

ರಾಷ್ಟ್ರೀಯತೆಯ ಪರಿಕಲ್ಪನೆಯನ್ನು ಹಿಂದೂತ್ವದೊಡನೆ ಸಮೀಕರಿಸಿ, ಹಿಂದೂತ್ವವನ್ನು ದೇಶದ ಸಂಸ್ಕೃತಿಯೊಂದಿಗೆ ಸಮೀಕರಿಸಿ ಕೋಮುವಾದಿಗಳು ಈ ದೇಶದ ಜನರನ್ನು ಹಾದಿ ತಪ್ಪಿಸುತ್ತಿದ್ದಾರೆ ಮತ್ತು ಇದು ಕೇವಲ ರಾಜಕೀಯ ದುರುದ್ದೇಶ ಪ್ರೇರಿತವಾದದ್ದು ಎನ್ನುತ್ತಾರೆ ಖ್ಯಾತ ಚಿಂತಕ ಪ್ರೊಫೆಸರ್ ಅಚಿನ್ ವನಾಯಕ್.

ಮಂಗಳೂರಿನ ಕೋಮು ಸೌಹಾರ್ದ ವೇದಿಕೆ ಇತ್ತೀಚೆಗೆ 'ಮಾಧ್ಯಮಗಳು ಮತ್ತು ಕೋಮುವಾದ' ಎಂಬ ವಿಚಾರವಾಗಿ ಎರಡು ದಿನಗಳ ಕಾರ್ಯಾಗಾರವೊಂದನ್ನು ಹಮ್ಮಿಕೊಂಡಿತ್ತು. ಪ್ರಮುಖವಾಗಿ ರಾಜ್ಯದ ಪತ್ರಕರ್ತರನ್ನು ಗಮನದಲ್ಲಿಟ್ಟುಕೊಂಡೇ ಈ ಕಾರ್ಯಾಗಾರವನ್ನು ಆಯೋಜಿಸಿದ್ದರೂ ಮುನ್ನೂರಕ್ಕೂ ಹೆಚ್ಚು ಮಂದಿ ತುಂಬ ಆಸಕ್ತಿ ವಹಿಸಿ ಮತ್ತು ಸಕ್ರಿಯವಾಗಿ ಭಾಗವಹಿಸಿ ಎರಡೂ ದಿನ ಕಾರ್ಯಾಗಾರವನ್ನು ಜೀವಂತ ಸಂವಹನದ ಪ್ರಕ್ರಿಯೆಯನ್ನಾಗಿಸಿದ್ದು ಗಮನಾರ್ಹ.

ಗೌರಿ ಲಂಕೇಶ್, 'ತೆಹಲ್ಕ' ಪತ್ರಿಕೆಯ ಸಂಕರ್ಷಣ್ ಠಾಕೂರ್, 'ದ ವೀಕ್'ನ ಭಾನುತೇಜ್, ಪ್ರಫುಲ್ ಬಿದ್ವಾಯಿ, 'ಎಕ್ಸ್‌ಪ್ರೆಸ್'ನ ಮಮೇಲಾ ಫಿಲಿಪೋಸ್, ನೂಪುರ್ ಬಸು, ಅರುಂಧತಿ ರಾಯ್, ನಿವೃತ್ತ ನ್ಯಾಯಮೂರ್ತಿ ರಾಜೇಂದರ್ ಸಚಾರ್, ಸನತ್‌ಕುಮಾರ್ ಬೆಳಗಲಿ, ಅಬ್ದುಲ್ ಸಲಾಮ್ ಪುತ್ತಿಗೆ, ಬಿ. ಎಂ. ಹನೀಫ್, ಮಯೂರ್, ಇಸ್ಮಾಯಿಲ್, ಬಿ. ವಿ. ಸೀತಾರಾಮ್ ಮುಂತಾದವರ ಭಾಗವಹಿಸುವಿಕೆ ಕಾರ್ಯಾಗಾರಕ್ಕೆ ಅಪೂರ್ವ ಕಳೆ ತಂದುಕೊಟ್ಟಿತು. ಇಡೀ ಕಾರ್ಯಾಗಾರದಲ್ಲಿ ಅಚಿನ್ ವನಾಯಕ್ ಆಡಿದ ಮಾತುಗಳು ವಿಶೇಷ ಒಳನೋಟಗಳಿಂದ ಕೂಡಿದ್ದು ಬೇರೆಲ್ಲರನ್ನೂ ತಲುಪುವ ಅಗತ್ಯವಿದೆ.

ಧರ್ಮ ಎಂಬುದು ಅಕ್ಷರಮಾಲೆಯಾಗಿದ್ದರೆ ಕೋಮುವಾದ ಎಂಬುದು ವಾಕ್ಯವೊಂದರ ಸಂರಚನೆ ಎಂದು ತಿಳಿದು, ಇದು ಪೂರ್ತಿಯಾಗಿ ಸರಿಯಾದ ಪರಿಕಲ್ಪನೆಯಲ್ಲದಿದ್ದರೂ, ಇದನ್ನು ನೋಡಬಹುದು ಎನ್ನುತ್ತಾರೆ ಅಚಿನ್. ವಾಕ್ಯ ತಪ್ಪಾಗಿದ್ದರೆ ಅದು ಅಕ್ಷರಮಾಲೆಯ ತಪ್ಪೆನ್ನಲು ಬರುವುದಿಲ್ಲ. ಹಾಗೆಯೇ ಕೋಮುವಾದ ಎಂಬುದು ಧರ್ಮವನ್ನು ತಪ್ಪಾಗಿ ಬಳಸಿ ಆ ಮೂಲಕ ನಿರ್ಮಿಸಿದ ಒಂದು ಕೊಳಕಾದ, ಬೀಭತ್ಸ ಜಗತ್ತು ಎಂಬ ಅರ್ಥ ಪಡೆಯುತ್ತದೆ.

ಎಲ್ಲ ರಾಜಕೀಯ ಉದ್ದೇಶದ ಧಾರ್ಮಿಕ ವಾದಗಳೂ ಪ್ರಮುಖವಾಗಿ ಮಹಿಳೆಯರ ಸ್ವಾತಂತ್ರ್ಯ ಮತ್ತು ಹಕ್ಕುಗಳ ಮೇಲೆ ಹಾಗೂ ಶೈಕ್ಷಣಿಕ ವಿದ್ಯಮಾನಗಳ ಮೇಲೆ ಎರಗುತ್ತವೆ ಎನ್ನುತ್ತಾರೆ ಅಚಿನ್. ವ್ಯಕ್ತಿ, ಧರ್ಮ ಮತ್ತು ಪ್ರಭುತ್ವ ಈ ಮೂರರ ನಡುವಿನ ಕೊಡುಕೊಳ್ಳುವಿಕೆಯ ಒಂದು ಸಂಕೀರ್ಣ ಸಂಬಂಧದಲ್ಲೇ ಧಾರ್ಮಿಕ ಸ್ವಾತಂತ್ರ್ಯದ ಪರಿಕಲ್ಪನೆಯನ್ನು ಅರ್ಥ ಮಾಡಿಕೊಳ್ಳುವ ಅಗತ್ಯ ಇದೆ ಎನ್ನುವ ಅವರು ಅದನ್ನು ಮೂರು ವಿಧಗಳಲ್ಲಿ ಗುರುತಿಸುತ್ತಾರೆ:

ಮೊದಲನೆಯದಾಗಿ, ಯಾವನೇ ವ್ಯಕ್ತಿ ತನಗೆ ಬೇಕಾದ ಧರ್ಮವನ್ನು, ಧಾರ್ಮಿಕ ವಿಧಿವಿಧಾನಗಳನ್ನು ಆಚರಿಸಲು ಅಥವಾ ತನಗೆ ಯಾವುದೇ ಧರ್ಮ ಬೇಡವಿದ್ದಲ್ಲಿ ಧರ್ಮ ವಿಲ್ಲದೆಯೂ ಬದುಕಲು ಅದು ಸ್ವಾತಂತ್ರ್ಯ ನೀಡುತ್ತದೆ. ಎರಡನೆಯದಾಗಿ, ಪ್ರಭುತ್ವಕ್ಕೆ ಎಲ್ಲಾ ಧರ್ಮಗಳೂ, ಎಲ್ಲ ವ್ಯಕ್ತಿಗಳೂ ಸಮಾನರು ಎಂಬ ಸಮಾನತೆಯ ಪರಿಕಲ್ಪನೆಯೂ ಈ ವ್ಯವಸ್ಥೆಯಲ್ಲಿದೆ ಮತ್ತು ಮೂರನೆಯದಾಗಿ, ಧರ್ಮ ನಿರಪೇಕ್ಷತೆ ಈ ವ್ಯವಸ್ಥೆಯ ಅವಿಭಾಜ್ಯ ಅಂಗವಾಗಿರುತ್ತದೆ.

ಜಾತ್ಯತೀತ ಅಥವಾ ಸೆಕ್ಯುಲರ್ ರಾಷ್ಟ್ರವೊಂದು ಧರ್ಮನಿರಪೇಕ್ಷತೆಯನ್ನು ತನ್ನ ಪರಿಕಲ್ಪನೆಯಲ್ಲಿ ಅನಿವಾರ್ಯವಾಗಿ ಹೊಂದಿರುತ್ತದೆ. ಅದು ಯಾವುದೇ ಧರ್ಮದೊಂದಿಗೆ ತನ್ನನ್ನು ಗುರುತಿಸಿಕೊಳ್ಳುವುದಿಲ್ಲ. ಹೀಗೆ ಪ್ರಭುತ್ವ ಧರ್ಮದಿಂದ ದೂರ ಇರ ಬೇಕಾಗುತ್ತದೆ. ಒಂದು ರಾಷ್ಟ್ರ ಧರ್ಮನಿರಪೇಕ್ಷ ರಾಷ್ಟ್ರವಾಗಲು ಅಲ್ಲಿ ಪ್ರಜಾಪ್ರಭುತ್ವವೇ ಇರಬೇಕೆಂದಿಲ್ಲ. ಆದರೆ ಯಾವುದೇ ರಾಷ್ಟ್ರ ಪ್ರಜಾಪ್ರಭುತ್ವವನ್ನು ಸ್ವೀಕರಿಸಿದ್ದಾದರೆ ಅಲ್ಲಿ ಅದು ಧರ್ಮನಿರಪೇಕ್ಷ ರಾಷ್ಟ್ರ ಕೂಡ ಆಗಿರಲೇಬೇಕಾಗುತ್ತದೆ.

ಆದೇ, ಧರ್ಮನಿರಪೇಕ್ಷವಲ್ಲದ ಒಂದು ರಾಷ್ಟ್ರ ತನ್ನದಲ್ಲದ ಧರ್ಮವನ್ನು ಆಚರಿಸುವ ವ್ಯಕ್ತಿಯನ್ನು ಎರಡನೆಯ ದರ್ಜೆಯ ಪ್ರಜೆಯನ್ನಾಗಿ ಪರಿಗಣಿಸಲು ಸಾಧ್ಯವಿದೆ. ಮುಸ್ಲಿಂ ರಾಷ್ಟ್ರದಲ್ಲಿ ಹಿಂದೂ ಅಥವಾ ಕ್ರಿಶ್ಚಿಯನ್ ಎರಡನೆಯ ದರ್ಜೆಯ ಪ್ರಜೆ. ಹಾಗೆ ಪರಿಗಣಿಸುವುದು ಅಲ್ಲಿ ಕಾನೂನುಬದ್ಧ. ಆದರೆ ಭಾರತ ಧರ್ಮ ನಿರಪೇಕ್ಷ ಮತ್ತು ಜಾತ್ಯತೀತ ರಾಷ್ಟ್ರವಾಗಿರುವುದರಿಂದಲೇ ಇಲ್ಲಿ ಯಾರೂ ಎರಡನೇ ದರ್ಜೆಯ ಪ್ರಜೆಗಳಲ್ಲ ಎಂಬುದನ್ನು ನೆನಪಿಡಬೇಕು.

ಎಲ್ಲಾ ಬಗೆಯ ಕೋಮುವಾದಗಳೂ ಸಮಾನವಾಗಿ ಕೆಟ್ಟವು ಮತ್ತು ಕೇಡು ತರುವಂಥವು. ಅದು ಹಿಂದೂ ಕೋಮುವಾದವಿರಲಿ ಮುಸ್ಲಿಂ ಕೋಮುವಾದವಿರಲಿ ಅಥವಾ ಯಹೂದಿಗಳ ಕೋಮುವಾದವೇ ಇರಲಿ, ಎಲ್ಲವೂ ಸಮಾನವಾಗಿ ಅಪಾಯಕಾರಿಯಾಗಿರುತ್ತವೆ. ಆದರೆ ಬಹುಸಂಖ್ಯಾತರ ಕೋಮುವಾದ ಇದೆಯಲ್ಲ, ಅದು ಹೆಚ್ಚು ಅಪಾಯಕಾರಿ ಮತ್ತು ವಿಧ್ವಂಸಕ. ಹಾಗಾಗಿ ಆ ದೃಷ್ಟಿಯಿಂದ ಅಲ್ಪಸಂಖ್ಯಾತರ ಕೋಮುವಾದ ಸಹ್ಯ ಎನ್ನಬೇಕಾಗುತ್ತದೆ; ಅದೂ ಅಸಹ್ಯ ಹಂತ ತಲುಪುವ ಸಾಧ್ಯತೆ ಇರುತ್ತದೆ.

ರಾಷ್ಟ್ರೀಯತೆಯ ಪರಿಕಲ್ಪನೆಯ ಕುರಿತು ಮಾತನಾಡಿದ ಅಚಿನ್ ರಾಜನೊಬ್ಬನ ಆಡಳಿತೆಯಲ್ಲಿ ರಾಷ್ಟ್ರೀಯತೆಯ ಕಲ್ಪನೆ ಹೆಚ್ಚು ಎದ್ದು ಕಾಣುವ, ಅಗತ್ಯವಾಗಿ ಒಗ್ಗೂಡಿಸಬಲ್ಲ ಭಾವನೆಯಾಗಿರುತ್ತದೆ; ಆದರೆ ಪ್ರಜಾಪ್ರಭುತ್ವದ ಪರಿಕಲ್ಪನೆಯಲ್ಲಿ ರಾಷ್ಟ್ರೀಯತೆ ಎಂಬುದು ಇಲ್ಲಿ ಸಮಷ್ಟಿಯ ಹಿತಕ್ಕಾಗಿ ಎನ್ನುವ ಒಂದು ಪರಿಕಲ್ಪನೆಯಾಗಿರುತ್ತದೆ ಎನ್ನುತ್ತಾರೆ.

ಪ್ರಸ್ತುತ ನಮ್ಮ ದೇಶದಲ್ಲಿ ಸಂಸ್ಕೃತಿ, ಧರ್ಮ ಮತ್ತು ರಾಷ್ಟ್ರೀಯತೆಯನ್ನು ಬೆರಕೆ ಮಾಡಿ ರಾಜಕೀಯ ಧಾರ್ಮಿಕತೆಯನ್ನು ಮುಖ್ಯಭೂಮಿಕೆಗೆ ತರಲಾಗುತ್ತಿದೆ ಎನ್ನುವ ಅಚಿನ್ ಇದನ್ನು ರಾಜಕೀಯ ಸ್ವರೂಪದ

ಹಿಂದೂತ್ವ, ರಾಜಕೀಯ ಸ್ವರೂಪದ ಇಸ್ಲಾಂ, ರಾಜಕೀಯ ಸ್ವರೂಪದ ಕ್ರಿಶ್ಚಿಯಾನಿಟಿ ಎಂದು ಗುರುತಿಸುತ್ತಾರೆ.

ಇದಕ್ಕೆ ಸಾಮಾಜಿಕ ಮತ್ತು ಆರ್ಥಿಕ ಆಯಾಮಗಳಿರುವುದನ್ನೂ ನಾವು ಗಮನಿಸಬೇಕಿದೆ. ನೆಹರು ಯುಗದ ಆಧುನಿಕ ಅಭಿವೃದ್ಧಿಪರ ಯೋಜನೆಗಳ ವೈಫಲ್ಯ ಮತ್ತು ರಾಜಕೀಯವಾಗಿ ಸಮಾಜವಾದಿ ನಿಲುವಿನ ಪ್ರಜಾಪ್ರಭುತ್ವ ಅದರ ಆದರ್ಶ ಮತ್ತು ಆಶಯಗಳೆರಡರಲ್ಲೂ ಕಂಡುಕೊಂಡ ಹಿನ್ನಡೆ ಬಹುಶಃ ಈ ಬಗೆಯ ಬೆಳವಣಿಗೆಗೆ ಕಾರಣ ಎನ್ನುತ್ತಾರೆ ಅಚಿನ್. ಅವರ ಪ್ರಕಾರ ಕಾಂಗ್ರೆಸ್ ಪಕ್ಷದ ಅವನತಿಯಿಂದ ಹಿಂದೂವಾದಿ ಬಿ.ಜೆ.ಪಿ. ಬಲಗೊಂಡಿದ್ದಲ್ಲ, ಕಾಂಗ್ರೆಸ್ ಸರಕಾರ ನಂಬಿದ್ದ ತತ್ವಗಳ ಸೋಲಿನಲ್ಲೇ ಇಂಥ ತತ್ವಗಳ ಹುಟ್ಟು ಮತ್ತು ಬೆಳವಣಿಗೆಯ ಬೀಜಗಳಿದ್ದವು ಎನ್ನುತ್ತಾರೆ ಅವರು.

೧೯೪೭ರಿಂದ ೧೯೭೦ರ ಮಧ್ಯಭಾಗದವರೆಗೆ ಚಾಲ್ತಿಯಲ್ಲಿದ್ದ ದೇಶ ಕಟ್ಟುವ ಬೃಹತ್ ಯೋಜನೆಗಳು ಕ್ರಮೇಣ ಸಮಸ್ಯೆಗಳ ಆಗರವಾಗತೊಡಗಿದವು. ಸಾರ್ವಜನಿಕ ರಂಗದ ಉದ್ಯಮಗಳು ನಷ್ಟ ಭರಿಸಲಾರದ ಸ್ಥಿತಿಗೆ ತಲುಪಿದ್ದವು. ಅಲ್ಲಿನ ಆಂತರಿಕ ದೌರ್ಬಲ್ಯಗಳು ಮತ್ತು ಸೋಲು ಪರ್ಯಾಯ ಯೋಜನೆಗಳತ್ತ, ಮಾರ್ಗಗಳತ್ತ ನೋಡುವಂತೆ ಮಾಡಿತ್ತು. ಇದು ಹಿಂದೂತ್ವದ ಬೆಳವಣಿಗೆಗೆ ಪ್ರೇರಕವಾಗಿ ಒದಗಿತು. ಗಮನಿಸಿ ನೋಡಿ, ಆರ್.ಎಸ್.ಎಸ್. ೧೯೨೫ರಿಂದ ಏನು ಹೇಳುತ್ತಿದೆಯೋ ಅದನ್ನೇ ಇವತ್ತಿಗೂ ಹೇಳುತ್ತ ಬಂದಿದೆ. ಅದರ ರೀತಿ ನೀತಿಗಳಲ್ಲಿ, ತತ್ವಗಳಲ್ಲಿ ಏನೂ ಬದಲಾವಣೆಯಾಗಿಲ್ಲ, ಆಗಿರುವುದು ನೆಹರು ಆದರ್ಶಗಳ ಸೋಲಿನ ಹಿನ್ನೆಲೆಯಲ್ಲಿ ಅದು ತನ್ನ ಅದೇ ಹಳೆಯ ತತ್ವಗಳಲ್ಲಿ ಮಾಡಿಕೊಂಡ ಪುನರ್ನವೀಕರಣ, ದೃಢೀಕರಣ ಅಷ್ಟೇ. ಬಿ.ಜೆ.ಪಿ.ಯ ಉನ್ನತಿಗೆ, ಹಿಂದೂತ್ವದ ಪರಿಕಲ್ಪನೆ ಮುಂಚೂಣಿಗೆ ಬರಲು ಕಾರಣವಾದದ್ದು ನಮ್ಮ ಸಾಮಾಜಿಕ, ಆರ್ಥಿಕ ರಂಗಗಳಲ್ಲಿ ನೆಹರು ಮತ್ತು ಕಾಂಗ್ರೆಸ್‌ನ ಅಭಿವೃದ್ಧಿಪರ ಪರಿಕಲ್ಪನೆಗಳು ಹೀನಾಯವಾಗಿ ಸೋತಿದ್ದು.

ನೆಹರು ಏನು ಹೇಳಿದ್ದರು? ಮೊದಲನೆಯದು ಅಲಿಪ್ತ ನೀತಿ, ಇದು ಇವತ್ತು ಎಲ್ಲಿದೆ? ಇದು ಯಾರಿಗೆ ಬೇಕಿದೆ ಇವತ್ತು? ಎರಡನೆಯದು ಸಮಾಜವಾದ, ಸಾಮಾಜಿಕ ನ್ಯಾಯ. ಇಂದು ಇದು ಪ್ರಸ್ತುತವಾಗಿ ಉಳಿದಿದೆ ಅನಿಸುತ್ತದೆಯೇ? ಸಮಾಜವಾದ ಎಲ್ಲಿದೆ ಇವತ್ತು? ಸಮಾಜವಾದದ ಪರಿಕಲ್ಪನೆ ಏನಿತ್ತು, ಅದು ಇವತ್ತು ಏನಾಗಿದೆ ಎಂಬುದನ್ನು ಸ್ವಲ್ಪ ಗಮನಿಸಿ. ಇನ್ನು ಪ್ರಜಾಪ್ರಭುತ್ವ ಮತ್ತು ಜಾತ್ಯತೀತ ನಿಲುವು ಅವರ ಮೂರನೆಯ ಮತ್ತು ನಾಲ್ಕನೆಯ ತತ್ವ ಆಗಿತ್ತು. ಇವೆರಡನ್ನೂ ಬಿ.ಜೆ.ಪಿ. ಮತ್ತು ಆರ್.ಎಸ್.ಎಸ್. ತನ್ನದೇ ಆದ ರೀತಿಯಲ್ಲಿ ಅಳವಡಿಸಿಕೊಂಡು ಅವಕ್ಕೆ ತನ್ನದೇ ಆದ ಹೊಸ ಅರ್ಥ ಮತ್ತು ಪರಿಕಲ್ಪನೆಗಳನ್ನು ಕೊಡುತ್ತಿದೆ. ಬಹುಸಂಖ್ಯಾತರ ಆಶೋತ್ತರಗಳೇ ಪ್ರಜಾಪ್ರಭುತ್ವದ ಆಶೋತ್ತರಗಳು ಎಂಬುದೇ ಆ ಅರ್ಥ ಮತ್ತು ಪರಿಕಲ್ಪನೆ. ಯಾರು ಈ ಬಹುಸಂಖ್ಯಾತರು? ಖಂಡಿತವಾಗಿಯೂ ಹಿಂದೂಗಳೇ. ಹಿಂದೂಗಳ ಆಶೋತ್ತರಗಳಿಗೆ ಸರಿಯಾಗಿ ಇಲ್ಲಿರುವ ಉಳಿದವರೂ ಇರಬೇಕಾಗುತ್ತದೆ ಮತ್ತು ಹಾಗೆ ಇರುವುದು, ಇರುವಂತೆ ಮಾಡುವುದೇ ಪ್ರಜಾಪ್ರಭುತ್ವ ಮತ್ತು ಸೆಕ್ಯುಲರಿಸಂ ಎನ್ನುತ್ತದೆ ಆರ್.ಎಸ್.ಎಸ್.

ಬಹುಸಂಖ್ಯಾತ ನಿಲುವು ಎಂದರೇನು? ಬಹುಸಂಖ್ಯಾತ ನಿಲುವಿಗೆ ಮಾನ್ಯತೆ ಸಿಗಬೇಕಾದರೆ ಅದು ಯಾವತ್ತಿಗೂ ಸ್ಥಿರವಾದ ಒಂದು ಸಂಗತಿಯೊಂದಿಗೆ ತಳುಕುಹಾಕಿಕೊಂಡಿರುವಂತಿಲ್ಲ. ಕಾಲ-ದೇಶದ ಹಿನ್ನೆಲೆಯಲ್ಲಿ, ಸಂದರ್ಭ ಮತ್ತು ಅಗತ್ಯಗಳಿಗೆ ತಕ್ಕಂತೆ ಬದಲಾಗಬಲ್ಲ ಮೆಜಾರಿಟಿ ನಿಲುವೇ ಬಹುಸಂಖ್ಯಾತರ ನಿಲುವು ಎನ್ನಬಹುದಾದ್ದು ನಿಲುವಿನ ಪ್ರಧಾನ ಗುಣವಾಗಿರಬೇಕು. ಈ ಬಹುಸಂಖ್ಯಾತರ ನಿಲುವು ಸದಾಕಾಲಕ್ಕೂ ಸ್ಥಿರವಾದ ಒಂದು ವರ್ಗದ ಹಿಡಿತದಲ್ಲಿರುವುದಾದರೆ ಅದಕ್ಕೆ ಬೆಲೆಯಿಲ್ಲ. ಗಂಡಸರ ಬಹುಸಂಖ್ಯಾತತನ ಎಂಬುದು ಹೆಂಗಸರನ್ನು ತುಳಿಯುವುದಕ್ಕೆ ಸಕಾರಣ ಬಹುಮತವಾಗುವುದಾದರೆ ಅದು ಎಂದಾದರೂ ಬದಲಾಗುವುದಿದೆಯೇ? ಗಂಡಸರು ಯಾವತ್ತಿದ್ದರೂ ಗಂಡಸರಾಗಿಯೇ ಇರುತ್ತಾರೆ. ಅದೇ ನಿಲುವುಗಳ ಮಾತು ಬೇರೆ. ಅವು ಬದಲಾಗುತ್ತಿರುತ್ತವೆ. ನಿನ್ನೆ ನಿಮಗಿದ್ದ ನಿಲುವು ಇವತ್ತು ಬದಲಾಗಬಹುದು ಅಥವಾ ಬೇರೆ ಬೇರೆ ವಿಚಾರಗಳ ವಿಷಯದಲ್ಲಿ ನಿಮ್ಮ ನಿಲುವು ವಿಭಿನ್ನವಾಗಿರಲು ಸಾಧ್ಯ. ಆದರೆ ಸ್ಥಿರವಾದ ವಸ್ತುಸ್ಥಿತಿಗಳಿಗೆ ನಿಮ್ಮ ಬಹುಸಂಖ್ಯಾತ ಸ್ಥಿತಿ ತಳುಕುಹಾಕಿಕೊಂಡಿದ್ದೇ ಆದಲ್ಲಿ ಅದು ಎಂದೆಂದಿಗೂ ಸ್ಥಿರವಾಗಿಯೇ ಉಳಿಯುತ್ತ ಇನ್ನೊಂದು ಕಡೆಯ ಅಲ್ಪಸಂಖ್ಯಾತರಿಗೆ ಎಂದೆಂದಿಗೂ ಅನ್ಯಾಯವಾಗುತ್ತಿರುವುದೇ ನ್ಯಾಯ ಎಂಬ ನಿಲುವಿಗೆ ನಾವು ಬರಬೇಕಾಗುತ್ತದೆ. ಇಂಥದನ್ನು ಒಪ್ಪಲು ಸಾಧ್ಯವೆ?

ಪ್ರಜೆಗಳ ಬಹುಸಂಖ್ಯಾತತನ ಬದಲಾಗಬಹುದಾದ ಚಲನಶೀಲ ಚರ ವಿದ್ಯಮಾನ ಆಗಿರಬೇಕಿರುವುದು ಈ ಕಾರಣಕ್ಕೆ. ಆಗ ಮಾತ್ರ ಅದು ಪ್ರಜಾಪ್ರಭುತ್ವ ಆಗುತ್ತದೆ. ಅದಕ್ಕೆ ಬದಲಾಗಿ ಸಾರ್ವಕಾಲಿಕವಾಗಿ ಒಂದೇ ವರ್ಗದ ಆಸ್ತಿಯಾದ ಬಹುಸಂಖ್ಯಾತ ನಿಲುವೇ ಪ್ರಭುತ್ವವಾಗುವುದಾದರೆ ಅದನ್ನು ಪ್ರಜಾಪ್ರಭುತ್ವ ಎನ್ನಲಾದೀತೆ? ಹಿಂದೂ ರಾಷ್ಟ್ರೀಯತೆಯ ಹಿಂದೆ ಇರುವ ಪರಿಕಲ್ಪನೆ ಇಂಥದು. ಹಿಂದೂಗಳ ಬಹುಸಂಖ್ಯಾತ ಪ್ರಜಾಪ್ರಭುತ್ವದಲ್ಲಿ ಹಿಂದೂಗಳಲ್ಲದವರಿಗೆ ಯಾವ ಸ್ಥಾನವೂ, ಧ್ವನಿಯೂ ಇಲ್ಲ.

ಹಿಂದೂ ಕೋಮುವಾದ ಎಂಬುದು ಇಲ್ಲಿ ಬಹುಸಂಖ್ಯಾತ ಕೋಮುವಾದವಾಗಿದೆ ಎನ್ನುವ ಅಚಿನ್ ಈ ನಿಲುವು ರಾಷ್ಟ್ರೀಯತೆಯನ್ನು ತನಗೆ ಆರೋಪಿಸಿಕೊಂಡು ರಾಷ್ಟ್ರವ್ಯಾಪಿ ಜಾಲವಾಗಿ ಹರಡಿಕೊಂಡಿರುವುದನ್ನೂ ಅಲ್ಪಸಂಖ್ಯಾತರನ್ನು ಎರಡನೆಯ ದರ್ಜೆ ಪ್ರಜೆಗಳನ್ನಾಗಿ ಬಿಂಬಿಸುತ್ತಿರುವುದನ್ನೂ ನಮ್ಮ ಗಮನಕ್ಕೆ ತರುತ್ತಾರೆ.

ಹಿಂದೂಗಳನ್ನು ಒಗ್ಗೂಡಿಸುವುದರ ಮೂಲಕ ರಾಷ್ಟ್ರವನ್ನು ಬಲಪಡಿಸಿ ಎನ್ನುವ ಸಾವರ್ಕರ್ ತರಹದವರ ವಾದದಲ್ಲಿ ತಪ್ಪೇನೂ ಕಾಣಿಸುವುದಿಲ್ಲ, ಹಿಂದೂಗಳೇ ಬಹುಸಂಖ್ಯಾತರಾಗಿರುವುದರಿಂದ ಅವರು ಒಗ್ಗೂಡುವುದರಿಂದ ರಾಷ್ಟ್ರ ಬಲಗೊಳ್ಳುವುದರಲ್ಲಿ ಸಂದೇಹವಿಲ್ಲ ಎನ್ನುವ ಅಚಿನ್ ಈ ಹಿಂದೂ ಒಗ್ಗೂಡುವಿಕೆಗೆ ಅವರು ಬಳಸುವ ಮಾರ್ಗೋಪಾಯಗಳು ಏನು ಎಂಬುದರತ್ತ ನಮ್ಮ ಗಮನ ಸೆಳೆಯುತ್ತಾರೆ.

ಒಂದು ಧರ್ಮದ ಆಧಾರದಲ್ಲಿ ಜನರನ್ನು ಒಗ್ಗೂಡಿಸಲು ಎರಡೇ ಮಾರ್ಗಗಳಿರುವುದು ಎನ್ನುವ ಅಚಿನ್ ಅದರಲ್ಲಿ ಮೊದಲನೆಯದು, ಆ ಧರ್ಮದ ಒಳಗೇ ಲಭ್ಯವಿದ್ದು ಎಲ್ಲರಿಗೂ ಸಮಾನವಾದ ತಿರುಳನ್ನು ಹಿಡಿದು ಅದರ ಎಳೆಯಲ್ಲಿ ಎಲ್ಲರನ್ನೂ ಒಗ್ಗೂಡಿಸುವುದು ಎಂದು ವಿಶ್ಲೇಷಿಸುತ್ತಾರೆ. ಇದು ಅನೇಕ ಒಳಪಂಗಡಗಳು, ಅನೇಕ ಆಹಾರ ಕ್ರಮಗಳು, ವಿಧಿವಿಧಾನಗಳು, ಜಾತಿ ಪದ್ಧತಿ, ಸತಿ ಪದ್ಧತಿ, ಬಾಲ್ಯವಿವಾಹ, ಅಸ್ಪೃಶ್ಯತೆಯಂಥ ಒಡಕನ್ನು ಹೊಂದಿದ್ದ ಹಿಂದೂ ಧರ್ಮಕ್ಕೆ ಸಾಧ್ಯವಿರಲಿಲ್ಲ ಎನ್ನುತ್ತಾರೆ. ಹಾಗಾಗಿ ಅದು ಅನಿವಾರ್ಯವಾಗಿ ಎರಡನೆಯ ಹಾದಿಯನ್ನು ತುಳಿಯಬೇಕಾಯಿತು.

ಒಂದು ಧರ್ಮಕ್ಕೆ ಆಂತರಿಕವಾಗಿ ತನ್ನ ಧರ್ಮೀಯರನ್ನು ಒಗ್ಗೂಡಿಸಬಲ್ಲ ವಸ್ತು ಸಿಗದಿದ್ದರೆ ಧರ್ಮದ ಹೊರಗೆ ಎಲ್ಲರನ್ನೂ ಒಂದೇ ನೆಲೆಯಡಿ ತರಬಲ್ಲ ಯಾವುದಾದರೂ ಸಂಗತಿಯನ್ನು ಹುಡುಕಿಕೊಳ್ಳುವುದು ಎರಡನೆಯ ಮಾರ್ಗೋಪಾಯ. ಅದು ಯಾವುದು? ಅವರಿಗೆಲ್ಲ ಏನನ್ನಾದರೂ ದ್ವೇಷಿಸಲಿಕ್ಕೆ ಒಂದು ಹೊರಗಿನ ಆಕೃತಿಯನ್ನು ಕಲ್ಪಿಸಿಕೊಡುವುದು! ಅವರಿಗೆ ಮುಸ್ಲಿಮರನ್ನು ದ್ವೇಷಿಸಲು ಪ್ರೇರೇಪಿಸುವುದು ಆ ಹಾದಿ. ಜೊತೆಗೆ ಮುಸ್ಲಿಮರು ಹಿಂದೂಗಳನ್ನು ತುಳಿಯುತ್ತಿದ್ದಾರೆಂದೂ ಅವರು ತಮ್ಮ ಮೇಲೆ ದೌರ್ಜನ್ಯ ಎಸಗುತ್ತಿದ್ದಾರೆಂದು ಹುಯಿಲಿಡುವುದು.

ಆದರೆ ಇದು ಕೂಡ ಕಷ್ಟವೇ ಆಗಿತ್ತು, ಯಾಕೆಂದರೆ, ಹೊಟ್ಟೆಪಾಡೇ ಒಂದು ಸಮಸ್ಯೆಯಾಗಿರುವ ತಮ್ಮದೇ ಊರಿನ ಅಲ್ಪಸಂಖ್ಯಾತರೂ, ಬಡವರೂ ಆಗಿರುವ

## ಬಾಬಾಬುಡನ್‌ಗಿರಿ

ಬೆಟ್ಟ
ಮೋಡವ
ಸೀ
ಳಿಕೊಂಡು
ಒಳ ಹೋಗಿತ್ತು.

ಮೆಲ್ಲ
ಮೆಲ್ಲನೆ
ತಳಕ್ಕಿಳಿದ
ಮೋ
ಡ
ನೆಲವ ನುಂಗಿ ಒಡಲಾಗಿತ್ತು.



ನಾಗತಿಹಳ್ಳಿ ರಮೇಶ
ನಂ. ೫೫೦, ೨ನೇ ಮುಖ್ಯರಸ್ತೆ, ವಾಟರ್ ಟ್ಯಾಂಕ್ ರಸ್ತೆ, ಆರ್.ಬಿ.ಐ. ಲೇಔಟ್, ಪುಟ್ಟೇನಹಳ್ಳಿ, ಜೆ.ಪಿ. ನಗರ ೭ನೇ ಹಂತ ಬೆಂಗಳೂರು - ೭೮

ಮುಸ್ಲಿಮರನ್ನು ನಿತ್ಯ ನೋಡುತ್ತಿರುವ ಜನರಿಗೆ ಅವರು ಮೇಲೇರಿ ಬರುತ್ತಾರೆ, ದೌರ್ಜನ್ಯ ಮಾಡುತ್ತಾರೆ ಎಂದರೆ ಯಾರು ನಂಬುತ್ತಾರೆ? ವಸ್ತುಸ್ಥಿತಿಯ ಅರಿವು ಇರುವಾಗ ಇಂಥ ಸುಳ್ಳುಗಳನ್ನು ನಂಬಲಾಗುವುದಿಲ್ಲ. ಆಗ ಇಂದು ಮಾತ್ರ ನಾವು ಕೇಳಿಕೊಳ್ಳುತ್ತಿರುವಂಥ ಆರೋಪಗಳ ಅಗತ್ಯ ಅನಿವಾರ್ಯವಾಗುತ್ತದೆ ಎಂದು ತಮ್ಮ ವಾದವನ್ನು ವರ್ತಮಾನದ ವಿದ್ಯಮಾನಗಳಿಗೆ ಜೋಡಿಸುತ್ತಾರೆ ಅಚಿನ್.

ಸರಕಾರ ಮುಸ್ಲಿಮರನ್ನು ತುಷ್ಟೀಕರಿಸುತ್ತಿದೆ. ಮುಸ್ಲಿಮರ ಪರವಾಗಿರುವ ಸರಕಾರ ಅವರ ಮನವೊಲಿಸಿಕೊಳ್ಳಲು ಏನೇನೋ ಮಾಡುತ್ತಿದೆ ಎಂಬ ವರ್ತಮಾನದ ತಿರುಚುವಿಕೆಯ ಜೊತೆಗೆ ಭೂತ ಮತ್ತು ಭವಿಷ್ಯತ್‌ಕಾಲದ ವಿದ್ಯಮಾನಗಳ ತಿರುಚುವಿಕೆ ಕೂಡ ಜರುಗುತ್ತಿದೆ. ಅವುಗಳಲ್ಲಿ ಒಂದು, ಹಿಂದೆ ಮುಸ್ಲಿಮರದ್ದೇ ಪ್ರಭುತ್ವ ಇದ್ದ ಕಾಲದಲ್ಲಿ ಅವರು ಹಿಂದೂಗಳ ಮೇಲೆ ದೌರ್ಜನ್ಯ ನಡೆಸಿದ್ದಾರೆ, ಹಿಂದೂಗಳ ದೇವಾಲಯ ಪುಡಿ ಮಾಡಿದ್ದಾರೆ, ಹಿಂದೂ ಹೆಂಗಸರನ್ನು ಕೆಡಿಸಿದ್ದಾರೆ, ಮತಾಂತರ ಮಾಡಿದ್ದಾರೆ ಎಂಬುದನ್ನು ಕೆದಕಿ, ಆ ಮೂಲಕ ಇವತ್ತಿನ ಹಿಂದೂ ಮನಃಸ್ಥಿತಿಯನ್ನು ಕೆಡಿಸಿ, ಅವರನ್ನು ಮುಸ್ಲಿಂ ದ್ವೇಷದ ತಳಹದಿಯ ಮೇಲೆ ಒಗ್ಗೂಡಿಸುವುದು. ಇನ್ನೊಂದು, ಮುಸ್ಲಿಮರ ಜನಸಂಖ್ಯೆ ಹೆಚ್ಚುತ್ತಿದೆ, ಇದೇ ಗತಿಯಲ್ಲಿ ಅವರ ಜನಸಂಖ್ಯೆ ವೃದ್ಧಿಯಾದಲ್ಲಿ ಇನ್ನು ಹತ್ತು ಹದಿನೈದು ವರ್ಷಗಳಲ್ಲೇ ಈ ದೇಶದಲ್ಲಿ ಹಿಂದೂಗಳು ಅಲ್ಪಸಂಖ್ಯಾತರಾಗುವ ಸಾಧ್ಯತೆ ಇದೆ ಎಂಬ ಭೀತಿ ಹರಡುವುದು.




ಹಿಂದೆ ಅವರು ನಮ್ಮನ್ನು ಆಳಿದರು, ಮೇಲ್ಗೈ ಸಾಧಿಸಿದ್ದರು ಎಂಬುದನ್ನೇ ಇವತ್ತಿನ ನಮ್ಮ ದುಃಖ ದುಮ್ಮಾನಗಳಿಗೆ ಕಾರಣ ಎಂಬಂತೆ ಬಿಂಬಿಸುವುದು ಮತ್ತು ಅಂದಿನ ತಪ್ಪುಗಳನ್ನು ಇಂದು ಸರಿಪಡಿಸುವ ಕಾರ್ಯಕ್ರಮಗಳನ್ನು ಪ್ರೇರೇಪಿಸುವುದು : ಬಾಬರಿ ಮಸೀದಿ ಘಟನೆ ಇದಕ್ಕೊಂದು ಉದಾಹರಣೆ.

ಇಷ್ಟಾಗಿಯೂ ಸಂಘಪರಿವಾರದ ಅಹವಾಲಿಗೆ ಜನರಲ್ಲಿ ಪ್ರತಿಸ್ಪಂದನವಿದೆ ಎನ್ನುತ್ತಾರೆ ಅಚಿನ್. ಇದು ಮಧ್ಯಮ ವರ್ಗದಲ್ಲಿದೆ ಎನ್ನಲಾಗುತ್ತದೆ, ಆದರೆ ಈ ಮಧ್ಯಮವರ್ಗ ಎಂದರೆ ಯಾವುದು ಎನ್ನುವಲ್ಲಿ ತಪ್ಪುಕಲ್ಪನೆ ಇದೆ. ಸಾಧಾರಣವಾಗಿ ಮೇಲ್ವರ್ಗದ ಶೇ. ೧೦-೨೦ ಮಂದಿ ಮತ್ತು ತೀರಾ ಕೆಳವರ್ಗದ ಶೇ. ೩೫-೪೦ ಮಂದಿಯನ್ನು ಹೊರತುಪಡಿಸಿದ ವರ್ಗ ಮಧ್ಯಮವರ್ಗ ಎಂದು ತಿಳಿಯಲಾಗುತ್ತದೆ. ಆದರೆ ಸಂಘಪರಿವಾರದ ಆಶಯಗಳನ್ನು ಪ್ರತಿಸ್ಪಂದಿಸುತ್ತಿರುವ ಮಧ್ಯಮವರ್ಗ ಇದಲ್ಲ. ಅದು ಕೆನೆಪದರದ ಶೇ. ೧೫-೨೦ ಮಂದಿ. ಇವರು ಹೆಚ್ಚು ಹೆಚ್ಚು ಅತಂತ್ರರೂ, ಆತಂಕದಲ್ಲಿರುವವರೂ, ಸಿನಿಕರೂ ಆದ ಮೇಲ್ವರ್ಗದ ಜನ. ಇವರು ಈ ದೇಶದ ಕಾರ್ಯಾಂಗ, ನ್ಯಾಯಾಂಗ, ಶಾಸಕಾಂಗವನ್ನೂ ಸೇರಿದಂತೆ ಇಲ್ಲಿನ ಆಡಳಿತಶಾಹಿ, ವ್ಯಾಪಾರ ವ್ಯವಹಾರ, ಅಭಿವೃದ್ಧಿ ಎಲ್ಲವನ್ನೂ ನಿಯಂತ್ರಿಸಬಲ್ಲ ಶಕ್ತಿ ಹೊಂದಿದವರು. ಆದರೆ ಈ ವರ್ಗ ಒಂದು ವಿಚಾರದಲ್ಲಿ ಮಾತ್ರ ಯಾವುದೇ ಹಿಡಿತ ಹೊಂದಲು ಸಾಧ್ಯವಾಗಿಲ್ಲ. ಅದು ಚುನಾವಣಾ ಪ್ರಕ್ರಿಯೆ. ಇದೇ ಈ ವರ್ಗದ ಮೂಲಭೂತ ಆತಂಕಕ್ಕೆ, ಅಭದ್ರ ಸ್ಥಿತಿಗೆ ಕಾರಣ. ಇವರಿಗೆ ಈ ದೇಶದ ಪ್ರಜಾಪ್ರಭುತ್ವದ ಸ್ವಭಾವ, ಅದು ಕೆಲಸ ಮಾಡುವ ಬಗೆ ಅರ್ಥವಾಗಿಲ್ಲ ಮತ್ತು ಅದು ಇವರ ಹಿಡಿತಕ್ಕೆ ಸಿಕ್ಕಿಲ್ಲ. ಜನಸಾಮಾನ್ಯರು ಚುನಾವಣೆಯಲ್ಲಿ ಯಾವ ರೀತಿಯಲ್ಲಿ ಪ್ರತಿಸ್ಪಂದಿಸುತ್ತಾರೆ, ಹೇಗೆ ತಮ್ಮ ನಿರ್ಣಯ ನೀಡುತ್ತಾರೆ ಎಂಬುದು ಇವರಿಗೆ ಒಂದು ಬಗೆಯ ಭಯ, ಅತಂತ್ರಸ್ಥಿತಿ, ಆತಂಕ ತರುತ್ತಿರುತ್ತದೆ. ಇದರಿಂದ ಪಾರಾಗುವುದಕ್ಕಾಗಿಯೇ ಇವರು ಈ ಹಿಂದೂತ್ವದ ರಕ್ಷಣೆಗೆ ಒಳಪಡಲು ಬಯಸುತ್ತಾರೆ. ಇಲ್ಲಿ ಹಿಂದೂತ್ವ ಹೀಗೆ ಇವರ ಅಸ್ತ್ರವಾಗುತ್ತದೆ.

ರಾಜಕೀಯ ಪಕ್ಷಗಳು ಯಾವತ್ತೂ ಮೇಲ್ವರ್ಗವನ್ನೇ ಓಲೈಸುತ್ತ ಬಂದಿರುವಂಥವು. ಅವುಗಳಿಗೆ ನಿಜವಾಗಿಯೂ ಬಡಜನತೆಯ ಬಗ್ಗೆ ಶ್ರೀಸಾಮಾನ್ಯನ ಬಗ್ಗೆ ಯಾವುದೇ ಕಾಳಜಿ ಇಲ್ಲ.

ಈ ಹಿನ್ನೆಲೆಯಲ್ಲಿ ಬಿ.ಜೆ.ಪಿ. ಕರೆಯಂತೆ ಭಾರತ ಬಲಿಷ್ಠ ರಾಷ್ಟ್ರವಾಗಬೇಕು. ಸರಿ, ಯಾರು ಬೇಡವೆನ್ನುತ್ತಾರೆ? ಭಾರತ ಬಲಿಷ್ಠ ರಾಷ್ಟ್ರವಾಗಬೇಕೆಂದು ಎಲ್ಲರೂ ಬಯಸುತ್ತಾರೆ. ಭಾರತ ಸಾಂಸ್ಕೃತಿಕವಾಗಿ ಭವ್ಯವಾಗಬೇಕೆಂದು ಅವರು ಕರೆ ಕೊಡುತ್ತಾರೆ, ಖಂಡಿತ. ಯಾರಿಗೆ ಇದೆಲ್ಲ ತಪ್ಪು, ಸರಿಯಲ್ಲ ಅನಿಸುತ್ತದೆ? ಆದರೆ, ಯೋಚಿಸಬೇಕಾಗಿರುವುದು, ಈ ರಾಷ್ಟ್ರ ಎಂದು ಇವರು ಏನನ್ನು ಹೇಳುತ್ತಿದ್ದಾರೆ? ಇವರ ಸಂಸ್ಕೃತಿಯ ಪರಿಕಲ್ಪನೆ ಏನು?

ಸಾಂಸ್ಕೃತಿಕ ರಾಷ್ಟ್ರೀಯತೆ ಎಂದರೆ ಏನು ಎಂಬುದನ್ನು ನಾವು ಅರ್ಥಮಾಡಿಕೊಳ್ಳಬೇಕಿದೆ. ಇವರ ಸಂಸ್ಕೃತಿ ಎಂದರೆ ಹಿಂದೂತ್ವ ಮತ್ತು ಸ್ಥಿರವಾದ ಮೌಲ್ಯಗಳ ಸಂಸ್ಕೃತಿ.

ನಿಜವಾಗಿ ಸಂಸ್ಕೃತಿ ಎಂದರೇನು ಎಂದು ಅಚಿನ್ ಪ್ರಶ್ನಿಸುತ್ತಾರೆ. ಅವರ ಪ್ರಕಾರ ಸಂಸ್ಕೃತಿಗೆ ಐದು ಪ್ರಮುಖ ಲಕ್ಷಣಗಳಿರಬೇಕು. ಅದಿಲ್ಲದ್ದು ಸಂಸ್ಕೃತಿಯಾಗಲಾರದು. ಸ್ಥಿರವಾದ ಮೌಲ್ಯಗಳ ಹಿಂದೂತ್ವವನ್ನು ಇವರು ಈ ದೇಶದ ಸಂಸ್ಕೃತಿ ಎಂದು ಬಿಂಬಿಸುವಾಗ ಇದನ್ನು ನಾವು ಸರಿಯಾಗಿ ಅರಿತುಕೊಳ್ಳುವುದು ಅವಶ್ಯವಿದೆ.

ಮೊದಲನೆಯದಾಗಿ, ಮೂಲಭೂತವಾಗಿ ಸಂಸ್ಕೃತಿ ಬಹುಮುಖಿಯಾದದ್ದು. ಒಬ್ಬ ಮನುಷ್ಯನಿಗೆ, ಒಬ್ಬ ರೈತನಿಗೆ, ತನ್ನದೇ ಆದ ಸಂಸ್ಕೃತಿ ಇದೆ. ಹಿಂದೂಗೆ ತನ್ನದೇ ಸಂಸ್ಕೃತಿ ಇದೆ. ಒಬ್ಬ ಒಳ್ಳೆಯ ತಂದೆಯಾಗಿ, ಗಂಡನಾಗಿ, ಕುಟುಂಬದ ಸದಸ್ಯನಾಗಿ ತನ್ನದೇ ಸಂಸ್ಕೃತಿ ಹೊಂದಿರುತ್ತಾನೆ. ಆತ ಒಂದು ಊರಿಗೆ ಸೇರಿದವನಾಗಿ ಆ ಊರಿನ ನಡಾವಳಿಗೆ ಸೇರಿದ ಸಂಸ್ಕೃತಿಯೊಂದಿಗೆ ಬದುಕುತ್ತಾನೆ. ಹುಬ್ಬಳ್ಳಿಯವನ ಸಂಸ್ಕೃತಿ, ಮೈಸೂರಿನವನ ಸಂಸ್ಕೃತಿ ಎಂಬುದೂ ಇದೆ. ಒಬ್ಬ ಅಧ್ಯಾಪಕನಿಗೆ, ವಿದ್ಯಾರ್ಥಿಗೆ, ಒಬ್ಬ ಮೆಕಾನಿಕ್‌ಗೆ ತನ್ನದೇ ಆದ ಸಂಸ್ಕೃತಿ ಇದೆ. ಅದನ್ನೆಲ್ಲ ತಿಳಿದುಕೊಳ್ಳದ, ಅದನ್ನೆಲ್ಲ ಅಡಕಗೊಳ್ಳದ ಏಕಮುಖಿ ಸಂಸ್ಕೃತಿ, ಎಲ್ಲರಿಗೂ ಅನ್ವಯವಾಗದ ಸಂಸ್ಕೃತಿಯನ್ನು ಸಂಸ್ಕೃತಿ ಎನ್ನಲಾಗದು.

ಎರಡನೆಯದಾಗಿ, ಸಂಸ್ಕೃತಿ ಸದಾ ಬದಲಾವಣೆಗೆ ತೆರೆದಿರುವಂಥದ್ದು. ನಮ್ಮಲ್ಲಿ ಎಲೀಟ್ ಸಂಸ್ಕೃತಿ ಎಂಬುದಿದೆ, ತಳಮಟ್ಟದ ಸಂಸ್ಕೃತಿ ಇದೆ, ಜನಪ್ರಿಯ ನೆಲೆಯ ಸಂಸ್ಕೃತಿ ಇದೆ, ಸಮೂಹ ಮಾಧ್ಯಮಗಳ ಸಂಸ್ಕೃತಿಗಳಿವೆ, ಸಿನಿಮಾ, ಸಂಗೀತ, ಕ್ರೀಡೆ ಎಲ್ಲಕ್ಕೂ ಸಂಬಂಧಿಸಿದಂತೆ ತಮ್ಮದೇ ಆದ ಸಾಂಸ್ಕೃತಿಕ ಪರಂಪರೆ ಇದ್ದೇ ಇದೆ. ಅದು ಎಲ್ಲದಕ್ಕೂ ತೆರೆದಿರುತ್ತದೆ. ಇದು ಇರಬೇಕು ಅಥವಾ ಇದು ಇರಬಾರದು ಎಂದು ಯಾರೂ ವಿಧಿಸುವಂತಿಲ್ಲ. ಎಲ್ಲವೂ ಇದ್ದರೆ, ಇರುವಾಗಲೇ ಅದು ಸಂಪನ್ನ ಸಂಸ್ಕೃತಿಯಾಗಿರಲು ಸಾಧ್ಯ.

ಮೂರನೆಯದಾಗಿ, ಸಂಸ್ಕೃತಿ ಸಾಮಾನ್ಯವಾಗಿರುತ್ತದೆ. ನಮ್ಮ ನಿಮ್ಮ ಸಾಮಾನ್ಯ ಬದುಕಿನೊಂದಿಗೇ ಅದು ಹರಿಯುತ್ತಿರುತ್ತದೆ. ಅರ್ಥಪೂರ್ಣತೆಯನ್ನೂ, ವೈರುಧ್ಯವನ್ನೂ, ಅಧಿಕೃತತೆಯನ್ನೂ ಅದು ಹೊಂದಿರುತ್ತದೆ.

ನಾಲ್ಕನೆಯದಾಗಿ, ಸಂಸ್ಕೃತಿ ಬದಲಾಗುತ್ತಿರುತ್ತದೆ. ಅದು ನಿಂತ ನೀರಲ್ಲ. ಕಾಲಕಾಲಕ್ಕೆ ಅದು ಬದಲಾಗುತ್ತ, ಹೊಸದನ್ನು ಒಳಗೊಳ್ಳುತ್ತ, ಹಳೆಯದನ್ನು, ಅನಗತ್ಯವಾದುದನ್ನು ಬಿಟ್ಟುಕೊಡುತ್ತ ಬದಲಾಗುತ್ತಿರುತ್ತದೆ.

ಐದನೆಯದಾಗಿ, ಸಂಸ್ಕೃತಿ ಸದಾ ಬೆಳೆಯುತ್ತಿರುತ್ತದೆ. ಅದು ವಿಸ್ತಾರವಾಗುತ್ತಾ, ಆಳವಾಗುತ್ತ ಹೋಗುತ್ತದೆ. ಅದು ತನ್ನ ಬೆಳವಣಿಗೆಯನ್ನು, ಬದಲಾವಣೆಯನ್ನು ಒಪ್ಪಿಕೊಳ್ಳುವುದರ ಮೂಲಕವೇ ಪ್ರಗತಿ ಸಾಧಿಸುವುದರಿಂದ ತಾನು ಸದಾ ಪುರೋಗಾಮಿಯಾಗಿ ಬೆಳೆಯುತ್ತಿರುತ್ತದೆ.

ಹೀಗಿರುವಾಗ ಸಾಂಸ್ಕೃತಿಕ ದೌರ್ಜನ್ಯ ಮತ್ತು ಶೋಷಣೆಗೆ ಅವಕಾಶ ನೀಡುವ ಯಾವುದನ್ನಾದರೂ ಸಂಸ್ಕೃತಿ ಎಂದು ಒಪ್ಪಿಕೊಳ್ಳಲು ಸಾಧ್ಯವೆ? ರಾಷ್ಟ್ರೀಯತೆ ಎಂಬುದು ಪಾರಂಪರಿಕವಾಗಿ ಬರಬೇಕಾದದ್ದು. ಹಿಂದೂಗಳೇ ಅದರ ಒಡೆಯರು ಮತ್ತು ಹಾಗಾಗಿ ಮುಸ್ಲಿಮರು ಹೊರಗಿನವರು, ಅವರಿಗೆ ಈ ದೇಶದಲ್ಲಿ ಯಾವ ಹಕ್ಕೂ ಇರುವುದಿಲ್ಲ ಎನ್ನುವುದನ್ನು ಒಪ್ಪಲು ಸಾಧ್ಯವೆ? ರಾಷ್ಟ್ರೀಯತೆ ಎಂಬುದು ಒಂದು ಸದಾಕಾಲವೂ ನಡೆಯುತ್ತಲೇ ಇರುವ ಅಭಿಯಾನ. ಅಮೆರಿಕವನ್ನು ಗಮನಿಸಿ, ಅಲ್ಲಿರುವುದು ವಲಸೆಗಾರರ ಸಮಾಜವೇ ಎನ್ನಬಹುದು. ಅದೇ ಹೊರಗಿನಿಂದ ಬಂದಿರುವ ಸಮಾಜ. ಹಾಗಾಗಿಯೇ ಅಲ್ಲಿ ಒಳಗೊಳ್ಳುವ ರಾಷ್ಟ್ರೀಯತೆಯ ಒಂದು ಆರೋಗ್ಯಕರ ಸಮಾಜವಿದೆ.

ಜಗತ್ತಿನ ಅತ್ಯಂತ ವೈವಿಧ್ಯಮಯ ಸಂಸ್ಕೃತಿ, ಭಾಷೆ, ಕಲೆ ಮತ್ತು ಪರಿಸರಗಳುಳ್ಳ ಸುಂದರವಾದ ನಮ್ಮೀ ಭಾರತದ ಬಗ್ಗೆ ತಮಗೆ ಅತೀವ ಹೆಮ್ಮೆ ಇದೆ, ಪ್ರೀತಿ ಇದೆ ಎನ್ನುವ ಅಚಿನ್ ಅನೇಕ ವಿಚಾರಗಳಲ್ಲಿ ಜಗತ್ತಿನ ಇನ್ನೆಲ್ಲೂ ಇಲ್ಲದ ಸಮೃದ್ಧಿ ಇಲ್ಲಿದೆ, ಅದನ್ನೆಲ್ಲ ಉಳಿಸಿ ಬೆಳೆಸುವ ಹೊಣೆಗಾರಿಕೆಯೂ ನಮ್ಮೆಲ್ಲರ ಮೇಲಿದೆ ಎನ್ನುತ್ತ ತಮ್ಮ ಮಾತುಗಳನ್ನು ಮುಗಿಸಿದರು.

ನರೇಂದ್ರ ಪೈ
'ವಿಘ್ನೇಶ್' (ಮಹಡಿ), ಮಾರಿಗುಡಿ ಕ್ರಾಸ್ ರೋಡ್, ಉರ್ವ ಮಾರ್ಕೆಟ್, ಮಂಗಳೂರು - ೫೭೫ ೦೦೬

# ಸಾರ್ಥಕ ಬದುಕಿನ ಅನಾವರಣ

**ಮುಗಿಯದ ಪಯಣ**

ಲೇಖಕರು

ಜಿ. ಟಿ. ನಾರಾಯಣರಾವ್

ಪುಟ : ೪೩೨+xvi ಬೆಲೆ : ರೂ. ೧೨೦

ಪ್ರಕಟಣೆ

ಅತ್ರಿ ಬುಕ್ ಸೆಂಟರ್, ೪, ಶರಾವತಿ ಕಟ್ಟಡ, ಬಲ್ಮಠ

ಮಂಗಳೂರು - ೫೭೫ ೦೦೧



ಮುಗಿಯದ ಪಯಣ

ಜಿ. ಟಿ. ನಾರಾಯಣರಾವ್

'ಮುಗಿಯದ ಪಯಣ' ವಿಜ್ಞಾನ ಸಾಹಿತ್ಯವನ್ನು ಕನ್ನಡಕ್ಕೆ ಒಗ್ಗಿಸಿಕೊಂಡು ಆ ಕ್ಷೇತ್ರದಲ್ಲಿ ಅಪಾರ ಕೃಷಿ ಮಾಡಿ ಖ್ಯಾತನಾಮರಾದ ಶ್ರೀಮಾನ್ ಜಿ. ಟಿ. ನಾರಾಯಣರಾವ್ ಅವರ ಆತ್ಮಕಥನ. ಪ್ರಾದೇಶಿಕ ಭಾಷೆಯಲ್ಲಿ ವಿಜ್ಞಾನ ವಿಷಯಗಳ ಕುರಿತಾದ ಬರೆಹಗಳನ್ನು ರಚಿಸಲು ಸಾಧ್ಯ ಎಂದು ಸಾಧಿಸಿ ತೋರಿಸಿ ಕನ್ನಡ ನುಡಿಯ ಸಮೃದ್ಧತೆಯ ಕುರಿತು ಅರಿವು ಮೂಡಿಸಿದ ಮಹಾನುಭಾವರ ಜೀವನ ಚರಿತ್ರೆ. ಕಾಲೇಜಿನಲ್ಲಿ ಗಣಿತಶಾಸ್ತ್ರದ ಬೋಧಕರಾಗಿದ್ದು ತದನಂತರ ಶ್ರೀಯುತ ದೇ.ಜ.ಗೌ. ಅವರ ಆಹ್ವಾನ ಮನ್ನಿಸಿ 'ಕನ್ನಡ ವಿಶ್ವಕೋಶ'ದ ವಿಜ್ಞಾನ ವಿಭಾಗದ ಕಾರ್ಯನಿರ್ವಾಹಕ ಸಂಪಾದಕರಾಗಿ ನಿವೃತ್ತರಾಗುವವರೆಗಿನ ವೃತ್ತಿ ಜೀವನದ ಅವಧಿಯ ಸಮೃದ್ಧ ಅನುಭವಗಳನ್ನು ದಾಖಲಿಸುವಲ್ಲಿ ಸಿಂಹಪಾಲನ್ನು ಪಡೆದಿರುವ ಕೃತಿ. ೪೩೧ ಪುಟಗಳ 'ಮುಗಿಯದ ಪಯಣ' ಎಲ್ಲಿಯೂ ಒಂದು ಹೆಜ್ಜೆ ವಿರಮಿಸಲು ಬಿಡದೆ ಸರಾಗವಾಗಿ ಕೊನೆಯ ಪುಟದವರೆಗೆ ಓದುಗರನ್ನು ವಶವರ್ತಿಗಳನ್ನಾಗಿಸಿಕೊಂಡು ಓದಿಸಿಕೊಂಡು ಹೋಗಲು ಪ್ರಮುಖ ಕಾರಣ ಲೇಖಕರ ಲಘುಹಾಸ್ಯ ಮಿಶ್ರಿತ ಸರಸ ಶೈಲಿ, ತಮ್ಮನ್ನು ತಾವು ವಿನೋದ ಮಾಡಿಕೊಂಡು ಅನುಭವಗಳನ್ನು ಹಂಚಿಕೊಳ್ಳುವ ಆಪ್ತತೆ, ಎಂತಹ ಗಹನ ವಿಷಯಗಳನ್ನೂ ಸರಳವಾಗಿ ತಿಳಿಸುವ ಪರಿ, ಅಲ್ಲಲ್ಲಿ ಸಂದರ್ಭೋಚಿತವಾಗಿ ಮಿಂಚಿ ಕಣ್ಸೆಳೆಯುವ ಮಂಕುತಿಮ್ಮನ ಕಗ್ಗ, ಸರ್ವಜ್ಞನ ವಚನಗಳು, ದಾಸರ ಪದಗಳು, ಖ್ಯಾತನಾಮರ ಕವಿತೆಗಳೊಡನೆ ಸ್ವತಃ 'ಅತ್ರಿಸೂನು' ನಾಮಾಂಕಿತದೊಡನೆ ಶ್ರೀಯುತರು ರಚಿಸಿರುವ ಜೀವನ ದರ್ಶನದ ಮುಕ್ತಕಗಳು. ಬೆನ್ನುಡಿಯಲ್ಲಿ ಶ್ರೀ ರಾಘವೇಂದ್ರ ಭಟ್ಟ ಅವರು ಗುರ್ತಿಸಿರುವಂತೆ ಕೊಡಗಿನ ಕೂಸು ಕರ್ನಾಟಕದ ಕಣ್ಮಣಿಯಾದ ಪವಾಡವನ್ನು ಈ ಪುಸ್ತಕ ಅನಾವರಣಗೊಳಿಸಿದೆ. ನಿರೂಪಣೆಯಲ್ಲಿ ಲೇಖಕರು ಯಾವ ಹೆಗ್ಗಳಿಕೆ ಮೆರೆಯದೆ ವಿನಮ್ರರಾಗಿದ್ದರೂ ಕೂಡ ವೃತ್ತಿ ಜೀವನದಲ್ಲಿ ಎದುರಾಗುವ ನಾನಾ ಪ್ರಸಂಗಗಳನ್ನು ಅವರು ಯಾವ ರೀತಿಯಲ್ಲಿ ಎದುರಿಸಿದರು, ತಮ್ಮ ನಿಲುವಿಗೆ ಬದ್ಧರಾಗಿದ್ದು ಪರಿಹಾರ ಕಂಡುಕೊಂಡರು, ಎನ್ನುವ ವಿವರಣೆಯಲ್ಲಿಯೇ ಅವರ ಜೀವನದೃಷ್ಟಿಯ ಕುರಿತಾಗಿ ಓದುಗರಲ್ಲಿ ಸ್ಪಷ್ಟ ತಿಳಿವಳಿಕೆ ಮೂಡಿ ಅವರ ವ್ಯಕ್ತಿತ್ವದ ಬಗ್ಗೆ ಅಭಿಮಾನ ಉಂಟಾಗುವುದು ಕೃತಿಯ ವೈಶಿಷ್ಟ್ಯ. ತಮ್ಮ ಬದುಕನ್ನು ರೂಪಿಸಿದ ಮುಖ್ಯ ಅಂಶಗಳ ಕುರಿತು ಲೇಖಕ ಜಿ.ಟಿ.ಎನ್. ಸೂತ್ರರೂಪದಲ್ಲಿ ಹೀಗೆನ್ನುತ್ತಾರೆ, 'ಸಂಗೀತವೆನ್ನುಸಿರು, ಸಾಹಿತ್ಯವೆನ್ನೊಡಲು, ವಿಜ್ಞಾನವೆನ್ನಶನ. ಅಧ್ಯಾತ್ಮದೆಡೆ ಗಮನ'. ಈ ಸೂತ್ರ ತಮ್ಮ ಭವಿಷ್ಯ ರೂಪಿಸಿದ್ದರ ಕುರಿತು ಕೃತಿಯಲ್ಲಿ ವಿವರಗಳನ್ನು ಸಂದರ್ಭಾನುಸಾರ ಕಟ್ಟಿಕೊಟ್ಟಿದ್ದಾರೆ, ಜಿ.ಟಿ.ಎನ್. ಮಡಿಕೇರಿಯ ತಿಮ್ಮಪ್ಪಯ್ಯ, ವೆಂಕಟಲಕ್ಷ್ಮಿ ದಂಪತಿಗಳ ಮಗ (೩೦-೧-೧೯೨೬) ಮನೆಯವರ ಮುದ್ದಿನ ಕಣ್ಮಣಿಯಾಗಿ ಬೆಳೆಯುತ್ತಾ ತಂದೆಯಿಂದ ಶಿಸ್ತು, ತಾಯಿಯಿಂದ ಸಾಹಿತ್ಯ ಪ್ರೀತಿ, ಚಿಕ್ಕಪ್ಪನಿಂದ ಸಾಹಸಮಯ ಜೀವನದ ರುಚಿ, ಚಿಕ್ಕಮ್ಮನಿಂದ ಸಹನೆಯ ಬೆಲೆ, ಅಜ್ಜಿಯರಿಂದ ಸಂಗೀತಾಸಕ್ತಿ, ಮುತ್ತಜ್ಜನಿಂದ ಮಂತ್ರ, ತಂತ್ರ, ಪೂಜಾವಿಧಾನಗಳಲ್ಲಿ ಪ್ರಾವೀಣ್ಯ ಸಂಪಾದಿಸಿದೆ ಎನ್ನುತ್ತಾರೆ ಜಿ.ಟಿ.ಎನ್. ಪರಿಸರ ತಿದ್ದಿತೀಡಿದಂತೆ ರೂಪುಗೊಳ್ಳುವ ಬಾಲ್ಯಕಾಲದಲ್ಲಿ ಇಂತಹ ಸಮೃದ್ಧ ಕೌಟುಂಬಿಕ ಜೀವನ. ಜೊತೆಗೆ ನಿಸರ್ಗ ವೈಭವದಿಂದ ಮೆರೆಯುವ ಮಡಿಕೇರಿಯ ಪ್ರಾಕೃತಿಕ ಒಡನಾಟ. ಉಪನಯನದ ನಂತರ ಮಡಿಕೇರಿ ಹಾಗೂ ಅದರಾಚೆಯ ಪುತ್ತೂರಿನಲ್ಲಿಯೂ ಕೂಡ ಹನ್ನೊಂದರ ಎಳೆ ಹುಡುಗ ಸತ್ಯನಾರಾಯಣ ಪೂಜೆ, ರುದ್ರಾಭಿಷೇಕ, ನವಗ್ರಹಶಾಂತಿ ಮುಂತಾದುವನ್ನು ಮಾಡಿಸುತ್ತಾ ದಕ್ಷಿಣೆ ಹಣವನ್ನು ಉಳಿತಾಯ ಖಾತೆಯಲ್ಲಿ ಜಮಾ ಮಾಡುತ್ತಿದ್ದವನು. ಅದರಿಂದ ವಿಮುಖನಾಗಿ ವೈಚಾರಿಕಪ್ರಜ್ಞೆ ಬೆಳೆಸಿಕೊಂಡ ಕಾರಣದ ಸ್ವಾರಸ್ಯವನ್ನು ಓದಿಯೇ ತಿಳಿಯಬೇಕು. ಮಾಧ್ಯಮಿಕ ಶಾಲೆಯ ವಿದ್ಯಾರ್ಥಿಯಾಗಿದ್ದಾಗ ಕೊಡಗಿಗೆ ಬಂದಿದ್ದ ಮಹಾತ್ಮಾ ಗಾಂಧಿಯವರ ದರ್ಶನ ಮಾಡಿ ಬ್ರಾಹ್ಮಣ ಭೋಜನಗಳಲ್ಲಿ ದಕ್ಷಿಣೆಯಾಗಿ ದೊರಕಿದ್ದ ಎಂಟಾಣೆ ಮೊತ್ತವನ್ನು ಅವರಿಗೆ ಅರ್ಪಿಸಿದ್ದು, 'ಕನ್ನಡ ಕುವರ' ಕಾವ್ಯನಾಮದಲ್ಲಿ ಕತೆ, ಕವನ, ಪ್ರಬಂಧಗಳನ್ನು ಹೊಸೆಯುತ್ತಿದ್ದದ್ದು, ಗ್ರಂಥಾಲಯದಿಂದ ಪುಸ್ತಕಗಳನ್ನು ಎರವಲು ತಂದು ಓದಿ ಟಿಪ್ಪಣಿ ಮಾಡಿಕೊಳ್ಳುತ್ತಿದ್ದುದು, ವಿದ್ಯಾರ್ಥಿ ಕವನ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಪಡೆದದ್ದು, ಹೀಗಿದ್ದರೂ ಪ್ರೌಢಶಾಲೆ ಬಿಡುವ ವೇಳೆಗೆ ತಾನು ಕವಿಯಲ್ಲ ಎನ್ನುವ ಪ್ರಥಮ ಭ್ರಮನಿರಸನದೊಂದಿಗೆ ಕನ್ನಡ ಕವನ ಪ್ರಪಂಚ ಅಪ್ಸರಮಟ್ಟಿಗೆ ಪದಮಾಲಿನ್ಯ ರಹಿತವಾಗಿದ್ದು, ತಮ್ಮ ಆಪ್ತಧಾಟಿಯಲ್ಲಿ ಎಲ್ಲವನ್ನೂ ವಿವರಿಸುತ್ತಾ ಊಟದ ಜೊತೆಗಿನ ಉಪ್ಪಿನಕಾಯಿಯ ಹಾಗೆ ತಮ್ಮ ಬಾಲ್ಯದ ಕಾಲದ ರಚನೆಗಳಲ್ಲಿ ಕೆಲ ಕವನಗಳನ್ನು ಜಿ.ಟಿ.ಎನ್. ಉದಾಹರಿಸಿದ್ದಾರೆ ಕೂಡ.

ಕೊಡಗಿನಲ್ಲಿ ಎಸ್.ಎಸ್.ಎಲ್.ಸಿ. ಮುಗಿಸಿದ ಹುಡುಗ ಪಿ.ಸಿ.ಎಮ್. ಸಂಯೋಜನೆ ಆಯ್ದುಕೊಂಡು ಮಂಗಳೂರಿನಲ್ಲಿ ಇಂಟರ್ಮೀಡಿಯೆಟ್ ವೈತರಣಿ ದಾಟುವವರೆಗಿನ ಅನುಭವ ಸ್ವಾತಂತ್ರ್ಯ ಹೋರಾಟದ ಕೆಲವು ಹೊಳಹುಗಳನ್ನು ಒಳಗೊಂಡಂತೆ ನವಿರಾಗಿ ಚಿತ್ರಿತ. ಗಣಿತ ಆನರ್ಸ್ ಮಾಡಲು ಮದ್ರಾಸ್ ಪಯಣ, ಮಂಗಳೂರಿನಲ್ಲಿ ಓದುತ್ತಿದ್ದಾಗ ಕೇವಲ ಮುಖಪರಿಚಯವಿದ್ದ ಬಾಗಲೋಡಿ ದೇವರಾಯರೊಡನೆ ಮದ್ರಾಸಿನ ತಾಂಬರಮ್‌ನಲ್ಲಿ ಚಿರಕಾಲದ ಆತ್ಮೀಯ ಮಿತ್ರರಂತೆ ಒಡನಾಡಿದ್ದು, ಅವರ ಸಹಾಯ, ಸಹಕಾರ, ನಂತರ ತಾವು ಕಾಲೇಜು ಬದಲಾಯಿಸಬೇಕಾಗಿ ಬಂದಿದ್ದು, ತಮ್ಮ ಅನುಭವಗಳನ್ನೆಲ್ಲಾ ಬಿಚ್ಚು ಹೃದಯದಿಂದ ದಾಖಲಿಸುತ್ತಾರೆ. ಜಿ.ಟಿ.ಎನ್. ಎಂ.ಎ. ಸಮನೆಂದು ವಿಶ್ವವಿದ್ಯಾಲಯ ಅಂಗೀಕರಿಸಿದ ಬಿ.ಎ. (ಆನರ್ಸ್) ನಂತರ ಮೂರು ತಿಂಗಳು ಮದ್ರಾಸಿನ ಬ್ಯಾಂಕ್‌ನಲ್ಲಿ ದುಡಿಮೆ, ಮದ್ರಾಸಿನ ಕ್ರಿಶ್ಚಿಯನ್ ಕಾಲೇಜಿನಲ್ಲಿ ದೇವರಾಯರ ಸಹೋದ್ಯೋಗಿ. ಅಲ್ಲಿ ವಿದ್ಯಾರ್ಥಿಗಳಾಗಿದ್ದ ಕು. ಶಿ. ಹರಿದಾಸ ಭಟ್ಟ. ಸೇವ ನಮಿರಾಜಮಲ್ಲ, ಪಿ. ರಂಗನಾಥ ಶೆಣೈಯವರ ಸಾಹಚರ್ಯ. ಕರ್ನಾಟಕ ಸಂಗೀತ ಕಛೇರಿಗಳಿಗೆ ಕಡ್ಡಾಯ ಬೈಠಕ್ಕು, ಸಣ್ಣಕತೆಗಳ ರಚನೆ, ಮಾಸ್ತಿಯವರ 'ಜೀವನ' ಪತ್ರಿಕೆಯಲ್ಲಿ ಪ್ರಕಟಣೆ. ಹೀಗೆ ಯುವ ಜಿ.ಟಿ.ಎನ್. ಚಟುವಟಿಕೆಯ ಚಿಲುಮೆ. ಮುಂದೆ ಈ ಮುನ್ನ ಮಂಗಳೂರಿನಲ್ಲಿ ಇಂಟರ್ಮೀಡಿಯೆಟ್ ಓದಿದ 'ಸಂತ ಅಲೋಶಿಯಸ್' ಕಾಲೇಜಿನಲ್ಲಿ ಗಣಿತ ಉಪನ್ಯಾಸಕ. ಕ್ಯಾಲ್ಕುಲಸ್‌ನ ಪರಿಕಲ್ಪನೆ, ಶೋಧಕರಿಬ್ಬರಲ್ಲಿ ಆದ್ಯತೆ ಕುರಿತಂತೆ

ಉಂಟಾದ ವೈಮನಸ್ಸು ಎರಡು ರಾಷ್ಟ್ರಗಳ ನಡುವಿನ ಮಾತ್ಸರ್ಯವಾಗಿದ್ದರ ಕುರಿತು ಬರೆದ ಕನ್ನಡ ಲೇಖನ ಪಾ. ವೆಂ. ಸಂಪಾದಕತ್ವದ ಕರ್ಮವೀರದಲ್ಲಿ ಪ್ರಕಟವಾಗಿ ಪಾ. ವೆಂ. ಅವರ ಸದಾಶಯ ದೊರೆತದ್ದು ಕನ್ನಡದಲ್ಲಿ ವಿಜ್ಞಾನ ಲೇಖನಗಳ ರಚನೆಗೆ ಪ್ರೇರಕ. 'ವಿಜ್ಞಾನ ವಿಷಯಗಳ ಸಹಜ ಕಾಠಿಣ್ಯವನ್ನು ನೀವು ಸಾಹಿತ್ಯ ಸಂಸ್ಪರ್ಶದಿಂದ ಮಾರ್ದವಗೊಳಿಸುವ ವಿಧಾನ ಸೊಗಸಾಗಿದೆ. ಹೀಗೆಯೇ ಕೃಷಿ ಮಾಡುತ್ತಿರಿ' ಎಂದು ಪಾ. ವೆಂ. ಈ ತರುಣ ಲೇಖಕನಿಗೆ ಹರಸಿದರು.

ತಮ್ಮ ಸಾಹಿತ್ಯ, ಸಂಗೀತಾಸಕ್ತಿಗಳಿಗೆ ಸಮೃದ್ಧ ಪೋಷಣೆಯಿತ್ತ ಸೋದರಮಾವ ಸುಬ್ಬಯ್ಯ ಅವರ ಮಗಳು ಲಕ್ಷ್ಮಿಯನ್ನು ವಿವಾಹವಾಗಿ ಜಿ.ಟಿ.ಎನ್. ಗೃಹಸ್ಥರಾದರು. ತಮ್ಮ ಕೌಟುಂಬಿಕ ಜೀವನದ ಕುರಿತು ದೀರ್ಘವಾಗಿ ಬರೆಯದಿದ್ದರೂ ಪತ್ನಿ ನನ್ನೆಲ್ಲ ಕಲ್ಪನೆ, ನಿರೀಕ್ಷೆಗಳನ್ನು ಮೀರಿದ ಸುಸಂಸ್ಕೃತೆ, ಅನುಕೂಲೆ ಎಂಬುದನ್ನು ಹೃದಯತುಂಬಿ ಹೇಳಿಕೊಂಡು ತಾವು ಸಂತೃಪ್ತ ಗೃಹಸ್ಥರಾಗಿದ್ದುದನ್ನು ಜಿ.ಟಿ.ಎನ್. ಸೂಚಿಸಿದ್ದಾರೆ. ಮುಂದೆ ಎನ್.ಸಿ.ಸಿ. ಶಿಕ್ಷಣ ಪಡೆದು ಸೆಕೆಂಡ್ ಲೆಫ್ಟಿನೆಂಟ್ ಆಗಿ ಹದಿನೇಳು ವರ್ಷಗಳ ಕಾಲ ಕಾಲೇಜು ಹುಡುಗರಿಗೆ ಎನ್.ಸಿ.ಸಿ. ಶಿಕ್ಷಣ ನೀಡಿದಾಗಿನ ಅನುಭವಗಳ ವಿವರಗಳು 'ಎನ್.ಸಿ.ಸಿ. ದಿನಗಳು' ಎನ್ನುವ ಪುಸ್ತಕದಲ್ಲಿ ನಿರೂಪಿತವಾಗಿವೆ. ಈ ಪುಸ್ತಕದಲ್ಲೂ ಅಲ್ಲಿಯ ಕೆಲವು ಸಂದರ್ಭಗಳನ್ನು ಜಿ.ಟಿ.ಎನ್. ದಾಖಲಿಸಿದ್ದಾರೆ.

ಮಂಗಳೂರಿನಿಂದ ಮಡಿಕೇರಿಯ ಕಾಲೇಜಿಗೆ ತಂದೆಯ ಇಚ್ಛೆಯನುಸಾರ ಸ್ಥಳಾಂತರ. ಪಠ್ಯದೊಂದಿಗೆ ಪಠ್ಯೇತರ ಚಟುವಟಿಕೆಗಳಿಗೂ ಪ್ರಾಶಸ್ತ್ಯ ಕೊಡಬೇಕಾದ ಸನ್ನಿವೇಶ. ಪ್ರಾಂಶುಪಾಲರ ಕನಸುಗಳಿಗೆ ಹಲವು ಆದರ್ಶಗಳನ್ನು ತಲೆಯಲ್ಲಿ ತುಂಬಿಕೊಂಡ ಯುವಕನ ಮುಕ್ತ ಸಹಾಯಹಸ್ತ. ಕಾಲೇಜಿನ ಸಮಾಜ ಸೇವಾ ಘಟಕದ ಗೌರವ ಉಪಾಧ್ಯಕ್ಷರಾಗಿ ಜಿ.ಟಿ.ಎನ್. ನೇಮಕ. ಅನೇಕ ರಚನಾತ್ಮಕ ಕೆಲಸಗಳ ಉಸ್ತುವಾರಿ. ವಿದ್ಯಾರ್ಥಿಗಳ ಆವಶ್ಯಕತೆಗಳ ಪೂರೈಕೆಗಾಗಿ ಸ್ಥಾಪನೆಗೊಂಡ ಸಹಕಾರ ಸಂಘ ಇವರ ಗೌರವ ಕಾರ್ಯದರ್ಶಿತ್ವದಲ್ಲಿ ಮಾದರಿ ಸಂಸ್ಥೆಯಾಗಿ ಬೆಳೆದಿದ್ದು, ಸಹಕಾರ ಸಂಘಗಳ ಒಳಸುಳಿಗಳು, ಪುಸ್ತಕ ವಿಕ್ರಯದಲ್ಲಿನ ಆಸೆ-ಆಮಿಷಗಳ ಗಾಳ, ದೊಡ್ಡವರ ಸಣ್ಣತನ, ಸಣ್ಣವರ ದೊಡ್ಡತನ ಇತ್ಯಾದಿಗಳ ಕುರಿತು ವಿವರಿಸಿರುವ ಲೇಖಕರು ತಮ್ಮ ಶುದ್ಧಹಸ್ತದ ನಡವಳಿಕೆಯಿಂದ ಗೌರವಭಾಜನರಾಗುತ್ತಾರೆ. ಶೂರ್ಪನಖಿತ್ವ ಗುರುತಿಸಿ ಅದರಿಂದ ದೂರವಿರುವ ರಾಮತತ್ವ ನಮ್ಮಲ್ಲಿರಲಿ ಎಂದು ಪ್ರಾರ್ಥಿಸುವುದೊಂದೇ ಆರ್ಜವದ ಮಾರ್ಗ ಅನ್ನುತ್ತಾರೆ.

> **ಬಯಕೆ**
>
> ಮಾತಿಲ್ಲ ಕಥೆಯಿಲ್ಲ
> ಮೂಲೆ ಸೇರಿದೆ ಕನಸು
> ನನಸಿನ ಬೆನ್ನೇರು ಮನಸೆ
> ಕನಸಿಗೆ ಕೈ ಸೇರಿಸು
>
> **ವಾಸುದೇವ ನಾಡಿಗ್**
> ಜವಾಹರ್ ನವೋದಯ ವಿದ್ಯಾಲಯ
> ಏನಿಗದಲೆ, ಚಿಂತಾಮಣಿ, ಕೋಲಾರ

೧೯೬೩ರಲ್ಲಿ ದೇಶಸೇವೆಯೆಂಬ ಹೊಸ ಅಮಲಿನಲ್ಲಿ ಕಾಲೇಜಿನಿಂದ ಬಿಡುಗಡೆಗೊಂಡು ಬಳ್ಳಾರಿ ಸೇರಿ ಎನ್.ಸಿ.ಸಿ. ಘಟಕದ ಕಮಾಂಡರ್ ಆದ ಜಿ.ಟಿ.ಎನ್. ಇಪ್ಪತ್ತು ತಿಂಗಳ ನಂತರ ಬೆಂಗಳೂರು ಸರ್ಕಾರಿ ಕಾಲೇಜಿಗೆ, ತಮ್ಮ ಮೂಲವೃತ್ತಿಗೆ ಮರಳಿದರು. ಯಾವತ್ತಿನ ಪಠ್ಯಕ್ರಮದೊಡನೆ ಮತ್ತೆ ಕೊರಳಿಗೆ ಬಿದ್ದ ಎನ್.ಸಿ.ಸಿ. ಅಧಿಕಾರಿಯ ಹುದ್ದೆ. ಚಟುವಟಿಕೆಗಳಿಗೆ ಹೊಸ ಆಯಾಮ. 'ಶಿಲಾರೋಹಣ', 'ಶಿಲಾವರೋಹಣ' ಕಲೆಯ ಕುರಿತು ಆಸಕ್ತಿ, ಬಿಸಿರಕ್ತದ, ಹುರುಪಿನ ಎನ್.ಸಿ.ಸಿ. ಹುಡುಗರೊಂದಿಗೆ ಕುದುರೆಮುಖ ಪರ್ವತ ಶ್ರೇಣಿಯ ಸಾಹಸಯಾತ್ರೆಯ ರಮ್ಯ ನಿರೂಪಣೆ. ಜೊತೆ ಜೊತೆಗೆ ಮಿಡಿಯುವ ಮೇಜರ್ ನಾರಾಯಣ ಸಿಂಗ್ ಅವರ ಜೀವನದ ವಿಷಾದ ಗೀತೆ.

ಕನ್ನಡದ ಆಸ್ತಿ ಮಾಸ್ತಿಯವರ ನಿಕಟವರ್ತಿಗಳಾಗಿ, ಅವರ ಅಂತರ್ಯಕ್ಕೆ ಹತ್ತಿರದವರಾಗಿ, ಅವರ ಜೀವನ ಬೆಳೆದುಬಂದ ಬಗೆಯನ್ನು ಬರೆಹ ರೂಪದಲ್ಲಿ ದಾಖಲಿಸುವ ಅಪರೂಪದ ಅವಕಾಶ ದೊರಕಿದ ಬಗೆಯನ್ನು ಜಿ.ಟಿ.ಎನ್. ಮನೋಜ್ಞವಾಗಿ ನಿರೂಪಿಸಿದ್ದಾರೆ. ನೊಬೆಲ್ ಪ್ರಶಸ್ತಿ ಪಡೆದ ಸುಪ್ರಸಿದ್ಧ ಭೌತವಿಜ್ಞಾನ ಸರ್ ಸಿ. ವಿ. ರಾಮನ್‌ರವರ ಜೀವನ ಮತ್ತು ಸಾಧನೆಗಳ ಕುರಿತಾಗಿ ಲೇಖನ ಬರೆಯಬೇಕಾದ ಸಂದರ್ಭದಲ್ಲಿ ಅವರ ಮನವೊಲಿಸಿ ಯಶಸ್ವಿಯಾಗಿದ್ದು ಒಂದು ರೋಚಕ ವೃತ್ತಾಂತ. ಗಣಿತ ಮೇರು, ಕನ್ನಡ ವಾಲ್ಮೀಕಿ, ಸಿ. ಎನ್. ಶ್ರೀನಿವಾಸ ಅಯ್ಯಂಗಾರ್ಯರ ಒಡನಾಟವನ್ನು ಲೇಖಕರು ಗೌರವಪೂರ್ವಕವಾಗಿ ನೆನಪಿಸಿಕೊಂಡು ಓದುಗರಿಗೆ ಇಂತಹದೊಂದು ಮೇರುವ್ಯಕ್ತಿತ್ವವನ್ನು ಪರಿಚಯಿಸಿದ್ದಾರೆ. ದೇ.ಜ.ಗೌ. ಅವರಂತಹ ಸಹೃದಯಿ, ಗುಣಪಕ್ಷಪಾತಿಗಳ ಆಹ್ವಾನ ಮನ್ನಿಸಿ ಮೈಸೂರಿಗೆ ಬಂದ ಜಿ.ಟಿ.ಎನ್. ವಿಶ್ವಕೋಶದ ವಿಜ್ಞಾನ ವಿಭಾಗದ ಸಂಪಾದಕರಾದರು. ಪ್ರಸಿದ್ಧ ವಿದ್ವಾಂಸರ ಸಹವರ್ತಿಯಾದರು. ಕನ್ನಡ ವಿಜ್ಞಾನ ಭಾಷೆಯಾಗಿ ಬೆಳೆದಿಲ್ಲವೆಂಬ ಹೇಳಿಕೆಯನ್ನು ಸುಳ್ಳಾಗಿಸುವಂತೆ ವಿಜ್ಞಾನ ವಿಶ್ವಕೋಶ ಸಂಪುಟಗಳು ಕಾಲಕಾಲಕ್ಕೆ ಪ್ರಕಟಗೊಳ್ಳತೊಡಗಿದವು. ಈ ಮಹತ್ಕಾರ್ಯದ ನಡುವೆ ಎದುರಿಸಬೇಕಾಗಿ ಬಂದ ನಿಷ್ಠುರ, ವೈಮನಸ್ಯ, ಕ್ರಮೇಣ ಕಂಡುಬರತೊಡಗಿದ ಮಲತಾಯಿ ಧೋರಣೆ, ಇತ್ಯಾದಿಗಳನ್ನು ಸವಿವರವಾಗಿ ಹೇಳಿಕೊಂಡಿದ್ದಾರೆ ಜಿ.ಟಿ.ಎನ್.

ಐಬಿಎಚ್ ಪ್ರಕಾಶನದವರಿಗಾಗಿ ಇಂಗ್ಲಿಷಿನಲ್ಲಿ ಪ್ರಕಟವಾಗಿದ್ದ ವಿಜ್ಞಾನ ವಿಷಯದ ಮಕ್ಕಳ ಪುಸ್ತಕಗಳನ್ನು ಅನುವಾದಿಸಿಕೊಟ್ಟಿದ್ದು, 'ವಿಜ್ಞಾನ ಪರಿಚಯ' ಮಾಲಿಕೆಯ ಸಂಪಾದಕತ್ವ, 'ವಿಜ್ಞಾನ ನೋಡು, ಕಲಿ' ಮಾಲಿಕೆಯ ನಿರ್ವಹಣೆ, ಹೀಗೆ ವಿಜ್ಞಾನ ಲೇಖಕರಾಗಿ ಆ ಕ್ಷೇತ್ರಕ್ಕೆ ಜಿ.ಟಿ.ಎನ್. ಕೊಡುಗೆ ಅಪಾರ. ತಮ್ಮ ಕಾರ್ಯರಂಗದಲ್ಲಿ ಲೇಖಕರು ಒಡನಾಡಿದ ಖ್ಯಾತನಾಮರು ಅನೇಕರು. ಮುಕ್ತಮನಸ್ಸಿನಿಂದ ಅವರು ಮೆಚ್ಚಿಕೊಂಡಂತಹವರು, ಗೌರವಾರ್ಹರು ಇರುವಂತೆ ಕರ್ತವ್ಯದಲ್ಲಿ ಪ್ರಾಮಾಣಿಕ ತೊಡಗಿಸಿಕೊಳ್ಳುವಿಕೆ ಇಲ್ಲದಿರುವವರ ಕುರಿತು ನಿರ್ದಾಕ್ಷಿಣ್ಯವಾಗಿ ಜಿ.ಟಿ.ಎನ್. ತಮ್ಮ ಅನುಭವ, ಅಭಿಪ್ರಾಯ, ವ್ಯಕ್ತಪಡಿಸಿದ್ದಾರೆ. ತಮ್ಮ ಕೆಲಸ, ಜವಾಬ್ದಾರಿಗಳಲ್ಲಿ ಯಾವ ಲೋಪವೂ ಕಂಡುಬರದಂತೆ ಶ್ರದ್ಧೆ, ಕಾರ್ಯದಕ್ಷತೆ, ನಿಖರತೆ, ಬದ್ಧತೆಯನ್ನು ರೂಢಿಸಿಕೊಂಡಿದ್ದ ಜಿ.ಟಿ.ಎನ್. ಉಳಿದವರಿಂದ ಇಂತಹದೇ ನಿರೀಕ್ಷೆ ಇಟ್ಟುಕೊಂಡಿದ್ದು ಸಹಜ. ಆದರೆ ವಸ್ತುಸ್ಥಿತಿ ಅವರ ಸಹನೆಯನ್ನು ಪರೀಕ್ಷಿಸುವಂತಿದ್ದು ಅವರಿಂದ ನಿಷ್ಠುರ ನುಡಿಗಳನ್ನಾಡಿಸಿದ್ದರೆ ಅದೂ ಸಹಜ. ಓದುಗರಿಗೆ ಹೀಗೆನ್ನಿಸುವುದು ನಿಜ.

೧೯೮೭ರಲ್ಲಿ ನಿವೃತ್ತರಾದ ನಂತರ ಕನ್ನಡದಲ್ಲಿ ಜನಪ್ರಿಯ ವಿಜ್ಞಾನ ಕೃತಿಗಳ ರಚನೆ, ಗಾನಭಾರತೀ ಸಂಗೀತ ಸಂಸ್ಥೆಯ ಕನಸಾದ ವೀಣೆ ಶೇಷಣ್ಣ ಭವನದ ನಿರ್ಮಾಣಕ್ಕೆ ಸೇವಾ ಕೈಂಕರ್ಯ ಮತ್ತು ನೊಬೆಲ್ ಪಾರಿತೋಷಕ ಪುರಸ್ಕೃತ, ಅಮೆರಿಕ ನಿವಾಸಿ, ಸುಬ್ರಹ್ಮಣ್ಯ ಚಂದ್ರಶೇಖರ್ ಇವರ ಸಂದರ್ಶನ ತಾವು ತಮ್ಮ ತೃಪ್ತ್ಯರ್ಥ ಕೈಗೊಂಡ ಕೆಲಸಗಳು ಎನ್ನುತ್ತಾರೆ ಜಿ.ಟಿ.ಎನ್. ಕೆಲ ಸಂಘ, ಸಂಸ್ಥೆಗಳ ಸದಸ್ಯತ್ವ, ಅಲ್ಲಿನ ಅನುಭವಗಳ ಕುರಿತೂ ಜಿ.ಟಿ.ಎನ್. ಪುಸ್ತಕದಲ್ಲಿ ವಿವರಿಸಿದ್ದಾರೆ.

ಇವರ ಮೇರುಸಾಧನೆಯನ್ನು ಗುರುತಿಸಿ ಹಲವು ಪ್ರಶಸ್ತಿ, ಪುರಸ್ಕಾರಗಳು ಇವರನ್ನು ಅರಸಿ ಬಂದಿವೆ. 'ವಿದ್ವತ್ತಿಗೆ, ಶಿಸ್ತಿಗೆ, ಸಾಹಸಕ್ಕೆ, ನಿಯತ್ತಿಗೆ, ರುಚಿರುಚಿ ಶುದ್ಧಿಗೆ, ಜೀವನೋತ್ಸಾಹಕ್ಕೆ, ಸತ್ಕಾರ್ಯ ಸಾಧನಾ ಛಲಕ್ಕೆ, ವೈಜ್ಞಾನಿಕ ಮನೋಧರ್ಮಕ್ಕೆ, ವಿಜ್ಞಾನ ಪ್ರಸಾರ ಸಮರ್ಪಣ ಮನೋಧರ್ಮಕ್ಕೆ, ಸರಳ ಸಜ್ಜನಿಕೆಗೆ, ಮತ್ತೊಂದು ಹೆಸರು ಜಿ.ಟಿ.ಎನ್.' ಎನ್ನುವುದು 'ವಿಶ್ವದ ಕಥೆ' ಎನ್ನುವ ಇದೇ ಲೇಖಕರ ಪುಸ್ತಕಕ್ಕೆ ದೇ.ಜ.ಗೌ. ಬರೆದ ಮುನ್ನುಡಿಯಲ್ಲಿನ ಕೆಲಪಂಕ್ತಿಗಳು. 'ಮುಗಿಯದ ಪಯಣ' ಓದಿ ಮುಗಿಸಿದಾಗ ಈ ಸತ್ಯದ ಅರಿವು ಓದುಗರಿಗೂ ಆಗಿರುತ್ತದೆ. ಸಮಾಜಕ್ಕೆ ಮಾದರಿಯಾಗಿ ಬದುಕುತ್ತಾ, ವಿಜ್ಞಾನ ಸಾಹಿತ್ಯ ಕ್ಷೇತ್ರಕ್ಕೆ ಅಪೂರ್ವ ಕೊಡುಗೆ ನೀಡಿದ ಉನ್ನತ ವ್ಯಕ್ತಿತ್ವವೊಂದರ ನಿಕಟ ಪರಿಚಯವಾಗಿ ಆ ವ್ಯಕ್ತಿತ್ವದ ಕುರಿತು ಗೌರವಭಾವನೆಯಿಂದ ಮನಸ್ಸು ತುಂಬಿಹೋಗಿರುತ್ತದೆ. ಪುಸ್ತಕದ ಕೊನೆಯಲ್ಲಿ ಹೇಳಿಕೊಂಡಿದ್ದಾರೆ ಜಿ.ಟಿ.ಎನ್.,

'ನಾವಿಬ್ಬರೂ ಸ್ವಂತ ಇಷ್ಟದಿಂದ ನಮ್ಮ ದೇಹಗಳನ್ನು ಮೈಸೂರಿನ ಜೆ.ಎಸ್.ಎಸ್. ಆಸ್ಪತ್ರೆಗೆ ದಾನವಿತ್ತಿದ್ದೇವೆ. ನಮ್ಮ ಮರಣವಾರ್ತೆಯನ್ನು ಬಿತ್ತರಿಸಬಾರದೆಂದೂ, ಮರಣಾನಂತರ ಕರ್ಮಾಂತರಾದಿ ಅಪರಕ್ರಿಯೆಗಳನ್ನಾಗಲೀ, ವಾರ್ಷಿಕ ತಿಥಿಗಳನ್ನಾಗಲೀ, ಮಾಡಬಾರದೆಂದೂ ಮಕ್ಕಳಿಗೆ ಲಿಖಿತ ನಿರ್ದೇಶನವಿತ್ತಿದ್ದೇವೆ. ಸದಾ ವರ್ತಮಾನದಲ್ಲಿ ಪ್ರೀತಿ, ನೀತಿಯುತವಾಗಿ ಬಾಳುವಾತ ನಿತ್ಯಸುಖಿ ಎಂಬುದನ್ನು ಬದುಕು ನನಗೆ ಕಲಿಸಿದೆ.'

ಮೂವರು ಗಂಡುಮಕ್ಕಳು, ನಾಲ್ವರು ಮೊಮ್ಮಕ್ಕಳು, ಪ್ರೀತಿಯ ಪತ್ನಿ, ಸುಖೀ ಜೀವನ ನಡೆಸುತ್ತಿರುವ ಜಿ.ಟಿ.ಎನ್.ರ ಈ ನಿಲುವಿಗೆ ಪ್ರತಿಕ್ರಿಯಿಸಲು ಸೂಕ್ತ ಪದಗಳೆಲ್ಲಿವೆ? ಆರ್ದ್ರ ಮನಸ್ಸಿನಿಂದ, ತುಂಬು ಗೌರವದಿಂದ, ಬೆನ್ನುಡಿ ಬರೆದ ಭಟ್ಟರು ಹಾರೈಸಿದಂತೆ ನಾವೂ ಹಾರೈಸಬಹುದಷ್ಟೇ, 'ನೂರ್ಕಾಲ ಬಾಳಿರ್ಲೆ ಅತ್ರಿಸೂನು.'

**ವಸುಮತಿ ಉಡುಪ**
'ಅಮೂಲ್ಯ', ನಂ. ೧೨೦, ೩ನೇ ಕ್ರಾಸ್, ವಿಜಯನಗರ ರೈಲ್ವೆ ಬಡಾವಣೆ, ಮೈಸೂರು - ೫೭೦ ೦೧೬

ವಿಶಿಷ್ಟ ಜಾನಪದ ಪ್ರತಿಭೆ



# ಜೋಗತಿ ಮಂಜವ್ವ

**ಪರಮೇಶ್ವರಯ್ಯ ಸೊಪ್ಪಿಮಠ**

**ಬ**ಳ್ಳಾರಿ ಜಿಲ್ಲೆ ಮರಿಯಮ್ಮನ ಹಳ್ಳಿಯ ಹತ್ತಿರದ ಗೊಲ್ಲರಹಳ್ಳಿಯ ಜೋಗತಿ ಮಂಜವ್ವ ನಮ್ಮ ನಾಡಿನಲ್ಲಿ ಜೋಗತಿ ನೃತ್ಯವನ್ನು ಅತ್ಯದ್ಭುತವಾಗಿ ಮಾಡುವವರಲ್ಲಿ ಈಗ ಉಳಿದಿರುವ ಏಕೈಕ ಪ್ರತಿಭೆ.

'ಹುಟ್ಟಿ ಬಂದೆ ಯಲ್ಲಮ್ಮನಾಗಿ ನಿನ್ನ ಕೊಟ್ಟರವ್ವ ಜಮದಗ್ನಿಗೆ, ಎಲ್ಲು ಕಾಣೆ ಎಲ್ಲೂ ಕಾಣೇ ಎಲ್ಲವ್ವನಂತರೋ ಎಲ್ಲಿ ಕಾಣೆ ಎಲ್ಲಿ ಕಾಣೇ' ಎಂದು ಎಲ್ಲರ ಅಮ್ಮನಾದ ಯಲ್ಲಮ್ಮನನ್ನು ಸ್ತುತಿಸುತ್ತಾ ಹಾಡಿ ಕುಣಿಯುವ ಜೋಗತಿ ಪರಂಪರೆಗೆ ಒಂದು ಜನಪದ ಕಲೆಯ ರೂಪಕೊಟ್ಟವರು ಜೋಗತಿಯರು. ಚೌಡಿಕಿ ಪದಗಳು, ದೇವಿ ಪದಗಳು, ಜೋಗತಿ ನೃತ್ಯ, ದೇವಿ ಕೊಡ ಹೊತ್ತು ಕುಣಿಯುತ್ತಾ, ನಾಟಕಗಳ ಮೂಲಕ ಅದನ್ನು ರಂಗ ಪರಂಪರೆಗೆ ಅಳವಡಿಸಿದ ಕೀರ್ತಿಯೂ ಇವರಿಗೆ ಸಲ್ಲತಕ್ಕದ್ದು.

ಚಿವುಟಿಗೆ ವಾದ್ಯ ಹಿಡಿದು ಜೋಗಮ್ಮನ ಹಾಡು ಹೇಳುತ್ತಾ ಊರೂರಲ್ಲಿ ಭಿಕ್ಷೆ ಬೇಡುವ, ಸಂತೆ, ಹಬ್ಬ, ಜಾತ್ರೆಗಳಲ್ಲಿ ಕಾಸಿಗಾಗಿ ಪರದಾಡುವ ಈ ಜೋಗಮ್ಮಗಳು ಅಸಾಧಾರಣ ಕಲಾವಂತರು. ತಲೆ ಮೇಲೆ ಕೊಡ ಹೊತ್ತು ವಿವಿಧ ಭಂಗಿಗಳಲ್ಲಿ ನೃತ್ಯ ಮಾಡುತ್ತಾ ಇವರು ಹಾಡುವ ದೃಶ್ಯ ರೋಮಾಂಚನಕಾರಿಯಾದುದು. ನಾಡಿನ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಇವರ ಕೊಡುಗೆ ಹಿರಿದಾದುದು. ಹಾಗಾಗಿ ಸಾಹಿತ್ಯಾಸಕ್ತರ ಮನಸೂರೆಗೊಳ್ಳುವಲ್ಲಿ ಜೋಗತಿಯರ ನೃತ್ಯ ಯಶಸ್ವಿಯಾಗಿದೆ.

ಜೋಗತಿ ಕಲೆಯು ತನ್ನದೇ ಆದ ಸಾಂಸ್ಕೃತಿಕ ಮತ್ತು ಸಾಹಿತ್ಯಿಕ ಸತ್ವವನ್ನು ಕನ್ನಡ ನಾಡಿನಲ್ಲಿ ಉಳಿಸಿ ಬೆಳೆಸಿಕೊಂಡು ಬಂದಿದೆ. ಜೊತೆಗೆ, ಇಂದಿನ ಯಾಂತ್ರಿಕ ಬದುಕಿನ ಜಂಜಾಟದಲ್ಲೂ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಸದಾ ಹೋರಾಡುತ್ತಿದೆ. ಗಂಡು ಜೋಗತಿಯರು ನಮ್ಮ ಸಮಾಜದ ಹಲವಾರು ಅಪಮಾನ, ಸಮಸ್ಯೆಗಳ ನಡುವೆಯೂ ತಮ್ಮ ಜೀವನಾಧಾರವಾದ ಜೋಗತಿ ಕಲೆ ಶ್ರೀಮಂತಗೊಳಿಸುವಲ್ಲಿ ಪ್ರಯತ್ನಿಸುತ್ತಿದ್ದಾರೆ. ಅನಾಥ ಸಮುದಾಯದ ಕಲಾ ಪರಂಪರೆಗಳಲ್ಲಿ ಒಂದಾದ ಜೋಗತಿ ಕಲೆ ಸಾಮಾಜಿಕ ನಿರ್ಲಕ್ಷ್ಯಕ್ಕೆ ಒಳಗಾಗಿರುವುದೇ ಹೆಚ್ಚು. ಈ ಕಲೆಗೆ ನಿಜವಾದ ಬೆಲೆ ದೊರಕುತ್ತಿಲ್ಲ. ಇಂಥ ಸನ್ನಿವೇಶಗಳ ನಡುವೆ ತನ್ನದೇ ಆದ ಕೊಡುಗೆ ನೀಡುತ್ತಾ ಜೋಗತಿಯರಿಗೆ ಒಂದು ವಿಶಿಷ್ಟ ಸ್ಥಾನ ಕಲ್ಪಿಸಿದ ಮಂಜವ್ವ ಜೋಗತಿಯನ್ನು ಪ್ರಶಂಸಿಸಲೇಬೇಕು.

ಬಳ್ಳಾರಿಯ ಕಲ್ಲುಕಂಬದಲ್ಲಿ ಹನುಮಂತ ಶೆಟ್ಟಿ ಹಾಗೂ ಜಯಲಕ್ಷ್ಮಿಯವರ ಮಗುವಾಗಿ ಮಂಜುನಾಥ ೧೯೬೪ರಲ್ಲಿ ಜನಿಸಿದನು. ವಿಶೇಷವೆಂದರೆ ಇವನ ತಾಯಿಗೆ ೨೧ ಜನ ಮಕ್ಕಳು. ಅವರಲ್ಲಿ ಬದುಕುಳಿದವರು ೪ ಜನ ಮಾತ್ರ. ಅವರಲ್ಲಿ ಮಂಜುನಾಥ ಕೂಡ ಒಬ್ಬ. ತಂದೆ ದಾವಣಗೇರಿ ಸಕ್ಕರೆ ಕಾರ್ಖಾನೆಯಲ್ಲಿ ಕೆಲಸ ಮಾಡುತ್ತಿದ್ದರಿಂದ ಅಲ್ಲಿನ ಕುಕವಾಡದಲ್ಲಿ ೧ರಿಂದ ೧೦ನೇ ತರಗತಿವರೆಗೆ ವಿದ್ಯಾಭ್ಯಾಸ ನಡೆಯಿತು. ೧೦ನೇ ತರಗತಿ ನಂತರ ಒಂದೂವರೆ ವರ್ಷ ಪಿಗ್ಮಿ ಕಲೆಕ್ಷನ್ ಕೆಲಸವನ್ನು ಮಾಡಿದ್ದಾನೆ. ವಿಚಿತ್ರವೆಂದರೆ ೧೯೮೫ರಲ್ಲಿ ಮಂಜುವಿನ ದೇಹದಲ್ಲಿ ಬದಲಾವಣೆಯಾಯಿತು. ಹಾಗಾಗಿ ಮೊದಲು ಮನೆಯವರನ್ನೆಲ್ಲ ಒಪ್ಪಿಸಿ ಹುಲಗಿಯಲ್ಲಿ ಪೂಜಾರಿ ಬಾಳಪ್ಪನವರಿಂದ ಜೋಗತಿಯಾದಳು. ಅಲ್ಲಿಂದ ಮಂಜುನಾಥ ಶೆಟ್ಟಿ ಮಂಜವ್ವ ಜೋಗತಿಯಾದಳು.

ಮನೆಗೆ ಮರಳಿದ ನಂತರ ಮನೆಯವರು ಸುತ್ತಮುತ್ತಲವರು ಈಕೆ ಮಾಡಲಾರದ ತಪ್ಪಿಗೆ ಮಂಜಮ್ಮನನ್ನೆ ಶಪಿಸುತ್ತಾ, ದೂರ ಮಾಡಿ ಅವಮಾನ ಮಾಡಹತ್ತಿದರು. ಇದರಿಂದ ಸಾಕಷ್ಟು ಮನನೊಂದು ಈಕೆ ಜೀವನವೇ ಸಾಕು ಎಂದು ವಿಷ ಸೇವಿಸಿ ೧೫ ದಿವಸ ಆಸ್ಪತ್ರೆಯಲ್ಲಿದ್ದು ಬದುಕಿಬಂದಳು. ನಂತರ ಮನೆಯವರು ಈಕೆಯನ್ನು ಹೊರಗಟ್ಟಿದರು. ಆಶ್ರಯಕ್ಕೆ ಅಲೆದಲೆದು ಕೊನೆಗೆ ದಾವಣಗೇರಿಯ ದೇವಸ್ಥಾನದಲ್ಲಿ ಕೆಲವು ಕಾಲ ವಾಸವಾಗಿದ್ದಾಳೆ, ಆ ಸಮಯದಲ್ಲಿ ಪಡಲಗಿ ತೆಗೆದುಕೊಂಡು ದಿನಪೂರ್ತಿ ಹಾಡುತ್ತ ಬಂದ ಹಣದಲ್ಲಿ ಜೀವನ ನಡೆಸಹತ್ತಿದಳು.

ಆಗ ಈಕೆಯನ್ನು ಮಟ್ಟಕಲ್ಲಿನ ಬಸಪ್ಪ ಗಮನಿಸಿದ್ದಾರೆ. ಆತನು ತನ್ನ ಮಗನ ಜೊತೆ ಹೊಟ್ಟೆಪಾಡಿಗಾಗಿ ದೇವರು ಹೊತ್ತುಕೊಂಡು ಬೀದಿ ಬೀದಿ ನೃತ್ಯ ಮಾಡುತ್ತಾ ಜೀವನ ಸಾಗಿಸುತ್ತಿದ್ದಾರೆ. ಮಂಜವ್ವ ಅವರ ಜೊತೆ ಸೇರಿ ನೃತ್ಯವನ್ನು ಕಲಿಯುತ್ತಾ, ಪ್ರದರ್ಶನ ಮಾಡುತ್ತಾ ಕೆಲವು ಕಾಲ ಕಳೆದಿದ್ದಾಳೆ. ಅಲ್ಲಿಂದ ನೇರವಾಗಿ ಕೂಡ್ಲಿಗಿಯ ಚಿಲಕನಹಟ್ಟಿಗೆ ಬಂದಳು. ಅಲ್ಲಿಯೇ ಈಕೆಯ ಭಾಗ್ಯದ ಬಾಗಿಲು ತೆರೆದದ್ದು, ಕಾಳವ್ವ ಜೋಗತಿ ಪರಿಚಯವಾದದ್ದು.

ಜೋಗತಿ ಕಾಳವ್ವ ಜೋಗ್ತಿ ಕುಣಿತದಲ್ಲಿ ರಾಜ್ಯದಲ್ಲಿ ಪ್ರಖ್ಯಾತಿ ಪಡೆದಿರುವಾಕೆ. ಆಕೆಯ ಕಲಾ ಪ್ರತಿಭೆ ಗುರುತಿಸಿ ಸರ್ಕಾರ ೨೦೦೧ರಲ್ಲಿ ರಾಜ್ಯೋತ್ಸವ ಪ್ರಶಸ್ತಿ ನೀಡಿ ಗೌರವಿಸಿದೆ. ಇಂಥ ಕಾಳವ್ವ ಮಂಜವ್ವ ಜೋಗತಿಯನ್ನು ಕರೆದುಕೊಂಡು ಬಂದು ಹಾಡು ಕಲಿಸಿ ಅವಳು ಹೊಸಜೀವನಕ್ಕೆ ಕಾಲಿರಿಸಲು ಸಹ ನೆರವಾದಳು. ಅಂಥ ಜೋಗತಿ ಕಾಳವ್ವನ ಗರಡಿಯಲ್ಲಿ ಸಂಪೂರ್ಣವಾಗಿ ಪಳಗಿದ ಮಂಜವ್ವ ನೃತ್ಯ ಮಾಡುವ ಕಲೆಯನ್ನು ಕರಗತ ಮಾಡಿಕೊಂಡಳು. ಕಾಳವ್ವ ತಂಡದ ಕಾಯಂ ಸದಸ್ಯಳಾದ ಮಂಜವ್ವ ಮೊದಲ ಬಾರಿಗೆ ಹಾರನಹಳ್ಳಿ ಊರಮ್ಮ ಜಾತ್ರೆಯಲ್ಲಿ ಬಣ್ಣ ಹಚ್ಚಿಕೊಂಡು ನಾಟಕಕ್ಕೆ ಧುಮುಕಿದಳು ಮತ್ತು ಅಲ್ಲಿಂದ ಹಿಂತಿರುಗಿ ನೋಡಿಯೇ ಇಲ್ಲ.

ಕಾಳವ್ವ ಜೋಗತಿಯ ನಂತರ ಆ ತಂಡದಲ್ಲಿ ಮಿಂಚುವ ವ್ಯಕ್ತಿತ್ವ ಎಂದರೆ ಮಂಜಮ್ಮ ಜೋಗತಿಯದು. ಇವರೆಲ್ಲ ಸೇರಿಕೊಂಡು ದೇವಿ ನಾಟ್ಯ ಕಲಾ ಸಂಘ ಎಂಬ ಕಲಾತಂಡ ಕಟ್ಟಿಕೊಂಡರು. ತಂಡ ರೇಣುಕಾದೇವಿ ಹಾಗೂ ಬಡವಿ ಲಕ್ಕಮ್ಮ ಅವರ ನಾಟಕಗಳನ್ನು ರಾಜ್ಯದ ಎಲ್ಲ ಭಾಗಗಳಲ್ಲಿ ಆಡಿ ಸಾವಿರಾರು ಪ್ರದರ್ಶನಗಳನ್ನು ಮಾಡಿದೆ. ನಾಟಕಗಳಲ್ಲಿ ಗಂಡು, ಹೆಣ್ಣು ಯಾವುದೇ ಪಾತ್ರಗಳಲ್ಲಿ ಲೀಲಾಜಾಲವಾಗಿ ಅಭಿನಯಿಸುವ ಮಂಜವ್ವನ ಕಲಾವಂತಿಕೆ ಮೆಚ್ಚದವರೇ ಇಲ್ಲ. ಪುರುಷನಲ್ಲದಿದ್ದರೂ ನಾಟಕಗಳಲ್ಲಿ ಪರಶುರಾಮನ ಪಾತ್ರ ಮಾಡಿ ಗಂಡುರೂಪ ಪಡೆದ ತೃಪ್ತಿ ಆಕೆಗಿದೆ. ಅದರಲ್ಲೂ ಗೌಡಶಾನಿ ಪಾತ್ರ ಆಕೆಗೆ ಹೆಚ್ಚು ಸಂತಸ ನೀಡಿದ ಪಾತ್ರ.

ಮಂಜಮ್ಮ ಜೋಗತಿ ಹಾಗೂ ಅವರ ತಂಡದಿಂದ ಧಾರವಾಡ, ಹೊಸಪೇಟೆ ಆಕಾಶವಾಣಿಯಲ್ಲಿ, ಚಂದನ ದೂರದರ್ಶನದಲ್ಲಿ ಅನೇಕ ಕಾರ್ಯಕ್ರಮಗಳು ಪ್ರಸಾರವಾಗಿವೆ. ಅಲ್ಲದೆ ಹಂಪಿ ಉತ್ಸವ, ನವರಸಪುರ ಉತ್ಸವ, ರಾಜ್ಯದ ಅನೇಕ ಕಡೆಯ ಜಾನಪದ ಜಾತ್ರೆ, ಬೀದರ ಉತ್ಸವ, ಸುವರ್ಣ ಕರ್ನಾಟಕದ ರಾಜ್ಯ ಕಾರ್ಯಕ್ರಮ, ಮೂಡಬಿದರೆ ಅಳ್ವಾಸ್ ನುಡಿಸಿರಿ, ಸೇರಿದಂತೆ ಎಲ್ಲ ಭಾಗಗಳಲ್ಲೂ ತಮ್ಮ ಕಲೆಯನ್ನು ಪ್ರಚುರ ಮಾಡಿಸಿದ್ದಾರೆ. ಆರೋಗ್ಯ ಇಲಾಖೆಯವರು

**ಜೋಗತಿ ನೃತ್ಯದಲ್ಲಿ ಮಂಜವ್ವ ಎತ್ತಿದ ಕೈ. ತನ್ನ ನೃತ್ಯದ ವಿವಿಧ ಭಂಗಿಗಳಿಂದ ಎಂಥವರನ್ನಾದರೂ ಮಂತ್ರಮುಗ್ಧಗೊಳಿಸಬಲ್ಲಳು. ಆಕೆಯ ಕಲೆಗೆ ಹಿಡಿದ ಕನ್ನಡಿ ಎಂಬಂತೆ ಈ ವರ್ಷ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಪ್ರಶಸ್ತಿ ಪಡೆದದ್ದನ್ನು ಕುರಿತು ಬೆಳಕು ಚೆಲ್ಲುವ ಕಿರುಪ್ರಯತ್ನವಿದು.**

ಏಡ್ಸ್, ಗರ್ಭಿಣಿ ಸ್ತ್ರೀ, ಆರೋಗ್ಯ ಮತ್ತು ಪರಿಸರ ನೈರ್ಮಲ್ಯ, ಪಲ್ಸ್ ಪೋಲಿಯೊ, ಸಂತಾನಹರಣ ಮುಂತಾದ ಸಮುದಾಯದಲ್ಲಿ ಅರಿವು ಮೂಡಿಸುವ ಕಾರ್ಯಕ್ರಮಗಳಿಗೆ ಇವರ ಕಲೆ ಬಳಸಿದ್ದು, ಅವು ಯಶಸ್ವಿಯಾದ್ದಕ್ಕೆ ಮಂಜಮ್ಮನಿಗೆ ಅಪಾರ ಸಂತಸವಾಗಿದೆ.

ನಶಿಸಿಹೋಗುತ್ತಿರುವ ಹಳೆಯ ಪ್ರಕಾರದ ಗ್ರಾಮೀಣ ಜನಪದ ಕಲೆ, ಸಂಸ್ಕೃತಿಯನ್ನು ಗುರುತಿಸಿ ಉಳಿಸಿಕೊಂಡು ಮುಂದಿನ ಪೀಳಿಗೆಗೆ ಕೊಂಡೊಯ್ಯುವ ದೃಷ್ಟಿಯಿಂದ ಜಿಲ್ಲಾ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಗುರುಶಿಷ್ಯ ಪರಂಪರೆ ಯೋಜನೆ ಅಡಿಯಲ್ಲಿ ವಿಶೇಷವಾಗಿ ಈ ಜೋಗತಿ ನೃತ್ಯಕಲೆಯನ್ನು ಪ್ರೋತ್ಸಾಹಿಸಲು ಜೋಗತಿಯರಿಗೆ ೬ ತಿಂಗಳ ತರಬೇತಿ ನಡೆಸಿದೆ. ಆ ತರಬೇತಿ ತಂಡದ ಮುಖ್ಯಸ್ಥೆಯಾಗಿ ಮತ್ತು ತರಬೇತಿದಾರಳಾಗಿ ಮಂಜಮ್ಮ ೧೨ ಜನ ಜೋಗತಿಯರಿಗೆ ತರಬೇತಿ ನೀಡಿದ್ದಾಳೆ. ತಮ್ಮ ಬಗ್ಗೆ ಕೀಳಾಗಿ ಪರಿಗಣಿಸುವ ಸಮಾಜವೇ ತಮ್ಮ ಕಲೆಯನ್ನು ಪ್ರೀತಿಸುವುದು ಕಂಡು ಅಚ್ಚರಿಪಡುತ್ತಾಳೆ ಈ ಮಂಜವ್ವ.

ಈ ಬಾರಿ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಪ್ರಶಸ್ತಿ ಬಂದದ್ದಕ್ಕಾಗಿ ಏನು ಅನಿಸಿದೆ ಎಂದು ಕೇಳಿದರೆ, ಮಂಜಮ್ಮನು "೨೨ ವರ್ಷಗಳಿಂದ ಜೋಗತಿ ನೃತ್ಯ ಮಾಡುತ್ತಿದ್ದೇನೆ. ಈವರೆಗೂ ನನಗೆ ಯಾವ ಪ್ರಶಸ್ತಿಗಳೂ ಬಂದಿಲ್ಲ. ಅಲ್ಲದೆ ಎಲ್ಲಿಯೂ ಯಾರಿಗೂ ನಾನು ಪ್ರಶಸ್ತಿಗಾಗಿ ಬೇಡಿಲ್ಲ. ನಾನು ದುಡಿದದ್ದು ಸತ್ಯವಿದ್ದರೆ ಅದಕ್ಕೆ ಬೆಲೆ ಬಂದೇ ಬರುತ್ತದೆ. ಈಗ ಅದಾಗಿ ಬಂದಿರುವುದಕ್ಕೆ ಹೇಳಲಾರದಷ್ಟು ಸಂತೋಷವಾಗಿದೆ. ಈ ವರ್ಷ ಪ್ರಶಸ್ತಿಗೆ ಆಯ್ಕೆಯಾದವರನ್ನು ನೋಡಿದರೆ ಅತ್ಯಂತ ಚಿಕ್ಕವಯಸ್ಸಿನವಳು ನಾನು, ಅದಕ್ಕಿಂತ ಹೆಮ್ಮೆ ಮತ್ತೇನಿದೆ ಹೇಳಿ" ಎನ್ನುತ್ತಾಳೆ. ತನ್ನ ಗುರುಮಾತೆ ದಿ॥ ಕಾಳಮ್ಮ ಜೋಗತಿ ಹಾಗೂ ತಂಡದ ಆಶೀರ್ವಾದದ ಫಲವಿದು ಎನ್ನುತ್ತಾಳೆ. ತನ್ನ ಬೆಳವಣಿಗೆಗೆ ನೆರವು ನೀಡಿದ ಜಾನಪದ ಲೋಕದ ದಿ॥ ಹೆಚ್. ಎಲ್. ನಾಗೇಗೌಡರನ್ನು, ಪತ್ರಕರ್ತರಾದ ಗುಡಿಹಳ್ಳಿ ನಾಗರಾಜ ಹಾಗೂ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಕೊಟ್ಟಪ್ಪನವರನ್ನು ಮರೆಯದೆ ಸ್ಮರಿಸಿಕೊಳ್ಳುತ್ತಾಳೆ.

ನಮ್ಮ ಸಮಾಜದಲ್ಲಿ ಜೋಗತಿಯರನ್ನು ಕಂಡರೆ ಗೌರವ ಭಾವನೆಯಿಂದ ಕಾಣುವವರಿಗಿಂತ ಹಿಂಜರಿಯುವವರೆ ಹೆಚ್ಚು. ವಿಚಿತ್ರವಾಗಿ ಕಾಣುವ ಕೀಳರಿಮೆಯಿಂದ ಮೂಗು ಮುರಿಯುವವರಿಗೇನೂ ನಮ್ಮಲ್ಲಿ ಕೊರತೆ ಇಲ್ಲ. ಅತ್ತ ಪುರುಷರೂ ಅಲ್ಲ, ಇತ್ತ ಸ್ತ್ರೀಯರೂ ಅಲ್ಲದೆ ಇರುವ ಇಂತಹವರಲ್ಲಿನ ಕಲಾಪ್ರತಿಭೆ ಕುರಿತು ಮೆಚ್ಚುಗೆ ಮಾತನಾಡುವವರು ತುಂಬ ವಿರಳವೆನ್ನಬಹುದು. ಹಾಗಾಗಿ ಇಂದು ಜೋಗತಿ ವೇಷದಲ್ಲಿ ಬದುಕುವುದು ಅವರಿಗೆ ಬಹಳ ಕಷ್ಟವಾಗಿದೆ. ಅವರ ಬದುಕಿನ ಬವಣೆಯನ್ನು ಕೇಳುವವರಾರೂ ಇಲ್ಲದಂತಾಗಿದೆ. ಅಲ್ಲದೆ ಚುಡಾಯಿಸುವುದೂ ಸೇರಿದಂತೆ ಅನೇಕ ಬಗೆಯ ಅಪಮಾನಗಳಿಗೆ ಒಳಗಾದ ಪ್ರಸಂಗಗಳು ದಿನನಿತ್ಯ ನಡೆಯುತ್ತಲೇ ಇರುತ್ತವೆ. ಕೆಲವು ಬಾರಿ ವಿಕೋಪಕ್ಕೆ ಹೋಗಿ ಜಗಳಗಳಾದ ಉದಾಹರಣೆಗಳೂ ಉಂಟೆಂದು ಮಂಜಮ್ಮ ಜೋಗತಿ ನೊಂದು ನುಡಿಯುತ್ತಾರೆ.

ಮಂಜಮ್ಮ ಜೋಗತಿ ಸೇರಿದಂತೆ ಜೋಗತಿಯರ ಆರ್ಥಿಕ ಪರಿಸ್ಥಿತಿ ಇಂದು ತೀರ ಕೆಳಮಟ್ಟದಲ್ಲಿದೆ. ಮೊದಲಿಗೆಲ್ಲ ಹಳ್ಳಿಗಳಲ್ಲಿ ರೈತರು ದವಸ-ಧಾನ್ಯಗಳನ್ನು ಉದಾರವಾಗಿ ದಾನ ಕೊಡುತ್ತಿದ್ದರು. ಆದರೆ ಇಂದು ರೈತರು ಸಂಕಟದಲ್ಲಿರುವಾಗ ಇವರ ಬಗ್ಗೆ ಅನುಕಂಪ ತೋರಿಸುವವರಾರು ? ಹಾಗಾಗಿ ಇವರ ಜೀವನ ದಿನದಿಂದ ದಿನಕ್ಕೆ ದುಸ್ತರವಾಗುತ್ತಿದೆ. ಕಲಾ ಪ್ರದರ್ಶನಕ್ಕೆ ಕರೆಬಂದಾಗ ಕರೆದಲ್ಲಿಗೆ ಹೋಗಿ ಪ್ರದರ್ಶನ ಮಾಡಿ ಅವರು ಕೊಡುವ ಸ್ವಲ್ಪ ಹಣವನ್ನು ಹಂಚಿಕೊಂಡು ಜೀವನ ಸಾಗಿಸಬೇಕು. ಇಲ್ಲವೇ ಸಂತೆ, ಜಾತ್ರೆ, ಹಬ್ಬಗಳಲ್ಲಿ ಹಣವನ್ನು ಬೇಡಬೇಕು. ಒಟ್ಟಾರೆಯಾಗಿ ಅವರ ಜೀವನ ನೋವಿನಿಂದ ಕೂಡಿದೆ ಎನ್ನಬಹುದು. ಇದರ ಪರಿಣಾಮವಾಗಿ ಅನೇಕರು ಈ ಜನಪದ ಕಲೆಯಿಂದ ದೂರವಾಗುತ್ತಿದ್ದಾರೆ ಎಂಬ ಅಳಲು ಮಂಜವ್ವ ಜೋಗತಿಯದು.

ಈ ಕಲೆ ಕೆಲವರಲ್ಲಿ ಮಾತ್ರ ಉಳಿದಿರುವುದರಿಂದ ಸರ್ಕಾರ, ಸಂಘ ಸಂಸ್ಥೆಗಳು ಅದನ್ನು ಅಳಿಯಲು ಬಿಡಬಾರದು. ಜೋಗತಿ ಸಮುದಾಯಕ್ಕೆ ಸೂಕ್ತ ಸ್ಥಾನಮಾನಗಳನ್ನು ಕೊಡಬೇಕು. ಈ ವಿಶೇಷ ಕಲಾಪರಂಪರೆಗೆ ಅಸ್ತಿತ್ವ ಕಲ್ಪಿಸಿಕೊಡುತ್ತಾ ನಮ್ಮವರಲ್ಲಿ ಆತ್ಮವಿಶ್ವಾಸ ತುಂಬುವ ಕೆಲಸ ಆಗಬೇಕಿದೆ. ಇವೆಲ್ಲಕ್ಕಿಂತ ಮೊದಲು ಆಶ್ರಯಕ್ಕಾಗಿ ಒಂದು ಮನೆ, ಜೀವನಕ್ಕಾಗಿ ಒಂದು ಮಾಸಾಶನವನ್ನು ಸರ್ಕಾರ ತಕ್ಷಣ ಮಂಜೂರು ಮಾಡಬೇಕು. ನಾನೂ ಸೇರಿದಂತೆ ಎಲ್ಲ ಜೋಗತಿಯರಿಗೂ ಸರ್ಕಾರ ಸಹಾಯ ಹಸ್ತ ನೀಡಬೇಕು ಎಂದು ಮಂಜವ್ವ ಜೋಗತಿ ಆಶಿಸುತ್ತಾಳೆ. ಆ ಆಸೆ ನೆರವೇರುವುದೆಂದು ?

(ಜೋಗತಿ ಮಂಜಮ್ಮನ ಪ್ರದರ್ಶನ ಏರ್ಪಡಿಸುವವರು ೯೪೪೯೪೬೪೦೭೫ನಲ್ಲಿ ಸಂಪರ್ಕಿಸಬಹುದು.)

**ಪರಮೇಶ್ವರಯ್ಯ ಸೊಪ್ಪಿಮಠ**
ಶಿಕ್ಷಕರು, ಕೆ.ವಿ.ಓ.ಆರ್. ಕಾಲೊನಿ, ಹಗರಿಬೊಮ್ಮನಹಳ್ಳಿ ತಾಲೂಕು, ಬಳ್ಳಾರಿ ಜಿಲ್ಲೆ - ೫೮೩ ೨೧೨

## ಅಧಿಕಾರಶಾಹಿ



ಲಾಯಿಗಂಟಿನ ಅಂಗಿ
ತೊಟ್ಟ, ದಡಿ ಅಳಿಸಿಹೋದ ಮಣ್ಣ ಧೋತರ
ಇಜ್ಜೋಡು ಚಪ್ಪಲಿ
ಕೈಯಲ್ಲಿ ಸುರಳಿಸುತ್ತಿದ
ಹೊಲದ ಪಹಣಿ,
ಎಡತಾಕಿ ಸವೆದುಹೋದ ಮೊಣಕಾಲ ಚಿಪ್ಪು
ಎದೆಯಲ್ಲಿ ಸರಕಾರಿ ಕಚೇರಿಯ ರಣಭಯ !

ಹೆಬ್ಬೆಟ್ಟು, ಸಾಕ್ಷಿ, ಜಾಮೀನು
ಹೊಲದ ಕೇಸು
ಸೆರಗು ಒತ್ತಿ ಹಿಡಿದು
ಕಚೇರಿ ದಾಟುವ ಹೆಂಗಸರ ಎದೆಯಲ್ಲಿ
ಬೂಟು ಲಾಟಿಗಳ ಭಯ !

ಎಮ್ಮೆ ಮೈ ತೊಳೆದು
ಎತ್ತುಗಳ ಗಳೆ ಹೂಡಿ
ನೆಲಕೆ ಮುತ್ತಿಕ್ಕಿ ಆಕಾಶ ಪ್ರೀತಿಸುವ ಜನ
ತುಂಡು ಭೂಮಿಯ ಜೊತೆಗೆ ಮಾತನಾಡುವ ಜನ
ಹೀರಿ ಬಿಟ್ಟವಲ್ಲೋ ಕಡತಗಳು
ನಿಮ್ಮ ಕನಸುಗಳ, ಸಂತೋಷಗಳ,
ದಿನ, ದಿನ, ಕ್ಷಣ, ಕ್ಷಣ,
ತೋರಿಸಬೇಕಿದೆ;
ನೀ ಕಟ್ಟಿದ ಗೋಡೆಗಳ ಕೆಡದು
ನಿನ್ನ ಹೊರಗೆಳದು
ಕಪಾಳಕ್ಕೆರಡು ಬಿಗಿದು,
ಕೈಯಲ್ಲಿ ಪಹಣಿ ಹಿಡಿದ
ನಿರ್ಜೀವ ಕಂಗಳ
ಭಯದಲಿ ಸೋತುಹೋದ
ತಾಯಂದಿರ ಮುಖಗಳ;
ತಡೆಯಲಾರಿರಿ
ಸಹನೆಯ ಕಟ್ಟೆ ಒಡೆದರೆ
ನುಗ್ಗಿ ಬರುವದು ಜನ
ಸಿಡಿಯುವುದು ಒಮ್ಮೆ
ಹತಾಸೆ ಬವಣೆ ಬೆಂಕಿಗಳ ನುಂಗಿ
ಕುದಿವ ನಮ್ಮೆದೆಯ ದಾವಾನಲ !

**ಬಸವರಾಜ ಹೂಗಾರ**
ಸಹಾಯಕ ನಿರ್ದೇಶಕ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ
ನಾಲ್ವಡಿ ಕೃಷ್ಣರಾಜ ಒಡೆಯರ್ ಕಲಾಮಂದಿರ
ವಿ. ವಿ. ರಸ್ತೆ, ಮಂಡ್ಯ - ೫೭೧ ೪೦೧

# ರಾವಣ ಖಳನೆ, ಪ್ರತಿನಾಯಕನೆ ?

'ತಿಣುಕಿದನು ಫಣಿರಾಯ ರಾಮಾಯಣದ ಭಾರದಲಿ' – ಎಂದು ಕನ್ನಡ ಕವಿಯೊಬ್ಬ ಹಾಡುವಷ್ಟರಮಟ್ಟಿಗೆ 'ರಾಮಾಯಣ'ದ ವಿವಿಧ ರೂಪಗಳು ಭಾರತದಲ್ಲಿ ಕಂಡುಬಂದಿವೆ. ಹೆಣ್ಣಿಗಾಗಿ ಕಲಹದ ಕಥೆಯು ಪಾಶ್ಚಿಮಾತ್ಯ ಪುರಾಣವೊಂದರಲ್ಲಿ (ಹೆಲನ್‌ಳ ಕತೆ) ಕಂಡುಬಂದಿರುವ ಸಾಮ್ಯ ಈ ಕೃತಿಯ ಮಹತ್ವವನ್ನು ಹೆಚ್ಚಿಸಿದೆ. ಹಿಂದೂ ಧರ್ಮದ ಅನಾಚಾರವನ್ನು ವಿರೋಧಿಸಿರುವ ಜೈನಧರ್ಮ 'ರಾಮಾಯಣ' ಕೃತಿಯನ್ನು ಸ್ವೀಕರಿಸಿ ತನ್ನದೇ ರಂಗು ನೀಡಿದೆ.

ರಾಮನೇನೋ ಕಥಾನಾಯಕ; ಆದರೆ, ರಾವಣ ? ರಾವಣನನ್ನು ಖಳನಾಯಕನೆಂದು ಕೆಲವು ಕೃತಿಗಳು ಬಿಂಬಿಸಿದ್ದಾವೆ. ಆದರೆ ಮತ್ತೆ ಕೆಲವು ಕೃತಿಗಳು ಆ ಪಾತ್ರದ ಉದಾತ್ತತೆಯನ್ನು ಮೆರೆದು ಆತನನ್ನು ಪ್ರತಿನಾಯಕ ಎಂಬಂತೆ ಬಿಂಬಿಸಿವೆ. ವಿಶೇಷವೆಂದರೆ ಯಾವ ರಾಮಾಯಣದ ರಾವಣನೂ ರಾಜನಾಗಿಯಾಗಲಿ ವ್ಯಕ್ತಿಯಾಗಿ ಆಗಲಿ ಚಲನಚಿತ್ರ, ನಾಟಕಗಳ ಖಳನಾಯಕರ ಹಾಗೆ ಸಕಲ ದುರ್ಗುಣಗಳ ಗಣಿಯಂತೂ ಅಲ್ಲ. ದುರ್ಗುಣಗಳು ಹೆಚ್ಚುತ್ತಿದ್ದ ಹಾಗೆಲ್ಲಾ ಪಾತ್ರದ ಅಸಹಜತೆಯೂ ಹೆಚ್ಚುತ್ತದೆ ಎಂಬುದು ಗಮನಿಸಬೇಕಾದ ಸಂಗತಿ. (ನಮ್ಮ ಎದುರಾಳಿಗಳ ಕೆಡುಕನ್ನೇ ಎತ್ತಿ ಆಡುವಾಗ ಅವರನ್ನು ಅಸಹಜ ಪಾತ್ರವಾಗಿಸುತ್ತಿದ್ದೇವೆಂಬ ಎಚ್ಚರ ನಮಗಿರಬೇಕಾಗುತ್ತದೆ !)



ಖಳನಾಯಕನನ್ನು ಪ್ರತಿನಾಯಕನನ್ನಾಗಿಸಲು ಕೆಲವು ಸಿದ್ಧ ವಿಧಾನಗಳಿವೆ.

೧. ಆತನು ಕೈಗೊಂಡ ಪ್ರಶಂಸನೀಯ ಕಾರ್ಯಗಳಿಗೆ ಒತ್ತು ನೀಡುವುದು.

೨. ಆತನು ಗೈದ ಅಪರಾಧವನ್ನು ಸಹಾನುಭೂತಿಯಿಂದ ನೋಡುವುದು.

೩. ಆತನು ಕೈಗೊಂಡ ಅಪಕಾರ್ಯಕ್ಕೆ ತಾರ್ಕಿಕ ಸಮರ್ಥನೆ ನೀಡುವುದು.

೪. ಆತನ ವರ್ತನೆ ಅನೀತಿಯದಾದರೂ ಅಸಹಜವಲ್ಲವೆಂದು ಹೇಳುವುದು.

೫. ಆತನು ಮಾಡಿದ ತಪ್ಪನ್ನು ಇತರರೂ ಮಾಡಿದರೆಂದು ತೋರಿಸುವುದು.

ಡಾ॥ ಡಿ.ವಿ.ಜಿ.ಯವರು ರಾವಣನನ್ನು ಪ್ರತಿನಾಯಕನನ್ನಾಗಿಯೋ ಉಪನಾಯಕನನ್ನಾಗಿಯೋ ಮಾಡಲು 'ಮಂಕುತಿಮ್ಮನ ಕಗ್ಗ'ದಲ್ಲಿ ಪ್ರಯತ್ನಿಸಿರುವುದು – ಈ ಹಿನ್ನೆಲೆಯಲ್ಲಿ ಪರಿಶೀಲನಾರ್ಹ. ಇಂತಹ ಉದ್ದೇಶವುಳ್ಳ ಎರಡು ಪದ್ಯಗಳನ್ನು ಗಮನಿಸೋಣ.

*ಜನಕಜೆಯ ದರುಶನದಿನಾಯ್ತು ರಾವಣ ಚಪಲ ।*
*ಕನಕಮೃಗ ದರುಶನದೆ ಜಾನಕಿಯ ಚಪಲ ॥*
*ಜನವವನನಿಂದಿಪುದು ಕನಿಕರಿಪುದಾಕೆಯಲಿ ।*
*ಮನದ ಬಗೆ ಅರಿಯದದು – ಮಂಕುತಿಮ್ಮ (೩೮೩)*

ಸೀತೆಯನ್ನು ನೋಡಿ ರಾವಣ ಆಶೆಗೊಳಗಾದ ನಿಜ; ಆದರೆ ಸೀತೆ ಏನು ಸಾಚಾ ? ಆಕೆಯೂ ಚಿನ್ನದ ಜಿಂಕೆಯನ್ನು ನೋಡಿ ಆಶೆಪಟ್ಟಳು. ಇಬ್ಬರೂ ಪಟ್ಟುದು ಆಸೆಯೇ ಆದರೂ ಜನರ ಪ್ರತಿಕ್ರಿಯೆ ಮಾತ್ರ ತದ್ವಿರುದ್ಧ. ರಾವಣನನ್ನು ಖಂಡಿಸುವ ಜನ ಸೀತೆಯನ್ನು ನೋಡಿ ಕನಿಕರಿಸುವುದೆಂತಹ ವಿಚಿತ್ರ !

ಈ ಮೊದಲು ಪ್ರಸ್ತಾಪಿಸಿದ ಐದನೆಯ ವರ್ಗದ ಪ್ರಯತ್ನ ಇದು. ರಾಮಾಯಣ ಕುರಿತಂತೆ ಡಿ.ವಿ.ಜಿ.ಯವರು ತೋರಿರುವ ವಿಶಿಷ್ಟ ಪ್ರತಿಕ್ರಿಯೆ ಇದಾಗಿ ಗಮನ ಸೆಳೆಯುತ್ತದೆ. ನಾಯಕಿಗೂ ನಾಯಕಿಯನ್ನು ಘಾಸಿಗೊಳಿಸುವ ಪಾತ್ರಕ್ಕೂ ಸಾಮಾನ್ಯ ಅಂಶವನ್ನು ಲೇಖಕರು ಗುರುತಿಸಿದ್ದಾರೆ.

ಮರು ಆಲೋಚಿಸುವಾ. ಅಪರಾಧದ ತೀವ್ರತೆಯನ್ನು ಅಪರಾಧಕ್ಕೆ ಕಾರಣವಾದ ಅಂಶವೊಂದರಿಂದಲೇ ನಿರ್ಧರಿಸಲು ಬರುವುದಿಲ್ಲ. ಬಸ್ಸಿನಲ್ಲಿ ಕುಳಿತಾತ ಚಾಲಕನ ಸಮೀಪದಲ್ಲೇ ತೂಕಡಿಸಿದರೆ ಅಪರಾಧವಲ್ಲ, ಆದರೆ ಚಾಲಕನು ತೂಕಡಿಸಿದರೆ ಅದು ಅನೇಕರ ಸಾವಿಗೆ ಕಾರಣವಾಗುವ ಅಪರಾಧ. ಸೀತೆಯು ಜಿಂಕೆಯನ್ನು ಆಸೆಪಟ್ಟ ಪರಿಣಾಮವಾಗಿ ಆ ಜಿಂಕೆಗೆ ತೊಂದರೆಯಾದೀತು. ಆದರೆ ಹೆಣ್ಣೊಂದನ್ನು ಅಪೇಕ್ಷೆಪಟ್ಟಾಗ ಆಕೆಯ ತವರಿನ ಮೇಲೆ, ಸೇರಿದ ಮನೆಯ ಮೇಲೆ ಅಲ್ಲದೆ ಆಕೆಯ ಸಂತತಿಯ ಮೇಲೂ ಪರಿಣಾಮವಾಗುವಂತಹುದು. ಅಂದರೆ ರಾವಣ ಹಾಗೂ ಸೀತೆಯ ಇಬ್ಬರ ಅಪರಾಧಗಳ ಕಾರಣ ದೃಷ್ಟಿಯಿಂದ ಹೆಚ್ಚೆಂದರೆ ಅವರಿಬ್ಬರ ಅಪರಾಧಗಳನ್ನು ಸಾಮ್ಯ ಅಪರಾಧಗಳೆನ್ನಬಹುದು. ಈ ಮಾತುಗಳನ್ನು ಹೇಳುತ್ತಿರುವ ಉದ್ದೇಶ ಸೀತೆಯ ಸಮರ್ಥನೆಯದಾಗಲಿ ರಾವಣನ ತೇಜೋವಧೆಯದಾಗಲಿ ಅಲ್ಲ. ಅಪರಾಧವನ್ನು ಅರ್ಥೈಸುವ ಕ್ರಮದಲ್ಲಿ ದುಡುಕಬಾರದೆಂಬುದನ್ನು ನೆನಪಿಸುವುದಷ್ಟೇ ಉದ್ದೇಶ.

ಈಗ ಡಿ.ವಿ.ಜಿ.ಯವರ ಇನ್ನೊಂದು ಸಮರ್ಥನೆಯನ್ನು ಗಮನಿಸೋಣ. ಈ ಸಮರ್ಥನೆ ಇನ್ನೂ ಕುತೂಹಲಕಾರಿಯಾದದ್ದು.

*ರಾವಣನ ಹಳಿವವನೆ, ಜೀವವನೆ ಬಿಸುಡಿಸುವ ।*
*ಲಾವಣ್ಯವೆಂತಹುದೊ ? ನೋವೆಂತಹುದೋ ?॥*
*ಬೇವಸವ ಪಟ್ಟುತಿಳಿ; ತಿಳಿದುಹಳಿಯುವಡೆ ಹಳಿ ।*
*ಗಾವಿಲನ ಗಳಹೇನು – ಮಂಕುತಿಮ್ಮ (೨೮೩)*

ರಾವಣನನ್ನು ಖಂಡಿಸುವಾತನೂ ಸೀತೆಯನ್ನು ನೋಡಿದ್ದರೆ ಆಸೆಗೆ ಒಳಗಾಗುತ್ತಿದ್ದನೇನೋ ! ಸೀತೆಯನ್ನು ಕಂಡಿರದವರು ರಾವಣನಿಗೆ ಸಂಯಮದ ಬೋಧೆ ಹೇಳುವುದು ಎಷ್ಟು ಸಮಂಜಸ ?

ಈ ಸಮರ್ಥನೆ ಈಗಾಗಲೇ ಪ್ರಸ್ತಾಪವಾದ ಐದು ಸಮರ್ಥನೆಗಳ ಪೈಕಿ ಮೂರನೆಯದು. ಇದನ್ನು ಅಸ್ತಿತ್ವವಾದಿ ಮನಶ್ಶಾಸ್ತ್ರದಿಂದ ಅರಿಯುವುದು ಸುಲಭ. ಮನುಷ್ಯನ ಒತ್ತಾಸೆಗಳು ಮೂಡುವುದು ಆತನ ದೈಹಿಕ ಅಗತ್ಯಗಳಾಗಿ (ಬಯೊಸ್) ಇಲ್ಲವೆ ಅವನ ಸಮಾಜಮುಖಿ ವ್ಯಕ್ತಿತ್ವದಿಂದಾಗಿ (ಲೊಗೊಸ್). ಪ್ರತಿಯೊಬ್ಬ ವ್ಯಕ್ತಿಯಲ್ಲೂ ಬಯೊಸ್ ಹಾಗೂ ಲೊಗೊಸ್ ಒತ್ತಾಸೆಗಳಿಗೆ ಸಂಘರ್ಷ ಶತಸ್ಸಿದ್ಧ. ಅಂದರೆ ಅತ್ಯಂತ ಸಹಜವಾಗಿ ನಡೆಯುತ್ತಿರುತ್ತದೆ. ರಾವಣನ ವರ್ತನೆಗೆ ಕಾರಣ ಆತನ ಬಯೊಸ್, ಲೊಗೊಸ್‌ನ ಮೇಲೆ ಸ್ಥಾಪಿಸಿದ ಅಧಿಕಾರದಿಂದಾಗಿ. ಹೀಗಾಗಿ, ರಾವಣನ ವರ್ತನೆ ನೈತಿಕವಾಗಿ ಖಂಡನೀಯವಾದಾಗ್ಯೂ ಮಾನವ ಸಹಜ ಒತ್ತಾಸೆಯಾಗಿ ಅರ್ಥಮಾಡಿಕೊಂಡು ಅನುಕಂಪ ತೋರುವಂತಹದು ಎಂಬಂಶ.

ಧರ್ಮಶಾಸ್ತ್ರ, ತರ್ಕ – ಮೊದಲಾದವುಗಳಲ್ಲಿ ವಿಶ್ವಾಸ ಇರುವವರಿಗೆ ಲೊಗೊಸ್ ಮೇಲೆ ವಿಶ್ವಾಸ ಹೆಚ್ಚು. ಎಲ್ಲ ಸಂದರ್ಭಗಳಲ್ಲಿಯೂ ಲೊಗೊಸ್‌ನ ಆಧಿಪತ್ಯ ಇರಬೇಕೆಂದು ಅವು ನಿರೀಕ್ಷಿಸುತ್ತವೆ. ಜೀವಶಾಸ್ತ್ರದ ನಿಯಮಗಳು ನೀತಿ ಶಾಸ್ತ್ರದಕ್ಕಿಂತ ಪ್ರಬಲವಾದವು ಎಂಬುದನ್ನು ಅವರು ಒಪ್ಪಲಾರರು. ಅದೇ ವರ್ಗಕ್ಕೆ ಸೇರಿದ ಡಿ.ವಿ.ಜಿ.ಯವರು 'ಬಯೊಸ್' ಆಗಿ ರಾವಣನ ವರ್ತನೆಯನ್ನು ಸಮರ್ಥಿಸಿರುವುದು ನಿಜಕ್ಕೂ ಬೆರಗು ಮೂಡಿಸುವಂತಹುದು.

ಯಥಾರ್ಥವನ್ನು ಕೇವಲ ನ್ಯಾಯದ ದೃಷ್ಟಿಯಿಂದ ನೋಡಿ ಕಟುವಾದ ನಿರ್ಣಯ ಕೈಗೊಳ್ಳುವುದು ನ್ಯಾಯ ನಿಷ್ಠುರತೆ. ವಾಸ್ತವತೆಯಿಂದ ಮನುಷ್ಯ ಸಹಜ ಸ್ವಭಾವದಿಂದ ಗಮನಿಸಿ ಸಹಾನುಭೂತಿ ತೋರಿಸುವುದು ಇನ್ನೊಂದು ಕ್ರಮ. ಮೊದಲನೆಯ ಕ್ರಮದಲ್ಲಿ ಕ್ರೌರ್ಯ ಸೇಡಿಗೆ ದಾರಿಯಾಗುವ ಅಪಾಯವಿದೆ. ಎರಡನೆಯ ಕ್ರಮದಲ್ಲಿ ಕ್ಷಮೆ ಸಹಾನುಭೂತಿ ಅಶಿಸ್ತಿಗೆ ದಾರಿಯಾಗುವ ತೊಂದರೆ ಇದೆ.

ಅಂತೂ ಎಲ್ಲ ಕಾಲದಲ್ಲಿಯೂ ಅಪರಾಧ ಸೃಷ್ಟಿಸುವ ಗೊಂದಲಗಳೇ ಅಲ್ಲದೆ ಅಪರಾಧಿಯೊಡನೆ ಹೇಗೆ ವರ್ತಿಸಬೇಕೆಂಬುದು ಎಲ್ಲ ಕಾಲದ ಸಮಸ್ಯೆ.

ಅಂತೂ ರಾವಣನ ವರ್ತನೆಯ ಆಂತರಿಕ ಮಗ್ಗುಲು ಹಾಗೂ ಬಾಹ್ಯ ಮಗ್ಗುಲುಗಳೆರಡನ್ನೂ ಸಹಾನುಭೂತಿಯಿಂದಲೇ ನೋಡಿರುವ ಡಿ.ವಿ.ಜಿ.ಯವರು 'ಕೇವಲ ನ್ಯಾಯವಾದಿಯಾಗಿರಬೇಡ, ಕರುಣೆಯನ್ನೂ ತೋರು' ಎಂಬ ನಿಲುವನ್ನು ತಳೆದಿರುವುದು ನಿಜಕ್ಕೂ ಅವರ ವ್ಯಕ್ತಿತ್ವದ ಹಿನ್ನೆಲೆಯಿಂದ ನೋಡಿದಾಗ ಬೆರಗುಹುಟ್ಟಿಸುವಂತಹುದು. 'ಮಂಕುತಿಮ್ಮನ ಕಗ್ಗ' – ಕಟ್ಟಾ ಸಂಪ್ರದಾಯವಾದಿಯ ನಿಲುವು ಎಂಬ ಸಾಧಾರಣೀಕರಣಕ್ಕೆ ಅಪವಾದಗಳನ್ನೂ ಹುಡುಕಲು ಸಾಧ್ಯ ಎಂಬುದಕ್ಕೆ ರಾವಣನನ್ನು ಡಿ.ವಿ.ಜಿ.ಯವರು ಸಮರ್ಥಿಸಿರುವ ಪರಿ ಪರಿಶೀಲನಾರ್ಹ !

**ಪ್ರೊ॥ ಎಮ್. ಆರ್. ನಾಗರಾಜು**

ಎಫ್-೩, ಎಸ್‌ಎಫ್‌ಎಸ್ ನಿವಾಸಗಳು, ೭ನೇ 'ಬಿ' ಅಡ್ಡರಸ್ತೆ, ಯಲಹಂಕ ಉಪನಗರ
ಬೆಂಗಳೂರು - ೫೬೦ ೦೬೪

**HOSATHU** Kannada Monthly / August 2007 Rs. 12
Registered CPMG / KA / BGE – 7 / 2006-08. Posted at Bangalore PSO on the 28th of every month
WPP No. 14. Licenced to post without prepayment. RNI Regn. No. KARKAN/1999/614.




ವ್ಯಕ್ತಿ ವಿಕಸನ ಮಾಲೆ



ಸಂಪಾದಕರು
ಡಾ|| ಸಿ. ಆರ್. ಚಂದ್ರಶೇಖರ್

ಆಯಾಯ ಕ್ಷೇತ್ರಗಳಲ್ಲಿ ಅನುಭವಿಗಳಾದ ಸಮರ್ಥ ಲೇಖಕರು ರಚಿಸಿರುವ 2ನೆಯ ಕಂತಿನ 25 ಅತ್ಯುತ್ತಮ ಕೃತಿಗಳು ಖ್ಯಾತ ಚಿತ್ರಕಾರರ ಸಂದರ್ಭೋಚಿತ ಚಿತ್ರಗಳ ಸಹಿತ. ತಲಾ ರೂ. 40 ಬೆಲೆಯ ಒಟ್ಟು ರೂ. 1000 ಮೌಲ್ಯದ ಪುಸ್ತಕಗಳು.

ಇಂದೇ ಬೇಡಿಕೆ ಸಲ್ಲಿಸಿ








'ಹೊಸತು' ಮೂರು ವರ್ಷದ ಚಂದಾದಾರರಿಗೆ ರಿಯಾಯಿತಿ ಬೆಲೆ ರೂ. 800 + ಅಂಚೆವೆಚ್ಚ ರೂ. 50



## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

ಎಂಬೆಸಿ ಸೆಂಟರ್, ನಂ. 11, ಕ್ರೆಸೆಂಟ್ ರಸ್ತೆ, ಅಂ. ಪೆ. ಸಂಖ್ಯೆ : 5159, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - 560 001
✆ : 22203580, 30578022 e-mail: navakarnataka@vsnl.com web : www.navakarnatakabooks.com